# ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ

ಅರ್ಥಶಾಸ್ತ್ರದ ವಿಷಯದಲ್ಲಿ ಪಿಎಚ್. ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಮಹಾಪ್ರಬಂಧ




ಸಂಶೋಧಕರು
ಅಶ್ವಥ್ ಯಾದವ್ ಜೆ.ಎಸ್.
ಬುಡಕಟ್ಟು ಅಧ್ಯಯನ ವಿಭಾಗ

ಮಾರ್ಗದರ್ಶಕರು
ಡಾ. ಎ. ಎಸ್. ಪ್ರಭಾಕರ
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ






ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೨೦

# ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ

ಅರ್ಥಶಾಸ್ತ್ರದ ವಿಷಯದಲ್ಲಿ ಪಿಎಚ್. ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

**ಅಶ್ವಥ್ ಯಾದವ್ ಜಿ.ಎಸ್.**

ಬುಡಕಟ್ಟು ಅಧ್ಯಯನ ವಿಭಾಗ

ಮಾರ್ಗದರ್ಶಕರು

**ಡಾ. ಎ. ಎಸ್. ಪ್ರಭಾಕರ**

ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

೨೦೨೦

# ಸಂಶೋಧಕರ ಪ್ರಮಾಣ ಪತ್ರ

**ಅಶ್ವಥ್ ಯಾದವ್.ಜಿ.ಎಸ್.** ಆದ ನಾನು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ **ಡಾ. ಎ. ಎಸ್. ಪ್ರಭಾಕರ** ಅವರ ಮಾರ್ಗದರ್ಶನದಲ್ಲಿ **"ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ"** ಎಂಬ ಮಹಾಪ್ರಬಂಧವನ್ನು ಅರ್ಥಶಾಸ್ತ್ರದ ವಿಷಯದಲ್ಲಿ ಪಿಎಚ್. ಡಿ. ಪದವಿಗಾಗಿ ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

ದಿನಾಂಕ: 30-09-2020

ಸ್ಥಳ : ವಿದ್ಯಾರಣ್ಯ

**ಅಶ್ವಥ್ ಯಾದವ್ ಜಿ.ಎಸ್.**
ಸಂಶೋಧನ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**ಅಶ್ವಥ್ ಯಾದವ್.ಜಿ.ಎಸ್.** ಅವರು **"ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ"** ಎಂಬ ಅರ್ಥಶಾಸ್ತ್ರದ ವಿಷಯದಲ್ಲಿ ಪಿಎಚ್. ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

೩೦.೬.೨೦೨೦

ದಿನಾಂಕ: ೩೦.೦೬.೨೦೨೦
ಸ್ಥಳ : ವಿದ್ಯಾರಣ್ಯ

(ಡಾ. ಎ. ಎಸ್. ಪ್ರಭಾಕರ)
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# Kannada University, Hampi

## Akshara Central Library

## Anti-Plagiarism Cell

## Certificate of Plagiarism Check Report

---

**Jagatikarana Sandharbadalli Kadugollara Arthikate**

**Kadugolla Economy in the Globalisation Context**

By

**Ashwath Yadav G S**

Reg.No. 140112020057 dated: 15.09.2014

Research Guide

**Prof A S Prabhakara**

Department of Tribal Studies

Kannada University, Hampi

---

**Urkund Analysis Result**

Analyzed document KUH-DTS-Ashwath Yadav G S.pdf (D79869437)

Submitted 9/25/2020 8:48:00 AM

Submitted by Shankaragouda S G

Submitter email shankargoudas.mailbox@gmail.com

Similarity 0%

Analysis address shankargoudas.mailbox.kanuni@analysis.urkund.com

Seal and authorized sign

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನಗಳು

ಭಾರತ ಬಹುಸಂಸ್ಕೃತಿಗಳ ದೇಶ, ಭಾರತೀಯತೆ ಎಂಬ ಪರಿಕಲ್ಪನೆಯ ಏಕತೆಯ ಹಿಂದೆ ಈ ಬಹುಸಂಸ್ಕೃತಿಗಳ ಕೊಡುಗೆ ಅಪಾರವಾಗಿದೆ. ಬಹುರೂಪತೆಯು ಜಾತಿ, ಧರ್ಮ, ಜನಾಂಗ, ಉಡುಗೆ ತೊಡುಗೆ, ವೃತ್ತಿ, ಆಹಾರಪದ್ಧತಿಯಲ್ಲಿ ಕಂಡುಬರುತ್ತದೆ. ಭಾರತ ಜಾತಿಯಾಧಾರಿತ ಸಮಾಜವಾಗಿದ್ದು, ಭಾರತೀಯ ಸಮಾಜ ಚಿಕ್ಕ ಚಿಕ್ಕ ಸಮೂಹ, ಸಮುದಾಯಗಳಿಂದ ಕೂಡಿದೆ. ಇದಕ್ಕೆ ಧಾರ್ಮಿಕ, ಆರ್ಥಿಕ ಹಾಗೂ ಸಾಮಾಜಿಕ ಕಾರಣಗಳು ಪ್ರಮುಖವೆನಿಸುತ್ತವೆ. ಇಂತಹ ಸಮಾಜದ ಕುರಿತು ವೈಜ್ಞಾನಿಕ ನೆಲೆಗಟ್ಟಿನಲ್ಲಿ ಅಧ್ಯಯನಗಳು ಆರಂಭಗೊಂಡಿದ್ದು ಯೂರೋಪಿಯನ್ನರಿಂದ ಎಂದು ಹೇಳಬಹುದು. ಈ ಅಧ್ಯಯನಗಳು ವರ್ಗ ಸಮಾಜದ ನೆಲೆಗಟ್ಟಿನಿಂದ ಬಂದಂತವುಗಳಾಗಿದ್ದು, ಜಾತಿ ಆಧಾರಿತ ಸಮಾಜದ ಸತ್ಯಾಸತ್ಯತೆಯನ್ನು ಸಮರ್ಪಕವಾಗಿ ವಿಶ್ಲೇಷಿಸುವಲ್ಲಿ ವಿಫಲವಾದವು. ಈ ಅಧ್ಯಯನಗಳು ಆರಂಭಗೊಂಡಿದ್ದರ ಹಿನ್ನೆಲೆಯಲ್ಲಿ ಭಾರತೀಯ ಸಂಸ್ಕೃತಿಗಳನ್ನು ಅರಿಯುವುದು ಇದರಿಂದ ಇವರನ್ನು ನಿಯಂತ್ರಿಸಿ ತಮ್ಮ ಸುಲಲಿತವಾದ ವಸಾಹತು ನೀತಿಗಳನ್ನು ಜಾರಿಗೊಳಿಸುವುದಾಗಿತ್ತೇ ವಿನಾಃ ಭಾರತೀಯರನ್ನು ಅಭಿವೃದ್ಧಿ ಮಾಡುವುದಾಗಿರಲಿಲ್ಲ. ಭಾರತವನ್ನು ಅನೇಕ ವರ್ಷಗಳ ಕಾಲ ಆಳ್ವಿಕೆ ಮಾಡಿದಂತವರು ತಮ್ಮ ಆಳುವ ನೀತಿಯಿಂದಲೇ ಚಿರಪರಿಚಿತರಾಗಿ ಭಾರತದ ಜನಾಂಗ ಮತ್ತು ಜಾತಿಗಳನ್ನು ಒಂದುಗೂಡಲು ಬಿಡಲಿಲ್ಲ. ಇದಕ್ಕೆ ನೆರವಾಗಿದ್ದೇ ಭಾರತೀಯ ಸಮಾಜದ ಕುರಿತಾದ ಅಧ್ಯಯನಗಳು ಎಂದು ಹೇಳಬಹುದು.

ಭಾರತದಲ್ಲಿ ಪಾಶ್ಚಿಮಾತ್ಯ ಚಿಂತನೆಗಳು ನೆಲೆಯೂರಲು ಬ್ರಿಟಿಷರಷ್ಟೇ ಕಾರಣವಲ್ಲ, ಜೊತೆಗೆ ಅಮೆರಿಕನ್ನರು, ಜರ್ಮನ್ನರು, ಪೋರ್ಚುಗೀಸರು, ಡಚ್ಚರು, ಮತ್ತು ಇಟಲಿಯ ಅಧ್ಯಯನಕಾರರು ಸಹ ಕಾರಣವಾಗುತ್ತಾರೆ. ಈ ಅಧ್ಯಯನಗಳ ಉದ್ದೇಶ ಭಾರತೀಯರಲ್ಲಿ ಸಂಸ್ಕೃತಿಗಳ ಮೂಲಕ ಗಟ್ಟಿಗೊಂಡಿರುವ ಮನಸ್ಥಿತಿಯನ್ನು ಅರಿಯುವುದು. ಆ ಮೂಲಕ ಅವರನ್ನೇ ಬಳಸಿಕೊಂಡು ಸಂಪತ್ತನ್ನು ದೋಚುವುದಾಗಿತ್ತು. ಇದರಲ್ಲಿ ಅವರು ಯಶಸ್ವಿಯಾದರು. ಇದನ್ನು ಕುರಿತಂತೆ ದಾದಾಬಾಯಿ

ನವರೋಜಿಯವರು ಭಾರತದ ಸಂಪತ್ತಿನ ಸೋರಿಕೆಯನ್ನು Drain Theory ಯಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾರೆ.

ಭಾರತೀಯ ಸಮಾಜದ ಕುರಿತಾಗಿ ಅಧ್ಯಯನಾಸಕ್ತಿ ಹೊಂದಿರುವರೆಂದರೆ, ಓರಿಯಟಲಿಸ್ಟರು, ಭಾರತಶಾಸ್ತ್ರದ ವಿದ್ವಾಂಸರು, ವಸಾಹತು ಆಡಳಿತಗಾರರು, ಪಾದ್ರಿಗಳು. ಫೋರ್ಡ್ ಫೌಂಡೇಶನ್‌ನಂತಹ ಸಂಸ್ಥೆಗಳ ಪ್ರತಿನಿಧಿಗಳು ಪ್ರಮುಖರಾಗಿದ್ದಾರೆ. ಇವರಲ್ಲದೇ ಭಾರತಕ್ಕೆ ಕಾಲಿಟ್ಟ ಇಂಗ್ಲಿಷ್ ಶಿಕ್ಷಣವು ತನ್ನತ್ತ ಕೆಲವೊಂದು ವರ್ಗಗಳನ್ನು ಆಕರ್ಷಿಸಿ ವಿದ್ಯಾವಂತರನ್ನಾಗಿಸಿ ತನ್ನ ನೆಲೆಗಟ್ಟಿಗೆ ಒಗ್ಗಿಕೊಳ್ಳುವಂತೆ ಮಾಡಿತ್ತು. ಈ ಶಿಕ್ಷಣ ಪಡೆದ ಭಾರತೀಯ ವಿದ್ಯಾವಂತ ವರ್ಗವು ಸಹ ಪಾಶ್ಚಿಮಾತ್ಯರ ಪ್ರತಿನಿಧಿಗಳಾಗಿ ಪಾಶ್ಚಿಮಾತ್ಯರಿಗೆ ನೆರವು ನೀಡಲು ಅಧ್ಯಯನ ಆರಂಭಿಸಿದರು. ಅಂತವರಲ್ಲಿ ಎಂ.ಎನ್. ಶ್ರೀನಿವಾಸ್, ನಂಜುಂಡಯ್ಯ, ಅನಂತಕೃಷ್ಣ ಅಯ್ಯರ್ ಇತ್ಯಾದಿ ಅಧ್ಯಯನಕಾರರು ಪ್ರಮುಖರೆನಿಸುತ್ತಾರೆ.

ಭಾರತದಲ್ಲಿ ನಡೆದ ಅಧ್ಯಯನಕ್ರಮಗಳನ್ನು ಗ್ರಹಿಸುವುದಾದರೆ, ಮೊದಲನೆಯದಾಗಿ "ಸಂರಚನಾತ್ಮಕ" ವಾದ ಹಿನ್ನೆಲೆಯ ಅಧ್ಯಯನಗಳು ಕಂಡುಬರುತ್ತವೆ. ಈ ಅಧ್ಯಯನಕ್ರಮವನ್ನು ಅನುಸರಿಸಿದವರೆಂದರೆ ಇಂಗ್ಲಿಷ್ ಫಲಾನುಭವಿಗಳಾದ ಭಾರತೀಯರಾದ ಎಂ.ಎನ್. ಶ್ರೀನಿವಾಸ್, ಜಿ.ಎಸ್.ಘುರ್ರೆಯವರು. ಇವರು ಸಮಾಜವನ್ನು ಇಡಿಯಲ್ಲಿ ಅದರ ಸಂರಚನೆಯನ್ನು ಕುರಿತಂತೆ ಹಾಗೂ ಸಂಸ್ಕೃತಾನುಕರಣೆ ಮತ್ತು ಗ್ರಾಮಾಧ್ಯಯನಗಳ ಕುರಿತು ಭಾರತದ ಗ್ರಾಮಸಂಸ್ಕೃತಿಯ ಕುರಿತು ಅಧ್ಯಯನ ಆರಂಭಿಸಿ ಪಾಶ್ಚಿಮಾತ್ಯರಿಗೆ ಗ್ರಾಮಸಂಸ್ಕೃತಿಯ ಅರಿವು ಮೂಡಿಸಿದರು. ಆದರೆ ಇದು ಹೆಚ್ಚು ಮಾನ್ಯತೆ ಪಡೆದ ಅಧ್ಯಯನಕ್ರಮವಲ್ಲ ಎಂದು ತಿಳಿದ ಮತ್ತೊಂದು ಚಿಂತನಾವರ್ಗ ಇದಕ್ಕೆ ಪ್ರತಿಸ್ಪರ್ಧಿಯಾದ ಮಾರ್ಕ್ಸ್ ಸಿದ್ಧಾಂತದ ಹಿನ್ನೆಲೆಯಲ್ಲಿ ಅಧ್ಯಯನ ಆರಂಭಿಸಿತು. ಇದನ್ನು ಭಾರತಕ್ಕೆ ಪರಿಚಯಿಸಲು ಶ್ರಮಿಸಿದವರು ಡಿ.ಪಿ. ಮುಖರ್ಜಿಯವರು. ಇವರು 'ಮಾರ್ಕ್ಸ್‌ನ Dialectical approach (ದ್ವಂದ್ವಮಾನ) ಸಿದ್ಧಾಂತ ಹಿನ್ನಲೆಯಲ್ಲಿ ಈ ಹಿಂದಿನ ಸಂರಚನಾತ್ಮಕ'ವಾದಿಗಳ ಸಿದ್ಧ ಮಾದರಿಯ ಬುಕ್‌ವ್ಯೂ ದೃಷ್ಟಿಕೋನವನ್ನು ತರ್ಕಿಸಿ ಪ್ರತ್ಯೇಕ ಪ್ರಮಾಣೀಕರಿಸುವ ಭೌತಿಕ ಅಂಶಗಳ ಅಥವಾ ಕ್ಷೇತ್ರಕಾರ್ಯ ಆಧಾರಿತ ಸಿದ್ಧಾಂತಗಳಿಗೆ ಮನ್ನಣೆ ನೀಡಿದರು. ಅದರ ಫಲವು ಭಾರತೀಯ ಸಮಾಜವನ್ನು ಭಾರತೀಯರು ಮತ್ತು ಭಾರತೀಯಸ್ನೇಹಿ ಅಧ್ಯಯನಕಾರರು ಅವಜ್ಞೆಗೆ ಒಳಗಾದ ಸಮುದಾಯಗಳ ಕುರಿತು ಅಧ್ಯಯನ ಮಾಡಲು ಆರಂಭಿಸಿದರು. ಇದು ಹೆಚ್ಚು ಪ್ರಾಶಸ್ತ್ಯವನ್ನು ಪಡೆಯಲಾರಂಭಿಸಿತು. ಈ ಬಗೆಯ ಅಧ್ಯಯನ ನಿರಂತರವಾಗಿದೆ.

ಮಾರ್ಕ್ಸ್ ಸಿದ್ಧಾಂತಕ್ಕೆ ಪೂರಕವೆಂಬಂತೆ ಸಬಾಲ್ಟ್ರನ್ ಸ್ಟಡೀಸ್ ಎಂಬ ಮತ್ತೊಂದು ಚಿಂತನಾ ಕ್ರಮ ಭಾರತವನ್ನು ಪ್ರವೇಶಿಸಿತು. ಜಾಗತಿಕ ಮಟ್ಟದಲ್ಲಿ ಇಟಲಿಯ ಆಂಟೋನಿಯೋ ಗ್ರಾಂಷ್ಚಿ ಇದನ್ನು ಪ್ರಚುರಪಡಿಸಿದರೆ, ಭಾರತದ ಮಟ್ಟಿಗೆ ರಂಜಿತ್‌ಗುಹ ಇದನ್ನು ಅನುಸರಿಸಿ ಹೆಚ್ಚು ಮಾನ್ಯತೆ ಪಡೆದ ಅಧ್ಯಯನಕ್ರಮ ಆಗಲು ಕಾರಣವಾಗಿದ್ದಾರೆ.

ಯುರೋಪಲ್ಲಿ ಪದೇ ಪದೇ ಸಂಬಂವಿಸುತ್ತಿದ್ದ ಯುದ್ಧಗಳಿಂದ ಸೈನಿಕರು ಸಾವನ್ನಪ್ಪುತ್ತಿದ್ದರು, ಇಲ್ಲವೇ ಅಂಗವಿಕಲರಾಗುತ್ತಿದ್ದರು. ಇದರಿಂದಾಗಿ ವಿಧವಾ ಸಮೂಹ ಅಧಿಕವಾಗತೊಡಗಿತು. ಈ ವರ್ಗಗಳ ಜೊತೆಗೆ ಬುಡಕಟ್ಟುಗಳು ಮತ್ತು ವೃದ್ಧರು ನಿರ್ಲಕ್ಷ್ಯಕ್ಕೆ ಒಳಗಾಗಿ ಹಿಂಸಾದಾಯಕ ಬದುಕು ಸಾಗಿಸಬೇಕಾಯಿತು. ಇಂತಹ ಸಂದರ್ಭದಲ್ಲಿ ಸೈನಿಕರ, ಮಹಿಳೆಯರ, ವೃದ್ಧರ, ಬುಡಕಟ್ಟುಗಳು ಮತ್ತು ಅಂಗವಿಕಲರ ಕುರಿತಾಗಿ ಅಂಟೋನಿಯೋ ಗ್ರಾಂಮ್ಷಿ ಆಸಕ್ತಿ ವಹಿಸಿ ಅವರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸತೊಡಗಿದರು. ಈ ಕಾರ್ಯದಲ್ಲಿ ಅನುಸರಿಸಿದ ಕ್ರಮವನ್ನೇ ಸಬಾಲ್ಟ್ರನ್ ಸ್ಟಡೀಸ್ ಎಂದು ಕರೆದರು. ಇದು ಭಾರತವನ್ನು ಪ್ರವೇಶಿದಾಗಿನಿಂದ ಪ್ರಸ್ತುತದವರೆಗೂ ಹೆಚ್ಚು ಸಮಂಜಸವಾದ ಮತ್ತು ಪ್ರಚಲಿತವಿರುವ ಚಿಂತನ ಕ್ರಮವೆಂದು ಹೇಳಬಹುದು. ಬಹುಸಂಸ್ಕೃತಿಯ ಭಾರತೀಯ ಸಮಾಜದಲ್ಲಿ ಹೋಳುಹೋಳಾಗಿರುವ ಉಪಪಂಗಡಗಳನ್ನು ಬಿಡಿಬಿಡಿಯಾಗಿ ಅಧ್ಯಯನ ಮಾಡುತ್ತಿರುವುದರ ಫಲವಾಗಿ ನಿಖರವಾದ ಮತ್ತು ವಿಶ್ವಸನೀಯ ಫಲಿತಾಂಶಗಳನ್ನು ಕಂಡುಕೊಳ್ಳಲು ಸಾಧ್ಯವಾಯಿತು. ಈ ಸಿದ್ಧಾಂತದ ಒಂದು ಭಾಗವಾಗಿ ತಳಸಮುದಾಯದ ಅಧ್ಯಯನ ಕಂಡುಬರುತ್ತದೆ. ಪಾಶ್ಚಿಮಾತ್ಯರ ಬುಡಕಟ್ಟುಗಳ ಕುರಿತಾದ ಅಧ್ಯಯನಗಳು ಪೂರ್ವಗ್ರಹ ಪೀಡಿತವಾಗಿದ್ದು ಒಮ್ಮುಖವಾಗಿದ್ದವು. ಆದರೆ ಸಬಾಲ್ಟ್ರನ್ ಸ್ಟಡೀಸ್ ಸಮುದಾಯಗಳ ಕುರಿತಾಗಿ ಸಮುದಾಯದ ಒಳಗಿನಿಂದ ಅಧ್ಯಯನಕ್ಕೆ ಅನುವು ಮಾಡಿಕೊಟ್ಟಿದ್ದರಿಂದ ಅವಜ್ಞೆಗೆ ಒಳಗಾದ ಸಂಗತಿಗಳನ್ನು ಹೊರಜಗತ್ತಿಗೆ ಅನಾವರಣ ಮಾಡಲು ಸಹಾಯಕವಾಗಿದೆ.

ಈ ಸಬಾಲ್ಟ್ರನ್ ಸ್ಟಡೀಸ್ ಹಿನ್ನೆಲೆಯಲ್ಲಿ ಪಶುಪಾಲನೆಯನ್ನೇ ಜೀವನಾಧಾರವಾಗಿಸಿಕೊಂಡು ಇಂದಿಗೂ ಹಟ್ಟಿ ಸಂಸ್ಕೃತಿಯ ನೆಲೆಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿ ಬದುಕುತ್ತಿರುವ ಸಮುದಾಯವಾಗಿರುವ ಕಾಡುಗೊಲ್ಲ ಸಮುದಾಯವನ್ನು ಅಧ್ಯಯನ ಮಾಡುವುದು ಈ ಸಂಶೋಧನೆಯ ಉದ್ದೇಶವಾಗಿದೆ.

ಸಮಾಜವು ನಿತ್ಯಪರಿವರ್ತನಶೀಲವಾಗಿರುವುದರಿಂದ ಇಂದು ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ಪ್ರಭಾವದಿಂದ ಈ ತಳಸಮುದಾಯದ ಮೇಲಾಗುತ್ತಿರುವ ಪರಿಣಾಮಗಳನ್ನೇ ತುರ್ತು ಅಧ್ಯಯನಕ್ಕೆ ಒಳಪಡಿಸಿ ಪರಿಹಾರೋಪಾಯಗಳನ್ನು ಕಂಡುಕೊಳ್ಳುವ ಅಗತ್ಯತೆಯ ಹಿನ್ನೆಲೆಯಲ್ಲಿ 'ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ' ಎಂಬ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಇಂದು ಭಾರತದ ಬುಡಕಟ್ಟು ಪಶುಪಾಲಕರ ಸ್ಥಿತಿಯನ್ನು ನೋಡುವುದಾದರೆ, ಪಶುಪಾಲನೆ ಕೃಷಿಯೊಂದಿಗೆ ನೇರ ಸಂಪರ್ಕವನ್ನು ಪಡೆದುಕೊಂಡಿದ್ದು ಕೃಷಿ ಜೊತೆಜೊತೆಗೆ ಪಶುಪಾಲನೆಯನ್ನು ರೂಢಿಸಿಕೊಂಡಿರುವುದು ಕಂಡು ಬರುತ್ತದೆ. ಮೊದಲು ಜೀವನೋಪಾಯಕ್ಕಾಗಿ ಪಶುಪಾಲನೆ ಕೈಗೊಂಡಿದ್ದರೂ ಆಗ ಪಶುಪಾಲಕರಿಗೆ ಪಶುಗಳನ್ನು ಮೇಯಿಸಲು ಸಾಕಷ್ಟು ಹುಲ್ಲುಗಾವಲುಗಳಿದ್ದವು. ಇಂದು ಹುಲ್ಲುಗಾವಲುಗಳು ಜಾಗತೀಕರಣದ ಪ್ರಭಾವದಿಂದ ಕಣ್ಮರೆಯಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಇದಕ್ಕೆ ಕಾರಣ ವ್ಯಾಪಾರೀಕರಣದ ಪ್ರಭಾವವು ಸಹ ಒಂದಾಗಿದೆ. ಅದೇ ರೀತಿ ಜಾಗತೀಕರಣದ ಪ್ರಭಾವದಿಂದ ಪಶುಪಾಲನೆ ಇಂದು ಲಾಭದ ಉದ್ದೇಶದಿಂದ ಮಾಡುತ್ತಿರುವುದು ಕಂಡುಬಂದಿದೆ.

ಇಂದು ಪಶುಪಾಲನೆ ಕೃಷಿಯೊಂದಿಗೆ ನೇರ ಸಂಪರ್ಕವನ್ನು ಹೊಂದಿದೆ. ಮೊದಲು ಜೀವನೋಪಾಯಕ್ಕಾಗಿ ಪಶುಪಾಲನೆ ರೂಢಿಸಿಕೊಂಡಿದ್ದರು. ಇಂದು ಇದು ಲಾಭದ ಉದ್ದೇಶದಿಂದ ಪಶುಪಾಲನೆ ಮಾಡುತ್ತಿರುವುದನ್ನು ಕಾಣುತ್ತೇವೆ. ಆದರೂ ಇದರಿಂದ ಲಾಭದ ಪ್ರಮಾಣವು ಸಹ ಕಡಿಮೆಯಾಗಿದೆ. ಬಡಕಟ್ಟು ಸಮುದಾಯಗಳು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿವೆ. ಇದಕ್ಕೆ ಕಾಡುಗೊಲ್ಲ ಸಮುದಾಯವೂ ಹೊರತಾಗಿಲ್ಲ. ಇಲ್ಲಿ ಕಾಡುಗೊಲ್ಲ, ಮ್ಯಾಸಬೇಡ, ಕಾಡುಕುರುಬ ಹಾಗೂ ಜೇನುಕುರುಬ ಸಮುದಾಯಗಳು ಹಿಂದೆ ಪಶುಪಾಲನೆಯಲ್ಲಿ ತೊಡಗಿದ್ದು ಇದರಿಂದಲೇ ಅವರ ಜೀವನ ನಿರ್ವಹಣೆ ಹಾಗೂ ಕುಟುಂಬದ ಮೂಲ ಆದಾಯವೂ ಸಹ ಆಗಿತ್ತು. ಇತ್ತೀಚೆಗೆ ಆಧುನಿಕತೆ ಉದ್ದೇಶದಿಂದ ಹುಲ್ಲುಗಾವಲುಗಳೆಲ್ಲವು ಕಾಂಕ್ರೀಟ್ ಕಾಡುಗಳಾಗಿ ಮಾರ್ಪಟ್ಟಿವೆ ಮತ್ತು ಅಲ್ಪ ಸ್ವಲ್ಪ ಕೃಷಿಭೂಮಿ ಹೊಂದಿದ್ದ ಬುಡಕಟ್ಟು ಸಮುದಾಯ ರಾಜ್ಯ ಹೆದ್ದಾರಿಗಳಿಗೆ ಹೊಂದಿಕೊಂಡಿರುವುದರಿಂದ ಈ ಕೃಷಿ ಭೂಮಿಗಳೆಲ್ಲವು ವಾಣಿಜ್ಯೋದ್ಯಮಿಗಳ ಪಾಲಾಗುತ್ತಿರುವುದನ್ನು ಕಾಣಬಹುದು. ಬುಡಕಟ್ಟು ಸಮುದಾಯಗಳಲ್ಲಿ ಕಾಡುಗೊಲ್ಲ ಸಮುದಾಯವು ಇಂದು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಅವುಗಳಲ್ಲಿ ಪ್ರತ್ಯೇಕತೆಯ ಸಮಸ್ಯೆ, ಮಡಿ ಮೈಲಿಗೆ ಮತ್ತು ಸೂತಕದಂತಹ ಸಮಸ್ಯೆಗಳಿವೆ. ಆರ್ಥಿಕವಾಗಿ ಭೂಹಿಡುವಳಿಯ ಸಮಸ್ಯೆಯನ್ನು ಒಳಗೊಂಡಂತೆ ಬಡತನ, ನಿರುದ್ಯೋಗ ಹಾಗೂ ಅರೆ ಉದ್ಯೋಗ ಸಮಸ್ಯೆಯನ್ನು ಮತ್ತು ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳೂ ಇವೆ. ಇವರು ಅಪೌಷ್ಟಿಕತೆ, ಬಾಣಂತಿಯರ ಸಾವು, ಶಿಶುಮರಣದಂತಹ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಆದ್ದರಿಂದ ಕಾಡುಗೊಲ್ಲರಲ್ಲಿರುವ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರದಲ್ಲಿನ ಸಮಸ್ಯೆಗಳನ್ನು ತೊಡೆದುಹಾಕಿ ಇವರನ್ನು ಸಮಾಜದ ಮುಖ್ಯವಾಹಿನಿಗೆ ತರುವುದು ಇಂದಿನ ತುರ್ತಾಗಿದೆ.

ಆಧುನಿಕ ಜಗತ್ತಿನ ಬಹು ಚರ್ಚಿತ ಹಾಗೂ ಪ್ರಭಾವಶಾಲಿಯಾದ ವಿಷಯವೆಂದರೆ ಜಾಗತೀಕರಣ ಹಾಗೂ ಸಾಮ್ರಾಜ್ಯಶಾಹಿ ಆರ್ಥಿಕತೆ. ಇಂತಹ ವಿಷಯಗಳು ಬುಡಕಟ್ಟು ಸಮುದಾಯಗಳ ಮೇಲೆ ಯಾವ ರೀತಿಯ ಪ್ರಭಾವ ಬೀರಿವೆ ಹಾಗೂ ಬೀರುತ್ತಲೇ ಇವೆ ಎಂಬುದನ್ನು ಕುರಿತು ನೋಡುವುದಾದರೆ ಭಾರತದ ಪಶುಪಾಲಕ ಬುಡಕಟ್ಟುಗಳ ಮೇಲೆ ಈ ಜಾಗತೀಕರಣದಿಂದ ಧನಾತ್ಮಕ ಹಾಗೂ ಋಣಾತ್ಮಕ ಪ್ರಭಾವಗಳು ಆಗಿವೆ. ಇಂತಹ ಅಂಶಗಳನ್ನು ನನ್ನ ಅಧ್ಯಯನದಲ್ಲಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಈ ಅಂಶಗಳು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಪ್ರಭಾವ ಬೀರಿರುವ ಮೂಲಗಳತ್ತ ಗಮನ ಹರಿಸಲಾಗಿದೆ.

ಪಶುಪಾಲಕರ ಮುಖ್ಯಕಾರ್ಯ ಪಶುಪಾಲನೆ. ಅವರಿಗೆ ಹೈನುಗಾರಿಕೆಯಿಂದ ಜೀವನ ನಿರ್ವಹಣೆಗೆ ಬೇಕಾದಂತಹ ಅಗತ್ಯ ವಸ್ತುಗಳ ಪೂರೈಕೆ ಹಾಗೂ ನಿರ್ವಹಣೆಗೆ ಇದರಿಂದಲೇ ನಡೆಯುತ್ತಿರುವುದನ್ನು ನೋಡುತ್ತೇವೆ. ಪಶುಪಾಲಕರ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದಿದ್ದರೂ ಸಹ, ಜೀವನ ನಿರ್ವಹಣೆಗೆ ಕೊರತೆ ಇಲ್ಲದಂತೆ ಜೀವನ ಸಾಗಿಸುತ್ತಿದ್ದಾರೆ. ಇತ್ತೀಚಿನ ಜಾಗತೀಕರಣ ಬೆಳವಣಿಗೆಯಿಂದ ಆರ್ಥಿಕ

ಅಭಿವೃದ್ಧಿಯ ದೃಷ್ಟಿ ಇಟ್ಟುಕೊಂಡಂತಹ ಸರ್ಕಾರ ಹುಲ್ಲುಗಾವಲುಗಳನ್ನು ಅಭಿವೃದ್ಧಿ ಯೋಜನೆಗಳನ್ನು ವಿಸ್ತರಿಸುವ ನೆಪದಲ್ಲಿ ಅವುಗಳನ್ನು ವಶಪಡಿಸಿಕೊಂಡು ಪಶುಪಾಲನೆಗೆ ಬೇಕಾದಂತಹ ಹುಲ್ಲುಗಾವಲುಗಳನ್ನು ನಾಶ ಮಾಡುತ್ತಿದೆ. ಅಭಿವೃದ್ಧಿಯ ಹೆಸರಿನಲ್ಲಿ ಮಾನವನ ಕಲ್ಯಾಣದ ಅರಿವನ್ನು ಇಟ್ಟುಕೊಂಡು ಅಭಿವೃದ್ಧಿಗೆ ಒಲವು ತೋರಿಸಬೇಕಾಗುತ್ತದೆ. ಅಭಿವೃದ್ಧಿ ಎಂದರೆ ಉತ್ಪಾದನೆ, ಬಂಡವಾಳ ಕ್ರೋಢೀಕರಣ, ಉದ್ಯೋಗಾವಕಾಶಗಳ ಹೆಚ್ಚಳ. ಆದಾಯವನ್ನು ಹೆಚ್ಚಿಸುವುದರ ಮೂಲಕ ಲಾಭವನ್ನು ಹೆಚ್ಚಿಸಬೇಕು ಎಂಬ ಸಾಂಪ್ರದಾಯಿಕ ಪಂಥದ ಅರ್ಥಶಾಸ್ತ್ರಜ್ಞರಿಂದ ಹಿಡಿದು ಕೇನ್ಸ್‌ವರೆಗೆ ಅಭಿವೃದ್ಧಿಯ ಅರ್ಥವನ್ನು ನೀಡಿದ್ದಾರೆ. ಆದರೂ ಇಲ್ಲಿಯವರೆಗೆ ನಾವು ಅಭಿವೃದ್ಧಿಯ ಅರ್ಥವನ್ನು ಬೇರೆಯದೇ ರೀತಿಯಲ್ಲಿ ಅರ್ಥೈಸಿದ್ದೇವೆ. 'ಮಾನವಮುಖಿ ಅಭಿವೃದ್ಧಿಯ ಅಂತಿಮ ಗುರಿ ವರಮಾನವಲ್ಲ, ಉತ್ಪಾದನೆಯಲ್ಲ, ಅಣುಬಾಂಬುಗಳಲ್ಲ. ಅಭಿವೃದ್ಧಿಯ ಗುರಿ ಮಾನವ ಮತ್ತು ಮಾನವನ ಬದುಕು'[೧] ಎಂದು ಅಮರ್ತ್ಯಸೇನ್ ಅಭಿವೃದ್ಧಿಯ ತತ್ವವನ್ನು ವಿವರಿಸಿದ್ದಾರೆ.

ಅರ್ಥಶಾಸ್ತ್ರದ ಮೂಲವನ್ನು ನಾವು ನೋಡಿದಾಗ ಅರ್ಥಶಾಸ್ತ್ರದ ಪದನಾಮ ತಿಳಿಸುವ ಹಾಗೆಯೇ ಗ್ರೀಕ್ ಭಾಷೆಯ 'ಇಕೋಸ್ ಮತು ನೋಮಸ್ ಅಂದರೆ ಗ್ರೀಕ್ ಭಾಷೆಯಲ್ಲಿ ಇಕೋಸ್ ಎಂದರೆ ಮನೆ ಅಥವಾ ಗೃಹ ಎಂತಲೂ ನೋಮಸ್ ಎಂದರೆ ನಿರ್ವಹಣೆ ಎಂದು ಅರ್ಥ ಕೊಡುತ್ತದೆ. ಅಂದರೆ ಗ್ರೀಕ್ ಮೂಲದ ಪ್ರಕಾರ ಲಭ್ಯವಿರುವ ಮಿತವಾದ ಸಂಪನ್ಮೂಲಗಳನ್ನು ದಕ್ಷವಾಗಿ ಬಳಸಿಕೊಂಡು ಕುಟುಂಬವನ್ನು ನಿರ್ವಹಿಸುವುದು[೨] ಎಂದಾಗಿತ್ತು. ಆದರೆ ಇತ್ತೀಚೆಗೆ ಮಾನವನ ಆರ್ಥಿಕ ವ್ಯವಹಾರಗಳು ಮತ್ತು ಬಯಕೆಗಳು ಹೆಚ್ಚಾದಾಗ ಅರ್ಥಶಾಸ್ತ್ರವು ಇಡೀ ವಿಶ್ವದ ಆರ್ಥಿಕತೆಯ ಚಿತ್ರಣವನ್ನು ಮತ್ತು ಅಭಿವೃದ್ಧಿ ಹೇಗಿರಬೇಕು ಮತ್ತು ಅದರ ಅವಶ್ಯಕತೆಗಳ ಬಗ್ಗೆ ಚರ್ಚಿಸುತ್ತಿದೆ. 'ಒಟ್ಟಾರೆಯಾಗಿ ಹೇಳಬೇಕೆಂದರೆ ಒಂದು ಸಮಾಜ ಅದರ ಭೌತಿಕ ಅನಿವಾರ್ಯತೆಗಳನ್ನು ಪೂರೈಸಿಕೊಳ್ಳಲು ಉಪಯೋಗಿಸುವ ದಾರಿಯೇ ಅರ್ಥಶಾಸ್ತ್ರವಾಗಿದೆ.[೩]

'ಎಪ್ಪತ್ತರ ದಶಕದಲ್ಲಿ ಬುಡಕಟ್ಟು ಅಭಿವೃದ್ಧಿಗೆ ಸಂಬಂಧಿಸಿದಂತೆ ಬಹು ದೊಡ್ಡ ಚರ್ಚೆ ನಡೆಯಿತು, ಬುಡಕಟ್ಟು ಜನರು ಮುಖ್ಯವಾಹಿನಿಗೆ ಸೇರಬೇಕೋ ಬೇಡವೋ ಎನ್ನುವುದು ಆ ಚರ್ಚೆಯ ಮುಖ್ಯ ವಸ್ತುವಾಗಿತ್ತು. ಕೆಲವರ ಪ್ರಕಾರ ಆ ಚರ್ಚೆ ಅಥವಾ ಆ ಪ್ರಶ್ನೆ ಎಂದೋ ಮುಗಿದುಹೋದ ಅಧ್ಯಾಯ, ಆದ್ದರಿಂದ ಪುನ: ಅದನ್ನು ಕೆದಕುವ ಅವಶ್ಯಕತೆಯಿಲ್ಲ ಎಂದರು.

ಆದಿವಾಸಿಗಳನ್ನು ಬೇರೆ ಸಮುದಾಯದೊಂದಿಗೆ ಹೋಲಿಸಿ ನೋಡಿದರೆ ಅವರದೇ ಆದ ಭಾಷೆ, ಸಂಸ್ಕೃತಿ, ಜೀವನವಿಧಾನ, ಮೌಲ್ಯಗಳು ಮತ್ತು ಆಲೋಚನಾಕ್ರಮಗಳು ಇವೆ. ಪ್ರಪಂಚವನ್ನು ನೋಡುವ ದೃಷ್ಟಿಕೋನ ಸುಖದ ಕಲ್ಪನೆ ಇತ್ಯಾದಿಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನ, ಅವುಗಳನ್ನು ಅನುಭವಿಸಿದವರು ಮಾತ್ರ ಅರ್ಥ ಮಾಡಿಕೊಳ್ಳಲು ಸಾಧ್ಯ. ಸಮುದಾಯದ ಹೊರಗಿನವರಿಗೆ ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ಅವರಿಗೆ ಮೂಲಭೂತ ಸೌಕರ್ಯಗಳನ್ನು ಹೆಚ್ಚಿಸಬೇಕೆಂದು ಆದೇಶಿಸುತ್ತಾರೆ, ಶಾಲೆ, ಆಸ್ಪತ್ರೆ ಮತ್ತು ಕಾರ್ಖಾನೆಗಳನ್ನು ಕಟ್ಟುವ ಬದಲು, ಎಕ್ಸ್‌ಪ್ರೆಸ್ ಹೈವೇ,

ಮೆಟ್ರೋ, ವಿಮಾನ ನಿಲ್ದಾಣ ಸಂಪರ್ಕ ಸಾಧನಗಳು ಉದ್ದಿಮೆಗಳಿಗೆ ತ್ವರಿತವಾಹಿನಿಗೆ ಸಹಾಯಕವಾಗುವಂತಹ ಸೌಕರ್ಯಗಳನ್ನು ನೇಮಿಸುತ್ತವೆ'.[೪] 'ಮನುಷ್ಯ ಮರವಾಗಬಹುದು, ಮೊಟ್ಟೆ ಮನುಷ್ಯನಾಗಬಹುದು, ಆತ್ಮ ಜೋರಾಗಿ ಊದಿದರೆ ಬಿರುಗಾಳಿ ಏಳಬಹುದು. ಇವೆಲ್ಲವೂ ಅವರಿಗೆ ಸೂರ್ಯ ಚಂದ್ರರಷ್ಟೇ ನಿಜ ಮತ್ತು ಸಹಜ'.[೫] ಈ ಅರ್ಥವಂತಿಕೆ ಬಂದಾಗ ಮಾತ್ರ ನಾವು ಬುಡಕಟ್ಟುಗಳನ್ನು ಹಾಗೂ ಅವರ ಆರ್ಥಿಕತೆಗಳನ್ನು ಅರ್ಥ ಮಾಡಿಕೊಳ್ಳಬಹುದು. ಇಂತಹ ಜಾಗತೀಕರಣದಿಂದ ಮೀಸಲಾತಿ ಮತ್ತು ಸಾಮಾಜಿಕ ನ್ಯಾಯಕ್ಕೆ ಕೊಡಲಿ ಪೆಟ್ಟು ಬೀಳುತ್ತದೆ. ಇಲ್ಲಿಯವರೆಗೆ ಬುಡಕಟ್ಟುಗಳಿಗೆ ಸಾಮಾಜಿಕ ನ್ಯಾಯ ಒದಗಿಸಿ ಮೀಸಲಾತಿ ಮುಖಾಂತರ ಅವರನ್ನು ಮೇಲುಸ್ತರಕ್ಕೆ ತರಲು ಪ್ರಯತ್ನಿಸಲಾಗಿದೆ. ಆದರೆ ಈ ಜಾಗತೀಕರಣದಿಂದ ಇಂತಹ ಸಾಮಾಜಿಕ ನ್ಯಾಯಕ್ಕೆ ಪೆಟ್ಟು ಬೀಳಬಹುದು ಎಂದರೆ ಅತಿಶಯೋಕ್ತಿಯಾಗಲಾರದು.

ವಸಾಹತು ಸಂದರ್ಭದಲ್ಲಿ ಬುಡಕಟ್ಟಿನವರನ್ನು ಮಾತ್ರ ಏಕೆ ಭಾರತದ ಎಲ್ಲಾ ಸಮುದಾಯಗಳನ್ನು ನಾಗರಿಕರನ್ನಾಗಿಸುವ ಬಹು ದೊಡ್ಡ ಜವಾಬ್ದಾರಿ ಹೊತ್ತು ಮುಖ್ಯವಾಹಿನಿಗೆ ಸೇರಿಸುವ ಪ್ರಶ್ನೆ ಚರ್ಚೆಗೆ ಬಂದಿದೆ. ಬುಡಕಟ್ಟಿನವರಿಗೆ ಸಂಬಂಧಿಸಿದಂತೆ ಈ ಪ್ರಶ್ನೆ ಚರ್ಚೆಗೆ ಬರಲು ಕಾರಣ ವಸಾಹತು ಸರ್ಕಾರದ ಆರ್ಥಿಕ ಪ್ರಶ್ನೆಗಳು. ಅರಣ್ಯ ಇಲಾಖೆಯವರ ವ್ಯವಹಾರಕ್ಕೆ ಅಡ್ಡಿ ಆತಂಕ ಆಗದಂತೆ ಬುಡಕಟ್ಟು ಸಮುದಾಯಗಳನ್ನು ನಿರ್ವಹಿಸುವುದು ಮುಖ್ಯ ಕಾರಣವಾಗಿತ್ತು, ಅದರ ಜೋತೆಗೆ ಕಾನೂನು ಮತ್ತು ಶಿಸ್ತು ಕಾಪಾಡುವ ದೃಷ್ಟಿಕೋನ ಅಗತ್ಯವಾಗಿತ್ತು. ಟೀ, ಕಾಫಿ ಪ್ಲಾಂಟರುಗಳ ಉದ್ಯಮ ಊರಿನ ವ್ಯಾಪಾರಿಗಳ ವ್ಯವಹಾರಕ್ಕೆ ತೊಂದರೆಯಾಗದಂತೆ ನೋಡಿಕೊಳ್ಳುವುದು ಕೂಡ ಅಂದಿನ ವಸಾಹತು ಸರ್ಕಾರದ ಜವಾಬ್ದಾರಿಯಾಗಿತ್ತು. ಅದಕ್ಕಾಗಿ ಅದು ಬುಡಕಟ್ಟು ಸಮುದಾಯದವರನ್ನು ಮುಖ್ಯವಾಹಿನಿಗೆ ಸೇರಿಸಿಕೊಳ್ಳುವ ಪ್ರಶ್ನೆ ಎತ್ತಿತು. ಇಂತಹ ಸಂದರ್ಭದಲ್ಲಿ ಬುಡಕಟ್ಟು ಸಮುದಾಯದವರ ಅರ್ಥಶಾಸ್ತ್ರ ಮತ್ತು ಆರ್ಥಿಕತೆಗೆ ಸಂಬಂಧಿಸಿದಂತೆ ವಿಚಾರಗಳನ್ನು ತಿಳಿಯಬೇಕಾದಂತಹ ಅನಿವಾರ್ಯತೆಯಿಂದಾಗಿ ಅವರ ಅರ್ಥಶಾಸ್ತ್ರವು ಮತ್ತು ಅವರ ಆರ್ಥಿಕತೆಯನ್ನು ಒಂದು ವೈಜ್ಞಾನಿಕ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. 'ಅರ್ಥಶಾಸ್ತ್ರವು ಯಾವುದೇ ಸಮುದಾಯದ ವಾಸ್ತವಿಕತೆಯ ನೈಜ ಚಿತ್ರಣ ನೀಡುವಲ್ಲಿ ಎಲ್ಲರಿಗೂ ಅನ್ವಯಿಸುವಂತಹ ಜೀವನದ ಎಲ್ಲಾ ಆರ್ಥಿಕ ಆಯಾಮಗಳನ್ನು ತಿಳಿಸುವಲ್ಲಿ ಸಹಕಾರಿಯಾಗಿದೆ. ರಾಜಕೀಯ ಅರ್ಥಶಾಸ್ತ್ರವು ನೀರಸವಾದ, ಬೇಸರ ತರಿಸುವಂತಹ ವಿಷಯವೆಂದು ಭಾವಿಸುವುದು ಕೆಲವರಿಗೆ ಅಭ್ಯಾಸವಾಗಿಬಿಟ್ಟಿದೆ. ಆದರೂ ಸಮಾಜದ ಆರ್ಥಿಕ ರಚನೆಯೂ ಪ್ರಕೃತಿಗಿಂತ ಕಮ್ಮಿ ಏನೂ ಇಲ್ಲದಷ್ಟು ಆಕರ್ಷಕ ಸಮಸ್ಯೆಗಳನ್ನು ರಹಸ್ಯಗಳನ್ನು ಒಳಗೊಂಡಿದೆ[೬] ಎನ್ನುವುದು ಹೆಚ್ಚು ಸೂಕ್ತ.

### ೧.೧. ಅಧ್ಯಯನದ ಉದ್ದೇಶಗಳು

ಪ್ರಸ್ತುತ ಅಧ್ಯಯನವು ಅರ್ಥಶಾಸ್ತ್ರೀಯ ಅಧ್ಯಯನವಾಗಿದ್ದು, ಇಲ್ಲಿ ಕಾಡುಗೊಲ್ಲರ ಆರ್ಥಿಕತೆಯನ್ನು ತಿಳಿಯುವುದರ ಜೋತೆಯಲ್ಲೆ ಸಾಮಾಜಿಕ, ರಾಜಕೀಯ ಹಾಗೂ ಅವರ ಸಂಸ್ಕೃತಿಯನ್ನು

ತಿಳಿಯುವುದಾಗಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ ಕಾಡುಗೊಲ್ಲರ ಬದುಕಿನಲ್ಲಿ ಆಗಿರುವ ಬದಲಾವಣೆಗಳನ್ನು ಗುರುತಿಸುವುದು. ಇದರ ಜೊತೆ ಇನ್ನೂ ಬದಲಾಗದಿರುವ ಅಂಶಗಳನ್ನು ಗಮನಿಸುವುದು. ಅವರ ಪಾರಂಪರಿಕ ಕುಲಕಸುಬುಗಳು ಮತ್ತು ಬದಲಾದ ಕಸುಬುಗಳು ಆಧುನಿಕತೆಯ ಪರಿಣಾಮದಿಂದಾಗಿ ಯಾವ ರೀತಿ ಬದಲಾಗಿವೆ ಎಂಬುದನ್ನು ಅರಿಯುವುದು. ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ ಎಂಬ ಅಧ್ಯಯನವನ್ನು ಕೈಗೊಳ್ಳುವುದು. ಕಾಡುಗೊಲ್ಲರ ಆರ್ಥಿಕತೆ, ರಾಜಕೀಯ ಮತ್ತು ಶೈಕ್ಷಣಿಕ, ಸಾಮಾಜಿಕ ಮತ್ತು ಸಂಸ್ಕೃತಿ ಹಾಗೂ ಸಂಪ್ರದಾಯಬದ್ಧ ಆಚರಣೆಗಳೊಂದಿಗೆ ಹಿಂದುಳಿದಿರುವುದನ್ನು ಗುರುತಿಸುವುದು. ಕಾಡುಗೊಲ್ಲರು ಮೂಲಭೂತ ಸೌಕರ್ಯಗಳಿಂದಲೂ ಸಹ ವಂಚಿತರಾಗಿದ್ದಾರೆ. ಕಾಡುಗೊಲ್ಲರು ಇಂದಿನ ಜಾಗತೀಕರಣ ಮತ್ತು ಆಧುನಿಕತೆಯ ಯುಗದಲ್ಲಿ ತನ್ನ ಭೂತಕಾಲದ ಸಂಪ್ರದಾಯವಾಗಿ ಸಾಗಿಬಂದಂತಹ ತನ್ನ ಸಂಪ್ರದಾಯಬದ್ಧ ಸಂಸ್ಕೃತಿ ಹಾಗೂ ಅನನ್ಯತೆಯನ್ನು ಉಳಿಸಿಕೊಂಡುಬಂದಿರುವುದನ್ನು ಕಾಣಬಹುದು. ಈ ದಿಕ್ಕಿನಲ್ಲಿ ಈ ಸಂಶೋಧನೆಯು ತನ್ನ ಚೌಕಟ್ಟಿನಲ್ಲಿ ಈ ಕೆಳಕಂಡ ಅಧ್ಯಯನದ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನವನ್ನು ನಡೆಸಲಾಗಿದೆ.

೧. ಕಾಡುಗೊಲ್ಲರ ಆರ್ಥಿಕತೆಯ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಯುವುದು.

೨. ಕಾಡುಗೊಲ್ಲರ ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿಯುವುದು.

೩. ಜಾಗತೀಕರಣದಿಂದಾಗಿ ಕಾಡುಗೊಲ್ಲರ ಆರ್ಥಿಕತೆಯಲ್ಲಾದ ಪಲ್ಲಟಗಳನ್ನು ವಿಶ್ಲೇಷಿಸುವುದು.

೪. ಕಾಡುಗೊಲ್ಲರ ಮೂಲ ಕಸುಬುಗಳಲ್ಲಿ ಆದ ರೂಪಾಂತರಕ್ಕಿರುವ ಚಾರಿತ್ರಿಕ ಕಾರಣಗಳನ್ನು ತಿಳಿಯುವುದು.

ಈ ಮೇಲ್ಕಂಡ ಅಧ್ಯಯನ ಉದ್ದೇಶಗಳು ಕಾಡುಗೊಲ್ಲರ ಬದುಕನ್ನು ಸಮಗ್ರವಾಗಿ ವಿಶ್ಲೇಷಿಸಲು ನೆರವಾಗುತ್ತವೆ ಎಂಬ ಕಾರಣಕ್ಕೆ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಜಗತ್ತು ವಿಸ್ಮಯಗಳ ಆಗರವಾಗಿದೆ. ಈ ವಿಸ್ಮಯಗಳನ್ನು ಅರಿಯುವ ಮಾನವನ ಪ್ರಯತ್ನ ಅಸಾಧ್ಯವೆಂದು ಹೇಳಬಹುದು. ಇಂತಹ ವಿಶಾಲವಾದ ಜಗತ್ತನ್ನು ಸಮಷ್ಟಿಗೊಳಿಸಿ ಅಧ್ಯಯನ ಮಾಡಲು ಕಷ್ಟಸಾಧ್ಯ. ಇದರಲ್ಲಿ ಇಂದು ಕ್ಷೇತ್ರ ಮತ್ತು ವಿಷಯವನ್ನು ಆಯ್ಕೆ ಮಾಡಿಕೊಂಡು ಕಾಲ ಪರಿಮಿತಿಯೊಳಗೆ ಅಧ್ಯಯನ ಮಾಡಿದಾಗ ನಿಖರವಾದ ಸಾರ್ವತ್ರಿಕ ಮತ್ತು ವಿಶ್ವಸನೀಯ ಸತ್ಯಗಳನ್ನು ಹೊರಜಗತ್ತಿಗೆ ಅನಾವರಣಗೊಳಿಸಲು ಸಾಧ್ಯವಾಗುವುದು.

ಇಲ್ಲವಾದರೆ ಗೊಂದಲದಿಂದಾಗಿ ನಿಖರವಾದ ಮಾಹಿತಿ ಇಲ್ಲದೆ ತಪ್ಪು ಸಂದೇಶವನ್ನು ಪಡೆದುಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ 'ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ' ಎಂಬ ಅಧ್ಯಯನವು ತನ್ನದೇ ಆದ ಚೌಕಟ್ಟನ್ನು ಹೊಂದಿದೆ.

ಪ್ರಸ್ತುತ ಅಧ್ಯಯನವನ್ನು ಬಯಲುಸೀಮೆಯ ಜಿಲ್ಲೆಗಳಲ್ಲಿ ಒಂದಾದ ಚಿತ್ರದುರ್ಗವನ್ನು ಕೇಂದ್ರವನ್ನಾಗಿಟ್ಟುಕೊಳ್ಳಲಾಗಿದೆ. ಈ ಜಿಲ್ಲೆಯಲ್ಲಿ ಪ್ರಮುಖವಾಗಿ ಹರಿಯುವ ನದಿಗಳೆಂದರೆ ವೇದಾವತಿ ಮತ್ತು ಚಿನ್ನಹಗರಿ ನದಿಗಳು. ಚಿತ್ರದುರ್ಗ ಜಿಲ್ಲೆಯು ಉತ್ಕೃಷ್ಟ ಹುಲ್ಲುಗಾವಲುಗಳ ಪ್ರದೇಶವಾಗಿತ್ತು. ಹಿಂದಿನಿಂದಲೂ ಪಶುಪಾಲಕ ಸಮುದಾಯಗಳಾದ ಕಾಡುಗೊಲ್ಲ ಮತ್ತು ಮ್ಯಾಸಬೇಡ ಸಮುದಾಯಗಳು ಚಿನ್ನಹಗರಿ ಮತ್ತು ವೇದಾವತಿ ನದಿಗಳ ನಡುವಿನ ಪ್ರಸ್ಥಭೂಮಿಯಲ್ಲಿ ತೆಲುಗು ಭಾಷಿಕ ಪ್ರದೇಶದಿಂದ ವಲಸೆಯನ್ನು ಅಂತ್ಯಗೊಳಿಸಿ ನೆಲೆ ನಿಂತವು. ಇದರ ಪರಿಣಾಮವಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ಕಾಡುಗೊಲ್ಲರ ಜನಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ. ಈ ಸಮುದಾಯವು ಮ್ಯಾಸಬೇಡ ಸಮುದಾಯದ ಜೊತೆ ಜೊತೆಯಲ್ಲಿಯೇ ಬದುಕನ್ನು ಸಾಗಿಸುತ್ತಿದ್ದು, ಸಂಸ್ಕೃತಿ ಆಚಾರ–ವಿಚಾರಗಳಲ್ಲಿ ಪರಸ್ಪರ ಸಾಮ್ಯತೆ ಹೊಂದಿದೆ. ಈ ಹಿನ್ನೆಲೆಯಲ್ಲಿ ಬಹುಸಂಖ್ಯಾತವಾಗಿರುವ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಚಿತ್ರದುರ್ಗ, ಮೊಳಕಾಲ್ಮೂರು, ಹಿರಿಯೂರು, ಹೊಸದುರ್ಗ, ಹೊಳಲ್ಕೆರೆ ಎಂಬ ಆರು ತಾಲ್ಲೂಕಿನಲ್ಲಿರುವ ತಳ ಸಮುದಾಯವಾಗಿರುವ ಕಾಡುಗೊಲ್ಲರನ್ನು ಕೇಂದ್ರೀಕರಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಚಳ್ಳಕೆರೆ ತಾಲ್ಲೂಕಿನಿನಲ್ಲಿ ಹದಿಮೂರು ಕಾಡುಗೊಲ್ಲರ ಹಟ್ಟಿಗಳನ್ನು, ಚಿತ್ರದುರ್ಗ ತಾಲ್ಲೂಕಿನಲ್ಲಿ ಎಂಟು ಹಟ್ಟಿಗಳನ್ನು, ಮೊಳಕಾಲ್ಮುರು ತಾಲ್ಲೂಕಿನಲ್ಲಿ ನಾಲ್ಕು ಹಟ್ಟಿಗಳನ್ನು, ಹೊಸದುರ್ಗದ ಎಂಟು ಹಟ್ಟಿಗಳನ್ನು, ಹೊಳಲ್ಕೆರೆಯ ಒಂಬತ್ತು ಕಾಡುಗೊಲ್ಲರ ಹಟ್ಟಿಗಳನ್ನು ಮತ್ತು ಹಿರಿಯೂರು ತಾಲ್ಲೂಕಿನ ಹದಿನೆಂಟು ಕಾಡುಗೊಲ್ಲರ ಹಟ್ಟಿಗಳನ್ನು ಮಾದರಿ ನಮೂನೆಗಳಾಗಿ ಆಯ್ದುಕೊಳ್ಳಲಾಗಿದೆ. ಇಡೀ ಚಿತ್ರದುರ್ಗ ಜಿಲ್ಲೆಯಲ್ಲೇ ಹಿರಿಯೂರು ತಾಲ್ಲೂಕಿನಲ್ಲಿ ಹೆಚ್ಚು ಕಾಡುಗೊಲ್ಲರ ಹಟ್ಟಿಗಳಿರುವುದರಿಂದ ಇಲ್ಲಿ ಹೆಚ್ಚು ಕಾಡುಗೊಲ್ಲರ ಹಟ್ಟಿಗಳನ್ನು ಮಾದರಿಗಳಾಗಿ ತೆಗೆದುಕೊಳ್ಳಲಾಗಿದೆ. ಈ ಅರವತ್ತು ಕಾಡುಗೊಲ್ಲರ ಹಟ್ಟಿಗಳಲ್ಲಿ ಬರುವ ೧೪೩೧ ಕುಟುಂಬಗಳನ್ನು ಸಮಗ್ರ ಸರ್ವೆ ವಿಧಾನದ ಮೂಲಕ ಅಧ್ಯಯನಕ್ಕೆ ಒಳಪಡಿಸಿದ್ದು, ಬದಲಾದ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಹಾಗೂ ಜಾಗತೀಕರಣ ಮತ್ತು ಆಧುನಿಕತೆಯ ಪರಿಣಾಮವಾಗಿ ಅವರಲ್ಲಿ ಆರ್ಥಿಕ ರೂಪಾಂತರಗಳನ್ನು ತಿಳಿಯಲು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**೧.೪. ಅಧ್ಯಯನದ ವಿಧಾನ**

**ಚಾರಿತ್ರಿಕ ವಿಧಾನ**

ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ ಎಂಬ ಅಧ್ಯಯನಕ್ಕೆ ಕ್ಷೇತ್ರಕಾರ್ಯವನ್ನು ಪ್ರಧಾನವಾಗಿಟ್ಟುಕೊಂಡು ಕ್ಷೇತ್ರಕಾರ್ಯದಿಂದ ಬಂದಂತಹ ಫಲಿತಗಳನ್ನು ಅನುಸರಿಸಿ ಸಮುದಾಯದ ತಿಳುವಳಿಕೆದಾರರಿಂದ ಮಾದರಿಗಳ ಸಂಗ್ರಹ ವಿಧಾನ, ವಿಶ್ಲೇಷಣಾ ವಿಧಾನ ತೌಲನಿಕ ವಿಧಾನ, ಅಂತರ್‌ಶಿಸ್ತೀಯ ವಿಧಾನ, ಪರಿಕಲ್ಪನಾತ್ಮಕ ವಿಧಾನ, ಸಾಂಸ್ಕೃತಿಕ ಅಧ್ಯಯನ ವಿಧಾನ, ಚಾರಿತ್ರಿಕ ವಿಧಾನ ಮತ್ತು ಅವಲೋಕನ ವಿಧಾನವೆಂದು ವಿಂಗಡಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪ್ರಾಥಮಿಕ ಹಾಗೂ ಸಹಾಯಕ(ಆನುಷಂಗಿಕ) ಅಕರಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸಹಾಯಕ

ಆಕರಗಳಾದ ಪುಸ್ತಕಗಳು, ಸಾಹಿತ್ಯ ದಾಖಲೆ, ವೃತ್ತಪತ್ರಿಕೆ, ಅಂತರ್‌ಜಾಲ ಹಾಗೂ ಬ್ಲಾಗ್ ಬರಹಗಳು ಹಾಗೂ ಲೇಖನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈಗಾಗಲೇ ಕಾಡುಗೊಲ್ಲರ ಬಗ್ಗೆ ಬಂದಿರುವ ಅಧ್ಯಯಗಳು ಹಾಗೂ ಪುಸ್ತಕಗಳು ಮತ್ತು ಇಲ್ಲಿಯವರೆವಿಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ. ಇದರ ಆಧಾರದ ಮೇಲೆ ತಳಸ್ಪರ್ಶಿ ಅಧ್ಯಯನ ವಿಧಾನಗಳನ್ನು ರಚಿಸಿಕೊಂಡಿದ್ದು, ಚಾರಿತ್ರಿಕವಾಗಿ ಕಾಡುಗೊಲ್ಲ ಸಮುದಾಯದ ಬೆಳವಣಿಗೆ ಹಾಗೂ ವರ್ತಮಾನದ ಬಿಕ್ಕಟ್ಟುಗಳ ಕುರಿತು ಸಮಗ್ರ ಮಾಹಿತಿಗಳನ್ನು ಚಾರಿತ್ರಿಕ ವಿಧಾನದ ಮೂಲಕ ಕಲೆ ಹಾಕಲಾಗಿದೆ. ಕಾಡುಗೊಲ್ಲರ ಬಗೆಗಿನ ಅಧ್ಯಯನ ೧೯ನೇ ಶತಮಾನದಲ್ಲಿಯೇ ಪ್ರಾರಂಭವಾಯಿತು. ಜೀ.ಶಂ. ಪರಮಶಿವಯ್ಯನವರು "ದಕ್ಷಿಣ ಕರ್ನಾಟಕದ ಕಾವ್ಯ ಪ್ರಕಾರಗಳು," ತೀ.ನಂ. ಶಂಕರನಾರಾಯಣ ಅವರ "ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು," ಅಂಬಳಿಕೆ ಹಿರಿಯಣ್ಣನವರ "ಕಾಡುಗೊಲ್ಲರ ಜಾನಪದ ಗೀತೆಗಳು," ಮೀರಾಸಾಬಿಹಳ್ಳಿ ಶಿವಣ್ಣನವರ " ಕಾಡುಗೊಲ್ಲರ ಸಾಂಸ್ಕೃತಿಕ ನಾಯಕರು," ಕೃಷ್ಣಮೂರ್ತಿ ಹನೂರು ಇವರ "ಸಾವಿರದ ಸಿರಿ ಬೆಡಗು," ಕಾಳೇಗೌಡ ನಾಗವಾರ ಇವರ "ಬೇವಿನಹಳ್ಳಿ ಕಾಡುಗೊಲ್ಲರ ಹಟ್ಟಿ" ಒಂದು ಅಧ್ಯಯನ, ಕೆ.ಎಂ. ಮೇತ್ರಿ ಇವರ "ಕಾಡುಗೊಲ್ಲರ ಕಥನ ಕಾವ್ಯಗಳು ಮತ್ತು ಚೆಲುವರಾಜು ಇವರ "ಜುಂಜಪ್ಪನ ಮಹಾಕಾವ್ಯ' ಇನ್ನೂ ಮುಂತಾದ ವಿದ್ವಾಂಸರು ಬರೆದಿರುವ ಪುಸ್ತಕಗಳು ಹಾಗೂ ಲೇಖನಗಳನ್ನು ಆನುಷಂಗಿಕ ಆಕರಗಳಾಗಿ ಬಳಸಿಕೊಂಡು ಚಾರಿತ್ರಿಕ ವಿಧಾನದ ಮೂಲಕ ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಸಂಶೋಧನೆಗೆ ಅಧ್ಯಯನಕಾರರು ಎರಡು ರೀತಿಯ ಮಾಹಿತಿಯ ಮೂಲವನ್ನು ಅವಲಂಬಿಸಿರುತ್ತಾರೆ. ಆಯ್ದುಕೊಂಡ ವಿಷಯದ ಕುರಿತು ಈಗಾಗಲೇ ನಡೆದಿರುವ ಸಮೀಕ್ಷೆ, ವರದಿ, ಲೇಖನ, ಪುಸ್ತಕ, ಗೆಜೆಟಿಯರ್ ಇತ್ಯಾದಿ ಸಾಹಿತ್ಯಿಕ ಆಧಾರಗಳನ್ನು ಅನುಸರಿಸಿ ಅಥವಾ ಮಾಧ್ಯಮಿಕ ಆಕರಗಳಾಗಿ ಸಂಶೋಧನೆಗೆ ನೆರವಾಗುತ್ತದೆ. ಈ ಆಕರ ಅಥವಾ ಮಾಹಿತಿ ಒಂದು ಕಾಲಘಟ್ಟಕ್ಕೆ ಸೀಮಿತವಾಗಿದ್ದು ಚಾರಿತ್ರಿಕ ಅಂಶಗಳಾಗಿ ರೂಪಿತವಾಗುತ್ತದೆ. ಸ್ಥಿತಿಗಳು ಗತಿಸಿದರೆ ಬೇರೆಯದೇ ಫಲಿತಾಂಶವನ್ನು ನೀಡುತ್ತವೆ. ಈ ರೀತಿಯಾಗಿ ಬದಲಾದ ಸನ್ನಿವೇಶದಲ್ಲಿ ಕ್ಷೇತ್ರಾಧ್ಯಯನ ವಾಸ್ತವಿಕ ಅಂಶಗಳನ್ನು ನೀಡುತ್ತದೆ. ಈ ವಾಸ್ತವಿಕ ಅಂಶಗಳನ್ನು ಪಡೆಯಲು ಸಂಶೋಧಕರು ತಮ್ಮದೇ ಆದ ಅಧ್ಯಯನ ಕ್ರಮಗಳನ್ನು ಅನುಸರಿಸುವರು. ಇದನ್ನೇ ಅಧ್ಯಯನ ವಿಧಾನ ಎನ್ನುತ್ತೇವೆ. ಮಾಹಿತಿ ಕಲೆ ಹಾಕುವಲ್ಲಿ ಪ್ರಸ್ತುತ ಅಧ್ಯಯನವು ಸಮೀಕ್ಷಾ ವಿಧಾನ, ಸಹಭಾಗಿ ಅವಲೋಕನ, ವ್ಯಕ್ತಿ ಅಧ್ಯಯನ ಅಥವಾ ಏಕವಿಷಯ ಅಧ್ಯಯನ, ಸಂದರ್ಶನ ಹಾಗೂ ಪ್ರಶ್ನಾವಳಿ ವಿಧಾನಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ಈ ಮಾಹಿತಿಯು ಸಂಶೋಧನೆಯಲ್ಲಿ ಪ್ರಾಥಮಿಕ ಮಾಹಿತಿಯಾಗಿ ಪರಿಗಣಿತವಾಗುತ್ತದೆ. ಪ್ರಸ್ತುತ ಸಂಶೋಧನೆಯು ಚಿತ್ರದುರ್ಗ ಜಿಲ್ಲೆಯನ್ನು ಅಧ್ಯಯನ ವ್ಯಾಪ್ತಿಯನ್ನಾಗಿ ಆಯ್ದುಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಈ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಕಾಡುಗೊಲ್ಲರ ಸಮುದಾಯ ಬಹುಸಂಖ್ಯಾತವಾಗಿರುವುದರಿಂದ ಸರಳ ಯಾದೃಚ್ಛಿಕ ನಮೂನೆಯ ಮಾಹಿತಿ ಸಂಗ್ರಹಿಸಲಾಗಿದೆ.

## ಸರ್ವೆ ವಿಧಾನ

ಇದು ಕ್ಷೇತ್ರಕಾರ್ಯಾಧಾರಿತ ಅಧ್ಯಯನವಾಗಿದ್ದು, ಕ್ಷೇತ್ರಕಾರ್ಯದಲ್ಲಿ ಲಭ್ಯವಾದ ಅಂಕಿಸಂಖ್ಯೆಗಳನ್ನು ಪ್ರಾಥಮಿಕ ಅಥವಾ ಮೂಲ ಆಕರವೆಂದು ಪರಿಗಣಿಸಲಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಒಟ್ಟು ೩೩೧ ಕಾಡುಗೊಲ್ಲರ ಹಟ್ಟಿಗಳಿದ್ದು, ಇದರಲ್ಲಿ ಶೇ. ೨೦ರಂತೆ ಒಟ್ಟು ೬೦ ಕಾಡುಗೊಲ್ಲರ ಹಟ್ಟಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಚಿತ್ರದುರ್ಗ ತಾಲೂಕಿನಲ್ಲಿ ಒಟ್ಟು ೪೦ ಕಾಡುಗೊಲ್ಲರ ಹಟ್ಟಿಗಳಿದ್ದು ಅದರಲ್ಲಿ ೮ ಹಟ್ಟಿಗಳನ್ನೂ, ಮೊಳಕಾಲ್ಮೂರು ತಾಲೂಕಿನಲ್ಲಿ ೨೦ ಹಟ್ಟಿಗಳಲ್ಲಿ ೪ ಹಟ್ಟಿಗಳನ್ನು, ಹೊಸದುರ್ಗದ ೩೫ ಹಟ್ಟಿಗಳಲ್ಲಿ ೮ ಹಟ್ಟಿಗಳನ್ನು, ಹೊಳಲ್ಕೆರೆಯ ೩೪ ಹಟ್ಟಿಗಳಲ್ಲಿ ೯ ಹಟ್ಟಿಗಳನ್ನು, ಚಳ್ಳಕೆರೆಯ ೬೫ ಹಟ್ಟಿಗಳಲ್ಲಿ ೧೩ ಹಟ್ಟಿಗಳನ್ನು, ಹಿರಿಯೂರಿನ ೮೮ ಹಟ್ಟಿಗಳಲ್ಲಿ ೧೮ ಹಟ್ಟಿಗಳನ್ನು ಮಾದರಿ ನಮೂನೆಯಾಗಿ (Random Sampling) ಆಯ್ದುಕೊಳ್ಳಲಾಗಿದೆ. ಒಟ್ಟಾರೆಯಾಗಿ ಜಿಲ್ಲೆಯ ೩೦೧ ಹಟ್ಟಿಗಳಲ್ಲಿ ೬೦ ಹಟ್ಟಿಗಳನ್ನು ಸಂಪರ್ಕಿಸಿ ಕ್ಷೇತ್ರಕಾರ್ಯವನ್ನು ಈ ಮೇಲ್ಕಂಡ ಮಾಹಿತಿ ಸಂಗ್ರಹಣಾ ವಿಧಾನಗಳಿಂದ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ೬೦ ಹಟ್ಟಿಗಳ ಆಯ್ಕೆಯಲ್ಲಿ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗಿದೆ. ಪಟ್ಟಣದಿಂದ ದೂರವಿರುವ ೨೦ ಹಟ್ಟಿಗಳನ್ನು ಮತ್ತು ಪಟ್ಟಣಕ್ಕೆ ಸಮೀಪವಿರುವ ೨೦ ಹಟ್ಟಿಗಳನ್ನು ಹಾಗೂ ಪಟ್ಟಣಕ್ಕೆ ಹೊಂದಿಕೊಂಡ ೨೦ ಹಟ್ಟಿಗಳನ್ನು ಸೇರಿಸಿ ಆಯ್ದುಕೊಂಡು ೧೯೯೧ ಕುಟುಂಬಗಳನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಇದಲ್ಲದೇ ಇವರ ಆರ್ಥಿಕತೆ, ಆಚರಣೆ ಮತ್ತು ಸಂಪ್ರದಾಯ ಇತ್ಯಾದಿ ಸಮಗ್ರ ಮಾಹಿತಿ ಸಂಗ್ರಹಣೆಯ ಉದ್ದೇಶದಿಂದ ೫೦ ಜನ ತಿಳುವಳಿಕೆದಾರರನ್ನು ವ್ಯಕ್ತಿ ಅಧ್ಯಯನ ವಿಧಾನಕ್ಕೆ ಒಳಪಡಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಕೌಟುಂಬಿಕ ಸಮೀಕ್ಷೆಯಲ್ಲಿ ತಾಲೂಕುವಾರು, ಜನಸಂಖ್ಯೆ, ಲಿಂಗಾನುಪಾತ, ವಿವಾಹಿತ ಹಾಗೂ ಅವಿವಾಹಿತ ವಿಧವೆ/ವಿಧುರ ಮಾಹಿತಿ(ಸಾಮಾಜಿಕ ಸ್ಥಾನಮಾನ) ಶೈಕ್ಷಣಿಕ ಸ್ಥಾನಮಾನ, ವೃತ್ತಿಯ ಪ್ರಮಾಣ, ಉದ್ಯೋಗ ಮತ್ತು ನಿರುದ್ಯೋಗ, ಜಮೀನಿನ ಮಾಲೀಕತ್ವ ಪಶುಸಂಪತ್ತು, ಇತ್ಯಾದಿ ಅಂಶಗಳನ್ನೆ ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಪಟ್ಟಣಕ್ಕೆ ದೂರವಿರುವ, ಪಟ್ಟಣಕ್ಕೆ ಹೊಂದಿಕೊಂಡ ಹಾಗೂ ಪಟ್ಟಣಕ್ಕೆ ಸಮೀಪವಿರುವ ಕಾಡುಗೊಲ್ಲರ ಹಟ್ಟಿಗಳೆಂದು ವಿಭಾಗಿಸಿರುವ ಕಾರಣ ಕಾಡುಗೊಲ್ಲರ ಬಗ್ಗೆ ಇದೊಂದು ಸಮಗ್ರ ಅಧ್ಯಯನವಾಗಿದೆ. ಇದರಿಂದ ಇವರ ಆಚಾರ ವಿಚಾರ, ಆರ್ಥಿಕತೆ, ಸಂಪ್ರದಾಯ, ಸಂಸ್ಕೃತಿ ಹಾಗೂ ಆಚರಣೆಗಳ ಬದಲಾವಣೆ ತಿಳಿಯಲು ಅನುಕೂಲವಾಗುತ್ತದೆ. ಬದಲಾದ ಜಾಗತೀಕರಣ ಹಾಗೂ ಆಧುನಿಕತೆಗೆ ಕಾಡುಗೊಲ್ಲರು ಹೇಗೆ ಹೊಂದಿಕೊಂಡಿದ್ದಾರೆಂದು ನೋಡುವುದು ಹಾಗೂ ಹೊಂದಿಕೊಳ್ಳುವಲ್ಲಿ ಇರುವ ಅಡೆತಡೆಗಳು ಹಾಗೂ ಹೊಂದಿಕೊಂಡ ನಂತರದ ಬದಲಾವಣೆಗಳನ್ನು ನೋಡುವುದು ಈ ಅಧ್ಯಯನದ ಉದೇಶವಾಗಿದೆ.

## ಪ್ರಶ್ನಾವಳಿ ವಿಧಾನ

ಕಾಡುಗೊಲ್ಲರು ಇಂದಿನ ಜಾಗತೀಕರಣ ಹಾಗೂ ಆಧುನಿಕತೆಯ ಹಿನ್ನೆಲೆಯಲ್ಲಿ ಅವರ ಸಾಮಾಜಿಕತೆ, ಆರ್ಥಿಕತೆ, ಶಿಕ್ಷಣ, ಸಾಂಸ್ಕೃತಿಕತೆ ಮತ್ತು ರಾಜಕೀಯ ಕುಲಪಂಚಾಯಿತ್ತಿಗಳು, ಸಾಮಾನ್ಯ ಸೌಲಭ್ಯಗಳು,

ಆರ್ಥಿಕ ಸೌಲಭ್ಯಗಳು ಹಾಗೂ ಸರ್ಕಾರಿ ಸೌಲಭ್ಯಗಳನ್ನು ಪಡೆಯುವಲ್ಲಿ ಸಫಲರಾಗಿದ್ದಾರೋ ಅಥವಾ ವಿಫಲರಾಗಿದ್ದಾರೋ ಇವರ ಆರ್ಥಿಕ ಜೀವನ ಯಾವ ನಿಟ್ಟಿನಲ್ಲಿ ಸಾಗಿದೆ ಎಂಬ ವಿಚಾರವನ್ನು ತಿಳಿಯಲು ಪ್ರಶ್ನಾವಳಿಗಳನ್ನು ಸಿದ್ಧಪಡಿಸಿ ಆ ಮೂಲಕ ಮಾಹಿತಿ ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಕಾಡುಗೊಲ್ಲರ ಆರ್ಥಿಕತೆಯನ್ನು ಮೂಲವಾಗಿಟ್ಟುಕೊಂಡು ಈ ಕೆಳಕಂಡಂತೆ ಪ್ರಶ್ನಾವಳಿಗಳನ್ನು ವಿಭಾಗಿಸಲಾಗಿದೆ. ಸಾಮಾನ್ಯ ಮಾಹಿತಿಗಳಾದ ಅವರ ಮಾತೃಭಾಷೆ, ಮನೆದೇವರು, ಗೋತ್ರ, ಕುಲಚಿನ್ಹೆ, ಮನೆತನದ ಹೆಸರು, ವಾಸಸ್ಥಾನ, ಪಂಚಾಯಿತಿ ಹೆಸರು, ತಾಲ್ಲೂಕು, ಜಿಲ್ಲೆ, ಕುಟುಂಬ ಸದಸ್ಯರ ಹೆಸರು, ವಯಸ್ಸು, ವೈವಾಹಿಕ ಸ್ಥಾನಮಾನ ಮತ್ತು ಶಿಕ್ಷಣದ ಬಗ್ಗೆ ಹಾಗೂ ಅವರ ಆರ್ಥಿಕತೆಗೆ ಸಂಬಂಧಿಸಿದಂತೆ ಭೂಹಿಡುವಳಿ, ನಿವೇಶನ, ವಾಸದ ಮನೆ, ಎತ್ತು, ಹೋರಿ, ಆಕಳು, ಕುರಿ, ಮೇಕೆ, ವಾಸಸ್ಥಾನಗಳು ಮತ್ತು ಅವರ ಕಸುಬುಗಳ ಬಗ್ಗೆ ಹಾಗೂ ಇನ್ನಿತರೆ ಸೌಲಭ್ಯಗಳಾದ ಪಡಿತರ ಚೀಟಿ, ಅಡುಗೆ ಅನಿಲ ಸಂಪರ್ಕ, ನಲ್ಲಿ, ಶೌಚಾಲಯ, ಸ್ನಾನಗೃಹ, ವಾಹನಗಳು ಮತ್ತು ಇತರೆ ಮೂಲಭೂತ ಸೌಲಭ್ಯಗಳ ಬಗ್ಗೆ ಪ್ರಶ್ನಾವಳಿಗಳನ್ನು ತಯಾರಿಸಿ ಇದರ ಮೂಲಕ ಅವರಿಂದ ಉತ್ತರವನ್ನು ಕಂಡುಕೊಳ್ಳಲಾಯಿತು.

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಒಟ್ಟು ೫೦ ವ್ಯಕ್ತಿ ಸಂದರ್ಶನಗಳನ್ನು ಕೈಗೊಂಡು ಇವುಗಳನ್ನು ಕೌಟುಂಬಿಕ, ಸಾಮಾಜಿಕ, ಆರ್ಥಿಕ, ಶಿಕ್ಷಣ, ಸಾಂಸ್ಕೃತಿಕ ಮತ್ತು ರಾಜಕೀಯ ಎಂಬ ಆರು ವಿಭಾಗಗಳಾಗಿ ಮಾಡಿ ಕೌಟುಂಬಿಕ ವಿಭಾಗದಲ್ಲಿ ೧೦ ಪ್ರಶ್ನೆಗಳು, ಸಾಮಾಜಿಕ ವಿಭಾಗದಲ್ಲಿ ೧೨ ಪ್ರಶ್ನೆಗಳು, ಆರ್ಥಿಕ ವಿಭಾಗದಲ್ಲಿ ೨೪ ಪ್ರಶ್ನೆಗಳು, ಶಿಕ್ಷಣಕ್ಕೆ ಸಂಬಂಧಿಸಿದಂತೆ ೧೭ ಪ್ರಶ್ನೆಗಳು, ಸಾಂಸ್ಕೃತಿಕತೆಗೆ ಸಂಬಂಧಿಸಿದಂತೆ ೨೭ ಪ್ರಶ್ನೆಗಳು ಮತ್ತು ರಾಜಕೀಯ ಹಾಗೂ ಕುಲಪಂಚಾಯಿತಿಗೆ ಸಂಬಂಧಿಸಿದಂತೆ ೨೯ ಪ್ರಶ್ನೆಗಳನ್ನೊಳಗೊಂಡಂತೆ ಒಟ್ಟು ೧೧೯ ಪ್ರಶ್ನೆಗಳನ್ನು ವ್ಯಕ್ತಿ ಸಂದರ್ಶನದಲ್ಲಿ ಅಳವಡಿಸಿಕೊಂಡು ಉತ್ತರ ಪಡೆಯಲಾಯಿತು.

**ಅವಲೋಕನ ವಿಧಾನ**

ನಾನು ಸಹ ಚಿತ್ರದುರ್ಗ ಜಿಲ್ಲೆಯವನು ಮತ್ತು ಕಾಡುಗೊಲ್ಲರ ಸಮುದಾಯದವನಾಗಿರುವುದರಿಂದ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲರ ಹಟ್ಟಿಗಳ ಪರಿಚಯ ಹಾಗೂ ಅವರ ಹಟ್ಟಿಗಳ ಆಚರಣೆಗಳು, ಪಾರಂಪರಿಕ ಕಸುಬುಗಳು, ಸಂಸ್ಕೃತಿ, ಆಚಾರ ವಿಚಾರ, ಸಾಮಾಜಿಕತೆ ಮತ್ತು ಆಚರಿಸುವ ಹಬ್ಬಹರಿದಿನಗಳು, ಅವರ ಸಾಮಾಜಿಕಾರ್ಥಿಕ ಕಾರ್ಯಕ್ರಮಗಳು ಇನ್ನೂ ಕಾಡುಗೊಲ್ಲರ ಬದುಕನ್ನು ಕುರಿತಾದ ಅಂಶಗಳನ್ನು ಈಗಾಗಲೇ ತಿಳಿದಿದ್ದರೂ ಸಹ ನನ್ನ ಅಧ್ಯಯನದ ದೃಷ್ಟಿಕೋನದಿಂದ ಮಾಹಿತಿಗಳನ್ನು ಕಂಡುಕೊಳ್ಳಲು ಹಲವಾರು ಬಾರಿ ಭೇಟಿ ನೀಡಿ ಅವರನ್ನು ಸಂಪರ್ಕಿಸುತ್ತಾ ಬಂದಿದ್ದು, ಇದರ ಜೊತೆಯಲ್ಲಿ ಹಟ್ಟಿಗಳ ಮುಖಂಡರು, ಗೌಡ, ಪೂಜಾರಿಗಳನ್ನು ಭೇಟಿಮಾಡಿ ಕಾಡುಗೊಲ್ಲರ ಬದುಕನ್ನು ತಿಳಿಯುವಲ್ಲಿ ಈ ಅವಲೋಕನ ವಿಧಾನ ಅಷ್ಟೇನೂ ನನಗೆ ಕಷ್ಟವಾಗಲಿಲ್ಲ. ಅದರೂ ಸಹ ಅವರ ಆಚಾರ, ವಿಚಾರ, ಆರ್ಥಿಕತೆ, ಸಂಪ್ರದಾಯ, ಕಟ್ಟುಪಾಡುಗಳು, ಪ್ರಚಲಿತ ಸಮಸ್ಯೆಗಳು

ಹಾಗೂ ಆರ್ಥಿಕತೆಯಲ್ಲಿನ ಇತ್ತೀಚಿನ ಬದಲಾವಣೆಗಳನ್ನು ಅವಲೋಕನ ವಿಧಾನದ ಮೂಲಕ ತಿಳಿಯಲು ಸಾಧ್ಯವಾಯಿತು.

**ಸಂದರ್ಶನ ವಿಧಾನ**

ವಿಷಯದ ಉದ್ದೇಶ, ಆಶಯಗಳಿಗನುಗುಣವಾಗಿ ಅವರ ಪರಿಸರ ಪರಿಸ್ಥಿತಿಯ ನೈಜ ಹಿನ್ನೆಲೆಯಲ್ಲಿ ಅವರೊಡನೆ ಮುಖಾಮುಖಿಯಾಗಿ ನೇರ ಸಂದರ್ಶನ ನಡೆಸಿ ಮಾಹಿತಿ ಸಂಗ್ರಹಿಸಲಾಗಿದೆ. ಇದು ಆನುಷಂಗಿಕ ಅಕರಗಳು ಹುಟ್ಟಿಸಬಹುದಾದ ಬೆರಗು, ಅರೆಬರೆ ಮಾಹಿತಿಗಳನ್ನು ನಿವಾರಿಸಿ ಅವರ ಬದುಕಿನಲ್ಲಿ ಕಾಲಾನುಕ್ರಮದಲ್ಲಾದ ಬದಲಾವಣೆಗಳನ್ನು ಅರಿಯಲು ಸಹಾಯಕವಾಗಿದೆ. ಇದರ ಜೊತೆಗೆ ಕಾಡುಗೊಲ್ಲರ ಸಾಮಾಜಿಕಾರ್ಥಿಕ ಪರಿಸ್ಥಿತಿಗಳ ಅಧ್ಯಯನಕ್ಕೆ ನಿಶ್ಚಿತ ಪ್ರಶ್ನಾವಳಿಗಳನ್ನು ರೂಪಿಸಿಕೊಂಡು ಒಟ್ಟು ೫೦ ವ್ಯಕ್ತಿ ಸಂದರ್ಶನ ಮತ್ತು ೧೪೩೧ ಕುಟುಂಬಗಳ ಮುಖ್ಯಸ್ಥರು ಮತ್ತು ಕೆಲ ಸದಸ್ಯರುಗಳನ್ನು ಭೇಟಿ ಮಾಡಿ ಅವರ ಕೌಟುಂಬಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಅಂಶಗಳನ್ನು ಪ್ರಶ್ನೆಗಳ ಮೂಲಕ ಹಾಗೂ ಅವಲೋಕಿಸುವ ಮೂಲಕ ವಿಷಯಗಳನ್ನು ಕ್ರೋಢೀಕರಿಸಲಾಯಿತು ಹಾಗೂ ಕ್ಷೇತ್ರಕಾರ್ಯದಲ್ಲಿ ಪಡೆದಂತಹ ವಿವರಗಳನ್ನು ಸಂಖ್ಯಾಶಾಸ್ತ್ರೀಯ ವಿಧಾನದ ಮೂಲಕ ವಿಶ್ಲೇಷಿಸಿ ಕೋಷ್ಟಕ ಹಾಗೂ ಆಕೃತಿ ಮತ್ತು ರೇಖಾತ್ಮಕ ವಿಧಾನದಲ್ಲಿ ನೀಡಲಾಗಿದೆ.

**೧.೫. ಅಧ್ಯಯನದ ಮಹತ್ವ**

ಕಾಡುಗೊಲ್ಲರ ಆರ್ಥಿಕತೆಯನ್ನು ಕೇಂದ್ರವಾಗಿಟ್ಟುಕೊಂಡು ನಡೆದಿರುವ ಅಧ್ಯಯನಗಳು ಕಾಡುಗೊಲ್ಲರ ಬುಡಕಟ್ಟಿನ ಅರ್ಥವ್ಯವಸ್ಥೆಯ ಹಿನ್ನೆಲೆಯಲ್ಲಿ ಅವರ ಸಮಸ್ಯೆಗಳ ವಿಶ್ಲೇಷಣೆಯು ಸೂಕ್ತವಾಗಿ ನಡೆದಿದ್ದರೂ ಸಹ ಅಷ್ಟೊಂದು ವಾಸ್ತವಕ್ಕೆ ಹತ್ತಿರ ಇಲ್ಲವೆಂದು ನನ್ನ ಭಾವನೆ. ಏಕೆಂದರೆ ಬುಡಕಟ್ಟು ಆರ್ಥಿಕತೆ ಎಂಬ ಪರಿಕಲ್ಪನೆಯೇ ಕನ್ನಡದ ಮಟ್ಟಿಗೆ ತುಂಬಾ ಹೊಸದು. ಕಾಡುಗೊಲ್ಲರ ಬಗ್ಗೆ ಇದುವರೆಗಿನ ಆರ್ಥಿಕ ಅಧ್ಯಯನಗಳು ತೀರ ಕಡಿಮೆ. ಕಾಡುಗೊಲ್ಲರ ಸಾಮಾಜಿಕಾರ್ಥಿಕ ಸಮಸ್ಯೆಗಳು, ಆರ್ಥಿಕಾಭಿವೃದ್ಧಿ ಇತ್ಯಾದಿಗಳ ಹೆಸರಿನಲ್ಲಿ ಅವರ ತಲಾದಾಯ ಕಡಿಮೆ ಇದ್ದು, ಇವರ ಅನುಭೋಗವೂ ಸಹ ಕಡಿಮೆ ಇದ್ದು, ಜೀವನ ಮಟ್ಟ ತುಂಬಾ ನಿಕೃಷ್ಟವಾಗಿದೆ. ಒಬ್ಬ ಮನುಷ್ಯ ಸುಖವಾಗಿ ಬದುಕಲು ಅಷ್ಟೇ ಏಕೆ ಕನಿಷ್ಠ ಜೀವನ ನಡೆಸಲು ಅವಶ್ಯಕ ಅನುಕೂಲವಿಲ್ಲವೆಂಬ ಇತ್ಯಾದಿ ಅಂಶಗಳಿಗೆ ಆದ್ಯತೆ ನೀಡಿವೆ. ಬುಡಕಟ್ಟು ಅರ್ಥಶಾಸ್ತ್ರ ಎಂಬ ಸಮಗ್ರ ದೃಷ್ಟಿಕೋನದ ಅಧ್ಯಯನ ಇಂದಿನ ಕಾಲದ ಅವಶ್ಯಕತೆ ಹಾಗೂ ಅನಿವಾರ್ಯವಾಗಿದೆ.

ವರ್ತಮಾನದದಲ್ಲಿ ಕಾಡುಗೊಲ್ಲರು ಯಾವ ಬಗೆಯ ಸಾಮಾಜಿಕ ಆರ್ಥಿಕ ಸ್ಥಾನಮಾನಗಳನ್ನು ಹೊಂದಿದ್ದಾರೆ, ಅವರಲ್ಲಿ ಆದ ಬದಲಾವಣೆಗಳಿಗೆ ಯಾವ ಚಾರಿತ್ರಿಕ ಅನಿವಾರ್ಯಗಳು ಕಾರಣವಾದವು ಹಾಗೂ ಕಾಡುಗೊಲ್ಲರ ವರ್ತಮಾನದ ಬದುಕು ಯಾವ ಬಗೆಯ ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗುತ್ತವೆ, ಜಾಗತೀಕರಣದ ಬಿರುಗಾಳಿ ಅವರನ್ನು ಹೇಗೆ ಬದಲಾಯಿಸಿದೆ. ಎಂಬ

ಪ್ರಶ್ನೆಗಳು ಬಹು ಮುಖ್ಯವಾದುವುಗಳೆಂದು ಭಾವಿಸಿದ್ದೇನೆ. ಸಾಮಾಜಿಕ ಬದಲಾವಣೆಯು ಕೇವಲ ಕಾಲದ ಒತ್ತಡದ ಅನಿವಾರ್ಯತೆಯಿಂದ ಮಾತ್ರ ಸಂಭವಿಸುವಂತದ್ದಲ್ಲ. ಅದಕ್ಕೆ ಕಾರಣ ಆಯಾ ಸಮುದಾಯಗಳು ಪಾಲ್ಗೊಳ್ಳುವ ಒಟ್ಟು ವ್ಯವಸ್ಥೆಯ ರಾಜಕಿಯಾರ್ಥಿಕ ಚಲನೆಗಳಲ್ಲಿ ಕಾರಣವಾಗುತ್ತವೆ. ಪಾರಂಪರಿಕ ಸಮಾಜಗಳು ಇನ್ನೂ ಜೀವಂತವಿರುವ ಭಾರತದಂತಹ ದೇಶದಲ್ಲಿ ಕಾಡುಗೊಲ್ಲರ ಸಾಮಾಜಿಕಾರ್ಥಿಕ ಸ್ಥಾನಮಾನಗಳ ಕುರಿತ ಅಧ್ಯಯನವು ಅನೇಕ ಬಿಕ್ಕಟ್ಟುಗಳನ್ನು ಎದುರಿಸಬೇಕಾಗುತ್ತದೆ.

ಕಾಡುಗೊಲ್ಲರ ಅಧ್ಯಯನವು ಸಾಮಾಜಿಕಾರ್ಥಿಕ ಸ್ಥಿತಿಗತಿಗಳನ್ನು ವಿವರಿಸಿಕೊಳ್ಳುವ ಪ್ರಯತ್ನವಾಗಿದೆ. ಅದರಲ್ಲೂ ಕಾಡುಗೊಲ್ಲರ ಆರ್ಥಿಕ ಚಟುವಟಿಕೆಗಳನ್ನು ವಿಶೇಷವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ. ಶ್ರೇಣೀಕೃತ ವ್ಯವಸ್ಥೆಯ ಈ ಸಮಾಜದಲ್ಲಿ ಅವರು ರೂಢಿಸಿಕೊಂಡು ಬಂದ ದುಡಿಮೆಯ ಮಾದರಿಗಳಾವುವು? ವರ್ತಮಾನದಲ್ಲಿ ಅವರ ಆರ್ಥಿಕ ವ್ಯವಸ್ಥೆಯ ಸ್ವರೂಪವೇನು ಎಂಬ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಈ ಅಧ್ಯಯನ ಕೈಗೊಳ್ಳಲಾಗಿದೆ.

ಅಲೆಮಾರಿಯಾಗಿದ್ದ ಮಾನವನ ನೆಲೆಗೊಳಿಸಿದ ಜೀವನ ಆರಂಭಗೊಂಡಿದ್ದೇ ನದಿತಟದ ಮೇಲೆ. ಅಂದರೆ ನಾಗರಿಕತೆಯ ಉಗಮ ನದಿಯ ಅಂಚಿನ ಮೇಲೆ ಇಂತಹ ನದಿಗಳ ಉಗಮಸ್ಥಾನದಿಂದ ಕೂಡು ಸ್ಥಾನಗಳವರೆಗೆ ತನ್ನೊಳಗೆ ವೈವಿಧ್ಯಮಯ ಭೌಗೋಳಿಕತೆಯನ್ನು ಒಳಗೊಂಡಿರುತ್ತದೆ. ನದಿಯ ಹರಿವಿನಂತೆ ಮಾನವನ ವಲಸೆ ಆರಂಭವಾಯಿತು. ಈ ವಲಸೆಯು ಸಂಘರ್ಷಗಳು, ಸಂಪತ್ತಿನ ಕೊರತೆ, ಹವಾಮಾನ ವೈಪರೀತ್ಯಗಳು ಇತ್ಯಾದಿ ಕಾರಣಗಳಿಂದ ಆರಂಭವಾಯಿತು. ಇದೇ ಮಾದರಿಯ ಕರ್ನಾಟಕದ ಬಹುತೇಕ ಸಮುದಾಯಗಳು ಅವಿಭಾಜಿತ ಆಂಧ್ರಪ್ರದೇಶದ ಮೂಲದಿಂದ ವಲಸೆ ಆರಂಭಿಸಿ ಕರ್ನಾಟಕದ ಬಯಲುಸೀಮೆಯಲ್ಲಿ ನೆಲೆ ನಿಂತಿವೆ. ಅಂತಹ ಸಮುದಾಯದಲ್ಲಿ ಕಾಡುಗೊಲ್ಲ ಎಂಬ ಪಶುಪಾಲನಾ ಸಮುದಾಯವು ಒಂದಾಗಿದೆ. ಕಾಡುಗೊಲ್ಲರು ನೆಲೆ ನಿಂತ ಭಾಗವು ಅಂದು ಪಾಳೇಗಾರಿಕೆಯ ಆಳ್ವಿಕೆಯ ಅವಧಿಯಲ್ಲಿ ಅನೇಕ ಹುಲ್ಲುಗಾವಲು ಮೈದಾನಗಳಿಂದ ಸಂಪತದ್ಭರಿತ ಪ್ರದೇಶವಾಗಿತ್ತು. ಚಿನ್ನಹಗರಿ ಮತ್ತು ವೇದಾವತಿ ನದಿಗಳು ಅಂದು ತುಂಬಿಹರಿಯುತ್ತಾ ಜನರ ಮತ್ತು ಜಾನುವಾರುಗಳ ಬದುಕಿಗೆ ಆಸರೆಯಾಗಿದ್ದವು. ಆದರೆ ಇಂದು ಹವಾಮಾನ ವೈಪರೀತ್ಯಕ್ಕೆ ಕಾರಣವಾಗಿರುವ ಮಾನವನ ದುರಾಸೆಯ ಆವಿಷ್ಕಾರಗಳು ಮಾನವನ ಬದುಕಿಗೆ ಅಂತ್ಯ ಹಾಡುವ ಹಂತಕ್ಕೆ ತಲುಪಿದೆ. ಈ ಪ್ರದೇಶದ ಹುಲ್ಲುಗಾವಲುಗಳು ಅನಾವೃಷ್ಟಿಯಿಂದ ಬಂಜರುಭೂಮಿಗಳಾಗಿ ಈ ಹುಲ್ಲುಗಾವಲುಗಳನ್ನು ನಂಬಿಕೊಂಡಿರುವ ಪಶುಪಾಲಕರಾದ ಕಾಡುಗೊಲ್ಲರ ಆರ್ಥಿಕತೆ ತಳಮಟ್ಟಕ್ಕೆ ಇಳಿದಿದೆ. ಇದಲ್ಲದೆ ಜಾಗತೀಕರಣದ ಪ್ರಭಾವದಿಂದಾಗಿ ಪಾರಂಪರಿಕ ಕಸುಬುಗಳು ನೆಲ ಕಚ್ಚಿವೆ. ಇದೇ ಸಂದರ್ಭದಲ್ಲಿ ಕುರಿಗಾಹಿಗಳ ಬದುಕಿಗೆ ಆಸರೆಯಾಗಿದ್ದು ಹುಲ್ಲುಗಾವಲುಗಳನ್ನು ಆಖಆಔ ನಂತರ ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳು ತನ್ನೊಡಲ ಒಳಗೆ ಹಾಕಿಕೊಂಡು ಪಶುಗಳ ಮತ್ತು ಪಶುಪಾಲಕರ ಬದುಕು ಸಂರಕ್ಷಣೆಗೆ ಸಿಲುಕಲು ಕಾರಣವಾಗುತ್ತಿದೆ.

ಜಾಗತೀಕರಣ ಎಂಬ ಪರಿಕಲ್ಪನೆ ವಿಶಾಲವಾದ ವ್ಯಾಪ್ತಿಯಾಗಿದ್ದು, ಅದು ಪ್ರವೇಶ ಮಾಡದ ಕ್ಷೇತ್ರವಿಲ್ಲ. ಇದರಿಂದಾಗಿ ಇಂದಿಗೂ ಪ್ರತ್ಯೇಕ ವಾಸಸ್ಥಾನ, ಮಡಿ ಮೈಲಿಗೆ, ತನ್ನದೇ ಆದ ಶುದ್ಧತೆಯ

ಬದುಕು ಇದರ ಒಡೆತನಕ್ಕೆ ಸಿಲುಕಿ ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಲು ಪರದಾಡುತ್ತಿದೆ. ಇಂತಹ ಸಂದಿಗ್ಧ ಸಂದರ್ಭದಲ್ಲಿ ಕಾಡುಗೊಲ್ಲರು ಆಧುನಿಕತೆಗೆ ಹೊಂದಿಕೊಳ್ಳಲು ಆಗದೆ ಮತ್ತು ಅನನ್ಯತೆ ಅಥವಾ ಅಸ್ಮಿತೆಯನ್ನು ಉಳಿಸಿಕೊಳ್ಳಲಾಗದೇ ಗೊಂದಲದ ಗೂಡಿನಲ್ಲಿ ಬಂಧಿಯಾಗಿ ಮುಖ್ಯವಾಹಿನಿಯ ಸಮಾಜದಿಂದ ದೂರ ಉಳಿದಿದ್ದಾರೆ. ಈ ಎಲ್ಲಾ ಕಾರಣಗಳಿಂದ ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ ಎಂಬ ಅಧ್ಯಯನವು ಮಹತ್ವದ್ದಾಗಿದೆ.

ಪ್ರಸ್ತುತ ಅಧ್ಯಯನವು ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ ಎಂಬ ಶೀರ್ಷಿಕೆ ಅಡಿಯಲ್ಲಿ ಈ ಅಧ್ಯಯನವು ಕಾಡುಗೊಲ್ಲರ ಸಾಮಾಜಿಕ ಬದುಕು ಹಿನ್ನೆಲೆ, ಆರ್ಥಿಕ ಸ್ಥಿತಿಗತಿ, ಜಾಗತೀಕರಣದ ಪ್ರಭಾವ, ವೃತ್ತಿಗಳ ಸ್ಥಿತ್ಯಂತರ ಎಲ್ಲಾ ಸಮಗ್ರ ಅಂಶಗಳ ಕುರಿತು ಮಾಹಿತಿ ಕಲೆಹಾಕಿ ವಿಶ್ಲೇಷಣೆಗೆ ಒಳಪಡಿಸಿ, ಕಾರಣ ಮತ್ತು ಪರಿಣಾಮಗಳನ್ನು ಕಂಡುಕೊಂಡು ಕ್ರಮ/ ವಿಧಾನದ ಕುರಿತು ತಿಳುವಳಿಕೆ ಮೂಡಿಸುತ್ತದೆ.

### ೧.೬. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಕಾಡುಗೊಲ್ಲರನ್ನು ಕುರಿತು ಅನೇಕ ಅಧ್ಯಯನಗಳು ನಡೆದಿದ್ದರೂ ಇಲ್ಲಿ ಇನ್ನೂ ಅಧ್ಯಯನಕ್ಕೆ ಅವಕಾಶಗಳಿವೆ. ಅಧ್ಯಯನಕಾರರು ಮಾಡಿರುವ ಅಧ್ಯಯನಗಳು ಅಧ್ಯಯನಕ್ಕೆ ಆಕರ ಕೃತಿಗಳಾಗಿದ್ದು, ಸಂಪೂರ್ಣವಾದ ಅಧ್ಯಯನಗಳು ನಡೆದಿದ್ದರೂ ಸಹ ಇನ್ನೂ ಅಧ್ಯಯನಕ್ಕೆ ಅವಕಾಶಗಳು ಇವೆ ಎಂದು ಹೇಳಬಹುದು. ಕಾಡುಗೊಲ್ಲರ ಸಾಮಾಜಿಕತೆ ಹಾಗೂ ಧಾರ್ಮಿಕತೆಯ ಬಗ್ಗೆ ನಡೆದಿರುವ ಅಧ್ಯಯಗಳು ತುಂಬಾ ಇವೆ. ಆದರೆ ಕಾಡುಗೊಲ್ಲರ ಆರ್ಥಿಕತೆಯ ಬಗ್ಗೆ ತುಂಬಾ ಆಳವಾದ ಅಧ್ಯಯನಗಳು ನಡೆದಿರುವುದಿಲ್ಲ, ಆ ಕಾರಣದಿಂದ ಈ ಅಧ್ಯಯನವನ್ನು ಅವರ ಆರ್ಥಿಕತೆಯ ಕಡೆ ಹೆಚ್ಚು ಗಮನ ಹರಿಸಿರುವುದರಿಂದ ಈ ನನ್ನ ಅಧ್ಯಯನ ಕಾಡುಗೊಲ್ಲರ ಆರ್ಥಿಕತೆ ತಿಳಿದುಕೊಳ್ಳುವಲ್ಲಿ ಉಪಯುಕ್ತವಾದದ್ದು ಎಂದು ಹೇಳಬಹುದು. ಇದರಿಂದ ಕಾಡುಗೊಲ್ಲರಲ್ಲಿ ಜಾಗತೀಕರಣ ಹಾಗೂ ಆಧುನೀಕರಣ ಯಾವ ಪ್ರಭಾವವನ್ನು ಬೀರಿದೆ ಎಂದು ತಿಳಿಯಬಹುದು. ಇದುವರೆಗೂ ನಡೆದಿರುವ ಸಮೀಕ್ಷೆಗಳಲ್ಲಿ ಕೆಲವೊಂದನ್ನು ಕೆಳಗಿನಂತೆ ನೋಡಬಹುದು.

***'The Journal of the Anthropalogical Society'*** ಎಂಬ ಅಂದಿನ ಬೊಂಬಾಯಿ ಸರ್ಕಾರ ಪ್ರಕಟಿಸುತ್ತಿರುವ ಪತ್ರಿಕೆಯಲ್ಲಿ ಎಫ್.ಫಾಸೆಟ್ ಅವರು ೧೮೮೮ರಲ್ಲಿ ಕಾಡುಗೊಲ್ಲರ ಕುರಿತಾದ ತಮ್ಮ ಲೇಖನದಲ್ಲಿ ಕಾಡುಗೊಲ್ಲರನ್ನು 'ಅಡವಿಗೊಲ್ಲರು' ಎಂದು ಮೊದಲಬಾರಿಗೆ ಹೆಸರಿಸಿದ್ದು, ಈ ಜನಾಂಗದವರು ಮೂಲತಃ ಬುಡಕಟ್ಟು ಜನರಾಗಿದ್ದರು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಅಲ್ಲದೆ ಕಾಡುಗೊಲ್ಲ ಮಹಿಳೆಯರು ಒಳಪಡಲೇಬೇಕಾದ ಸಾಮಾಜಿಕ ವ್ಯವಸ್ಥೆಯ ಕಟ್ಟುನಿಟ್ಟಿನ ನಿಯಮಗಳ ಬಗ್ಗೆ ಯಥಾವತ್ತಾಗಿ ಚಿತ್ರಿಸಿದ್ದಾರೆ.

*೧೮೯೧ ಮತ್ತು ೧೯೦೧ರ ಜನಗಣತಿಯಲ್ಲಿ ಗೊಲ್ಲರ ಅಂಕಿ ಅಂಶಗಳನ್ನು ಗಮನಿಸಿದಾಗ ಗೊಲ್ಲರಲ್ಲಿ* ***'ಕಾಡುಗೊಲ್ಲ'*** *ಮತ್ತು* ***'ಊರುಗೊಲ್ಲ'*** ಎಂಬ ಎರಡು ಪ್ರಭೇದಗಳನ್ನು ಪ್ರತ್ಯೇಕವಾಗಿ ಗುರುತಿಸಲಾಗಿದೆ.

ನಂತರದ ಜನಗಣತಿ ಕಾರ್ಯದ ಸಮಯದಲ್ಲಿ ಈ ಎರಡೂ ಪ್ರಭೇದಗಳನ್ನು ಒಟ್ಟಿಗೆ ಸಮೀಕರಿಸಿ 'ಗೊಲ್ಲ' ಎಂಬುದಾಗಿ ಗುರುತಿಸಲಾಗಿದೆ. ೨೬-೧೧-೧೯೩೦ರ ಮದ್ರಾಸ್ ಸರ್ಕಾರದ ಆದೇಶದ ಅನ್ವಯ ಎಲ್ಲಾ ಗೊಲ್ಲರ ಪ್ರಭೇದಗಳನ್ನು ಒಳಗೊಂಡಂತೆ 'ಯಾದವರು' ಎಂದು ಹೆಸರಿಸಬೇಕೆಂಬ ಗೊಲ್ಲ ಜನಾಂಗದವರ ಒತ್ತಾಯಕ್ಕೆ ಮದ್ರಾಸ್ ಸರ್ಕಾರವು ಇವರನ್ನು ಯಾದವರೆಂದು ಕರೆಯಬೇಕೆಂದು ಅಧಿಸೂಚನೆಯನ್ನು ಹೊರಡಿಸಿತು. ಸರ್ಕಾರದ ಈ ಆದೇಶದಿಂದಾಗಿ ಊರುಗೊಲ್ಲರಿಗೆ ಯಾವುದೇ ರೀತಿಯ ವ್ಯತಿರಿಕ್ತ ಪರಿಣಾಮವಾಗಲಿಲ್ಲ. ಏಕೆಂದರೆ ಊರುಗೊಲ್ಲರು ಎಲ್ಲಾ ರೀತಿಯಿಂದಲೂ ಮುಂದುವರಿದಿದ್ದರು. ಆದರೆ ಕಾಡುಗೊಲ್ಲರು ಬುಡಕಟ್ಟು ಜನಾಂಗದವರಾಗಿದ್ದು, ಸರ್ಕಾರದಿಂದ ನ್ಯಾಯಯುತವಾಗಿ ಪಡೆಯಲೇಬೇಕಾಗಿದ್ದ ಅಭಿವೃದ್ಧಿ ಸೌಲಭ್ಯಗಳಿಂದ ದೂರವೇ ಉಳಿದುಕೊಳ್ಳಬೇಕಾದ ಪರಿಸ್ಥಿತಿ ಉಂಟಾಯಿತು.

***೧೮೯೧ ಮದ್ರಾಸ್ ಸರ್ಕಾರ ಮಾಡಿದ ಜನಗಣತಿ:,*** ಈ ಜನಗಣತಿ ವರದಿಯಲ್ಲಿ ಕಾಡುಗೊಲ್ಲರ ಪ್ರಸ್ತಾಪವಿದ್ದು, ಅವರ ಜೀವನದ ಸ್ಥಿತಿಗತಿಗಳು ಕಷ್ಟಕರವಾಗಿರುವುದನ್ನು ತಿಳಿಸಿ ಅವರ ಅಲೆಮಾರಿ ಬದುಕಿನ ಚಿತ್ರಣವನ್ನು ಹೇಳಿದ್ದಾರೆ. ಹೆರಿಗೆ ಹಾಗೂ ಋತುಮತಿ ಸಂದರ್ಭದಲ್ಲಿ ಕಾಡುಗೊಲ್ಲರ ಮಹಿಳೆಯರಿಗಾಗಿ ನಿರ್ಮಾಣ ಮಾಡುವ ಗುಬ್ಬಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

***೧೯೦೧ ಮೈಸೂರು ಸರ್ಕಾರ ಗೊಲ್ಲರನ್ನು*** ಎರಡು ವಿಧಗಳಲ್ಲಿ ವಿಂಗಡಿಸಿ ಅವರು ನಡೆಸುವ ಜೀವನದ ಆಧಾರದ ಮೇಲೆ ಕಾಡಿನಲ್ಲಿ ವಾಸಿಸುವ ಗೊಲ್ಲರನ್ನು ಕಾಡುಗೊಲ್ಲರು ಹಾಗೂ ಊರಿನಲ್ಲಿ ವಾಸಿಸುವ ಗೊಲ್ಲರು ಊರುಗೊಲ್ಲರು ಎಂದು ಉಲ್ಲೇಖಿಸಿದ್ದಾರೆ. ಮುಂದುವರಿದು ಕಾಡುಗೊಲ್ಲರು ಊರುಗೊಲ್ಲರಿಗಿಂತ ಹಿಂದುಳಿದಿರುವ ಕಾರಣ ಊರುಗೊಲ್ಲರು ಮತ್ತು ಕಾಡುಗೊಲ್ಲರು ಎಂದು ಪ್ರತ್ಯೇಕಿಸಿರುವುದು ಕಂಡುಬಂದಿದೆ. ಆದರೆ ಕಾಡುಗೊಲ್ಲರಿಗೆ ಪ್ರತ್ಯೇಕವಾದ ಮೀಸಲಾತಿಯನ್ನು ಕೊಡದಿರುವುದರ ಬಗೆಗೆ ಪ್ರಶ್ನೆ ಮಾಡಿದ್ದಾರೆ.

***ನಂಜುಂಡಯ್ಯ ಹೆಚ್. ವಿ.'ದ ಎತ್ನೋಗ್ರಫಿಕಲ್ ಸರ್ವೆ ಆಫ್ ಮೈಸೂರು', ಬೆಂಗಳೂರು ಗೌವರ್ನ್‌ಮೆಂಟ್ ಪ್ರೆಸ್. (೧೯೦೮)*** ಇದರಲ್ಲಿ ಕಾಡುಗೊಲ್ಲರನ್ನು ಕುರಿತು ಹೆಚ್.ವಿ.ನಂಜುಂಡಯ್ಯನವರು ೧೪ ಪುಟಗಳ ಲೇಖನವನ್ನು ಬರೆದು ಪ್ರಕಟಿಸಿದ್ದಾರೆ. ಇದರಲ್ಲಿ ಕಾಡುಗೊಲ್ಲರ ದೇವರುಗಳಾದ ಎತ್ತಪ್ಪ, ಜುಂಜಪ್ಪ ಮತ್ತು ಅವರ ಆಚಾರ-ವಿಚಾರಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

***ಎಡ್ಗರ್ ಥರ್ಸ್‌ಟನ್ ಮತ್ತು ಕೆ. ರಂಗಾಚಾರಿಯವರ 'ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌಥ್ ಇಂಡಿಯಾ'***

ಎಡ್ಗರ್ ಥರ್ಸ್‌ಟನ್ ಮತ್ತು ಕೆ. ರಂಗಾಚಾರಿಯವರು(೧೯೦೯) 'ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌಥ್ ಇಂಡಿಯಾ' ದಲ್ಲಿ ಕರ್ನಾಟಕದ ಕಾಡುಗೊಲ್ಲ ಮತ್ತು ಆಂಧ್ರದ ಗೊಲ್ಲ ಜನಾಂಗದ ಬಗ್ಗೆ ಲೇಖನಗಳನ್ನು ಬರೆದಿದ್ದಾರೆ. ಇವರ ಲೇಖನಗಳು ೧೮೯೧-೧೯೦೧ರ ಜನಗಣತಿ ಮಾಹಿತಿಗಳನ್ನು ಯಥಾವತ್ತಾಗಿ ಹೋಲುವಂತಹ ವಿವರಗಳಿವೆ. ಇವರ ಕೃತಿಯಲ್ಲಿ ಕಾಡುಗೊಲ್ಲರನ್ನು ಕುರಿತಾದ

ಅಂಶಗಳು ಲಭ್ಯವಿಲ್ಲವಾದರೂ ಅಂದಿನ ಗೊಲ್ಲ ಜನಾಂಗವನ್ನು ಮತ್ತು ಅವರ ಸಾಮಾಜಿಕ ಜೀವನದ ಸ್ಥಿತ್ಯಂತರಗಳ ಕುರಿತಾದ ಅವಶ್ಯಕ ಅಂಕಿ ಅಂಶಗಳನ್ನು ದಾಖಲಿಸಿದ್ದಾರೆ.

***Caste and Tribes of Mysore** (೧೯೩೧)*

Caste and Tribes of Mysore ಇದರ ಸಂಪಾದಕರಾದ ಎಲ್.ಕೆ. ಅನಂತಕೃಷ್ಣ ಅಯ್ಯರ್ ಮತ್ತು ಹೆಚ್.ವಿ.ನಂಜುಂಡಯ್ಯನವರು ಕಾಡುಗೊಲ್ಲರ ಸಾಮಾಜಿಕತೆ ಹಾಗೂ ಕಾಡುಗೊಲ್ಲರ ಬದುಕನ್ನು ಕುರಿತು ಒಂದು ಪ್ರಬಂಧ ರೂಪದ ಲೇಖನ ಪ್ರಕಟಿಸಿದ್ದಾರೆ.

***ತೀ.ನಂ. ಶಂಕರನಾರಾಯಣ, 'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು', ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ ಮೈಸೂರು, ೧೯೭೩***

ತೀ.ನಂ. ಶಂಕರನಾರಾಯಣ ಅವರು 'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು' ಎಂಬ ತಮ್ಮ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಕರ್ನಾಟಕದಲ್ಲಿ ನೆಲೆಸಿರುವ ಕಾಡುಗೊಲ್ಲರನ್ನು ಕುರಿತು ನಡೆಸಿದ ಸಮಗ್ರವಾದ ಅಧ್ಯಯನವೆಂದು ಹೇಳಬಹುದು. ಕಾಡುಗೊಲ್ಲರು ಹುಟ್ಟಿನಿಂದ ಸಾಯುವವರೆಗೆ ಆಚರಿಸುವ ಆಚರಣೆ ಸಂಪ್ರದಾಯಗಳನ್ನು ಚಿತ್ರಿಸಿದ್ದಾರೆ. ಜೊತೆಗೆ ಅವರು ಆರಾಧನೆ ಮಾಡುವ ಕಾಟಯ್ಯ, ಚಿತ್ತಯ್ಯ, ಎತ್ತಯ್ಯ, ಜುಂಜಪ್ಪ, ಕೇತೆದೇವರು, ಪಾತೆದೇವರು ಮತ್ತು ಹಾಲುಕುಡಿದಪ್ಪ ಈ ದೈವಗಳ ಜಾತ್ರೆಗಳ ಬಗ್ಗೆ ಉತ್ತಮವಾದ ಮಾಹಿತಿಯನ್ನು ನೀಡಿದ್ದಾರೆ. ಕಾಡುಗೊಲ್ಲರ ಬೆಡಗುಗಳ ಬಗ್ಗೆ ಹೇಳಿದ್ದಾರೆ. ಕಾಡುಗೊಲ್ಲರ ಬೆಡಗುಗಳ ಬಗ್ಗೆ ಹೇಳುವಾಗ ಗೊಂದಲಕ್ಕೆ ಒಳಗಾಗಿದ್ದಾರೆ. ಕಾಡುಗೊಲ್ಲರ ಬೆಡಗುಗಳು ವೈಜ್ಞಾನಿಕವಾಗಿವೆ. ಕಾಡುಗೊಲ್ಲರು ಕರ್ನಾಟಕದ ತುಮಕೂರು, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ, ಬೆಂಗಳೂರು ಜಿಲ್ಲೆಯ ಮಾಗಡಿ, ಕನಕಪುರ, ದೊಡ್ಡಬಳ್ಳಾಪುರ ತಾಲೂಕುಗಳಲ್ಲಿ ವಾಸವಾಗಿದ್ದಾರೆ. ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನಲ್ಲಿಯೂ ಇವರು ಇದ್ದಾರೆ. ಆಂಧ್ರಪ್ರದೇಶದ ಅನಂತಪುರ ಜಿಲ್ಲೆಗೆ ಸೇರಿದ ಮಡಕಸಿರಾ, ಕಲ್ಯಾಣದುರ್ಗ ಮತ್ತು ರಾಯದುರ್ಗ ತಾಲ್ಲೂಕುಗಳಲ್ಲಿ ಹಾಗೂ ಚಿತ್ರದುರ್ಗ ಜಿಲ್ಲೆಯ ಹಿರಿಯೂರು, ಚಳ್ಳಕೆರೆ, ಶಿರಾ ತಾಲ್ಲೂಕುಗಳನ್ನು ಕಾಡುಗೊಲ್ಲರ ಸಾಂಸ್ಕೃತಿಕ ಕೇಂದ್ರವೆಂದು ಕರೆಯಬಹುದು. ಈ ಮೂರು ತಾಲ್ಲೂಕುಗಳಲ್ಲಿ ಉಳಿದೆಲ್ಲ ಕಡೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಾಡುಗೊಲ್ಲರು ವಾಸವಾಗಿದ್ದಾರೆ ಎಂದು ಈ ಪುಸ್ತಕದಲ್ಲಿ ತಿಳಿಸಿದ್ದಾರೆ.

*ಅಂಬಳಿಕೆ ಹಿರಿಯಣ್ಣ, 'ಕಾಡುಗೊಲ್ಲರ ಜನಪದ ಗೀತೆಗಳು,' ಮೈಸೂರು ವಿಶ್ವವಿದ್ಯಾನಿಲಯ, ೧೯೭೮.*
"ಕಾಡುಗೊಲ್ಲರ ಜನಪದ ಗೀತೆಗಳು" ಕಾಡುಗೊಲ್ಲರ ಪಂಚಲಿಂಗಗಳಾದ ಕಾಟುಮಲಿಂಗ, ಚಿತ್ರಲಿಂಗ, ಕೇತೆಲಿಂಗ, ಪಾತೆಲಿಂಗ ಮತ್ತು ರಾಮೇಲಿಂಗ ಈ ದೈವಗಳನ್ನು ಕುರಿತಾಗಿ ಕಾಡುಗೊಲ್ಲರು ಹಾಡಿರುವ ಪದಗಳನ್ನು ಸಂಗ್ರಹಿಸಿದ್ದಾರೆ. ಇದರ ಜೊತೆಗೆ ಕರಿಒಬೇವ್ವನಹಳ್ಳಿ ಮಾರಕ್ಕ, ಮಾಯಸಂದ್ರದ ಕರಿಯಮ್ಮ, ನಂದಿಹಳ್ಳಿರಂಗಪ್ಪ ಈ ದೈವಗಳ ಮತ್ತು ಸೋಬಾನೆ ಪದಗಳನ್ನು ಸಂಗ್ರಹಿಸಿದ್ದಾರೆ. ಶೀಲವಾಡಿಗೊಲ್ಲರಿಗೆ ಪಾತೆಲಿಂಗ ಒಲಿದ ಬಗೆಯನ್ನು ಹಾಗೂ ಆ ಬೆಡಗು ಸೃಷ್ಟಿಯಾದ ಬಗ್ಗೆ ಹೇಳಿದ್ದಾರೆ. ಸಾಮಾನ್ಯವಾಗಿ

ಕಾಡುಗೊಲ್ಲರ ಎಲ್ಲ ದೈವಗಳ ಪವಾಡಗಳ ಮಾಹಿತಿ ಈ ಕೃತಿಯಲ್ಲಿದೆ. ಆದರೆ ಇಲ್ಲಿ ಸಂಗ್ರಹ ಕಾರ್ಯ ಮಾತ್ರ ಗುರುತಿಸಬಹುದು.

***ಪರಮಶಿವಯ್ಯ ಜೀ. ಶಂ. 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು,' ಅಭಿನವ, ಬೆಂಗಳೂರು, ೨೦೧೫.***

"ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು" ಇದರಲ್ಲಿ ಜುಂಜಪ್ಪ ಕಾವ್ಯವು ಗದ್ಯ ರೂಪದಲ್ಲಿರುವುದನ್ನು ಗಮನಿಸಬಹುದು. ಜುಂಜಪ್ಪನ ಕಾವ್ಯವು ಪ್ರಾದೇಶಿಕವಾಗಿ ಯಾವ ರೀತಿ ಭಿನ್ನತೆಯನ್ನು ಪಡೆದುಕೊಂಡಿದೆ ಮತ್ತು ಜುಂಜಪ್ಪನ ತಾತನಾದ ದೇವರ ದಯಾಮಾರನ ಮೇಲೆ ಗುಡ್ಡದಬೋರಿ ಮನಸೋತಾಗ ಅವನಿಗೆ ಯರಬಳ್ಳಿಯ ಹಟ್ಟಿಯಲ್ಲಿ ಹೆಣ್ಣು ನೋಡುವ ಶಾಸ್ತ್ರ ಮಾಡುತ್ತಾರೆ. ಅಲ್ಲಿ ಹೆಚ್ಚು ಮೂಢನಂಬಿಕೆಯ ಬಗ್ಗೆ ಮಾಹಿತಿ ನೀಡಿದ್ದಾರೆ. ಸಾಹಸ ಪರಂಪರೆಯನ್ನು ಅತಿ ಅಮಾನುಷ ಆಶಯಗಳನ್ನು ಬಣ್ಣಿಸುವ ಘಟನಾವಳಿಗಳು ಜುಂಜಪ್ಪ ಕಾವ್ಯದ ಒಂದೊಂದು ಪ್ರತ್ಯೇಕ ಕತೆಗಳೇ ಎಂಬಂತೆ ಸ್ವಯಂಪೂರ್ಣತೆಯನ್ನು ಸಾಧಿಸಿಕೊಳ್ಳುತ್ತವೆ. ಒಂದು ಘಟನೆಯಿಂದ ಮತ್ತೊಂದು ಘಟನೆಗೆ ಸಾವಯವ ಸಂಬಂಧ ಎರಡೂ ಸಂಪ್ರದಾಯದ ಪಾಠಗಳಲ್ಲಿ ತೋರಿ ಬರುವುದಿಲ್ಲ. ಬಿಡಿ ಬಿಡಿಯಾದ ಚಿತ್ರಗಳಾಗಿಯೇ ಅವು ನಿಲ್ಲುತ್ತವೆ. ಜುಂಜಪ್ಪನ ಕಾವ್ಯವನ್ನು ಪ್ರಾದೇಶಿಕವಾಗಿ ಎರಡು ಭಾಗಗಳಲ್ಲಿ ವಿಂಗಡಿಸಿರುವುದು ಕಂಡುಬರುತ್ತದೆ.

***ಕೃಷ್ಣಮೂರ್ತಿ ಹನೂರು,' ಕತ್ತಲ ದಾರಿ ದೂರ', ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜಪೇಟೆ-ಬೆಂಗಳೂರು. ೧೯೮೧.***

'ಕತ್ತಲ ದಾರಿ ದೂರ', ಈ ಕೃತಿಯಲ್ಲಿ ಕಾಡುಗೊಲ್ಲರ ಪ್ರಮುಖ ವೀರಗಾರರು ಮತ್ತು ವೀರಗಾರ್ತಿಯರ ಬಗ್ಗೆ ತಿಳಿಸಿದ್ದಾರೆ. ವೀರಬಡಪ್ಪ, ವೀರಚಿಕ್ಕಣ್ಣ, ವೀರಸಿರಿಯಣ್ಣ, ವೀರಯರ‍್ರಣ್ಣ, ಚಿತ್ತಯ್ಯ, ಕೊಂಡದ ಕಾಟಮ್ಮ, ಪಾತಪ್ಪ, ಮಹಾಸತಿ ವೀರತಿಮ್ಮವ್ವರಂತಹ ಸಾಂಸ್ಕೃತಿಕ ವೀರರ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಇಲ್ಲಿಯ ನಾಯಕರು ಸಾಮಾನ್ಯವಾಗಿ ಯರಬಳ್ಳಿ ಹಿರಿಯೂರು ಚಿತ್ರದುರ್ಗದ ಪರಿಸರದವರಿರುವ ಬಗ್ಗೆ ಉಲ್ಲೇಖವಾಗಿದೆ.

***ಕೃಷ್ಣಮೂರ್ತಿ ಹನೂರು. 'ಜನಪದ ವೀರಗೀತೆಗಳು', ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ೧೯೮೭.***

'ಜನಪದ ವೀರಗೀತೆಗಳು', ಗ್ರಂಥದಲ್ಲಿ ಕಾಡುಗೊಲ್ಲರ ದೈವಗಳಾದ ಕೇತೆಲಿಂಗ ಚಿತ್ರಲಿಂಗನ ಜನಪದ ಗೀತೆಗಳಿವೆ. ಜೊತೆಗೆ ಕಾಡುಗೊಲ್ಲರ ಸಾಂಸ್ಕೃತಿಕ ನಾಯಕರಾದ ಪದುಗೊಲ್ಲರ ಚಿಕ್ಕಣ್ಣ ಅವನ ತಂಗಿ, ಯರ‍್ರಣ್ಣ ಕೊಂಡದಕಾಟಮ್ಮ, ಸಿರಿಯಮ್ಮ ಇವರು ಬೇಡರ ವಿರುದ್ಧ ಹೋರಾಡಿ ಮಡಿದು ಅವರ ಶೌರ್ಯಗಳನ್ನು ಗುಣಗಾನ ಮಾಡಿರುವುದನ್ನು ಕಾಣಬಹುದು. ನಿಂಗಣ್ಣ ಸೆರೆ ಹೋದುದರ ಬಗ್ಗೆ ಮಾಹಿತಿಗಳು ಉಲ್ಲೇಖವಾಗಿವೆ.

*ಸಿದ್ದಗಂಗಯ್ಯ ಬಿ. 'ಜುಂಜಪ್ಪನ ಕಾವ್ಯ,' ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬.*

ಈ ಕಾವ್ಯವು ಜುಂಜಪ್ಪನ ಬಗ್ಗೆ ಮಾಹಿತಿಯನ್ನು ಸಂಕ್ಷಿಪ್ತವಾಗಿ ಹೇಳುತ್ತದೆ. ಜುಂಜಪ್ಪನ ಮಹಿಮೆ ಮಾರಣ್ಣ ಮೈಲಣ್ಣ ಇವರುಗಳ ಮುಗ್ಧತೆಯನ್ನು ಹೇಳುವುದರ ಜೊತೆಗೆ ಹೆಣ್ಣುಮಗಳಾದ ಮಾರಕ್ಕನನ್ನು ಶೋಷಣೆಯ ವಸ್ತುವಾಗಿಯೇ ನೋಡುತ್ತದೆ. ಅಷ್ಟೇ ಅಲ್ಲದೆ ಜುಂಜಪ್ಪ ತನ್ನ ಅಧಿಕಾರವನ್ನು ತನ್ನ ಕುಟುಂಬದ ಮೇಲೆ ಹೊಂದಿರುವ ಬಗೆಯನ್ನು ಸರಳವಾಗಿ ವಿವರಿಸುತ್ತಾ, ಅವಳ ತಾಯಿಗೆ ಯಾವ ನಿರ್ಧಾರವನ್ನು ತೆಗೆದುಕೊಳ್ಳುವ ಸ್ವಾತಂತ್ರ ನೀಡದಿರುವುನ್ನು ಮತ್ತು ಕಾಡುಗೊಲ್ಲರು ಪುರುಷಪ್ರಧಾನ ವ್ಯವಸ್ಥೆಗೆ ಸ್ಥಿತ್ಯಂತರ ಹೊಂದುತ್ತಿದ್ದ ಬಗೆಯನ್ನು ಇಲ್ಲಿ ಕಾಣುತ್ತೇವೆ.

*ಚಲುವರಾಜು, 'ಜುಂಜಪ್ಪ,' ಮಹಾಕಾವ್ಯ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭.*

ಆರಂಭದ ಘಟ್ಟದಲ್ಲಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗ ಬಹು ದೊಡ್ಡ ಜವಾಬ್ದಾರಿಯನ್ನು ನಿರ್ವಹಿಸಿದೆ ಎಂದರೆ ತಪ್ಪಾಗಲಾರದು. ಏಕೆಂದರೆ ಅತ್ಯಂತ ಅವಜ್ಞೆಗೆ ಗುರಿಯಾಗಿದ್ದ ಸಮುದಾಯಗಳನ್ನು ಗುರುತಿಸಿ ಅವರು ಮೌಖಿಕ ಪರಂಪರೆಯಲ್ಲಿ ಉಳಿಸಿಕೊಂಡು ಬಂದಿರಬಹುದಾದ ಬುಡಕಟ್ಟು ಕಾವ್ಯಗಳನ್ನು ಸಂಗ್ರಹ ಮಾಡಿ ಅವುಗಳ ಮಹತ್ವ ಮತ್ತು ಮೌಲ್ಯವನ್ನು ಅಕ್ಷರ ಸಮಾಜಕ್ಕೆ ಪರಿಚಯ ಮಾಡಿರುವುದು ಶ್ಲಾಘನೀಯವಾದ ಕೆಲಸವೆಂದು ಹೇಳಬಹುದು. ಅದರಂತೆ ಕಾಡುಗೊಲ್ಲರ ಸಾಂಸ್ಕೃತಿಕ ನಾಯಕನಾದ ಜುಂಜಪ್ಪನ ಕಾವ್ಯವನ್ನು ಸಮಗ್ರವಾಗಿ ಸಂಗ್ರಹಿಸಿ ಪ್ರಕಟನೆ ಮಾಡಿದ ಶ್ರೇಯಸ್ಸು ಕನ್ನಡ ವಿಶ್ವವಿದ್ಯಾಲಯದ್ದು. ಈ ಕಾವ್ಯವನ್ನು ಡಾ. ಚಲುವರಾಜು ಅಚ್ಚು ಕಟ್ಟಾಗಿ ಸಂಗ್ರಹಿಸಿ ಸಂಪಾದಿಸಿದ್ದಾರೆ.

*ಮೇತ್ರಿ ಕೆ. ಎಂ., 'ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.*

ಈ ಕಾವ್ಯವು ಕಾಡುಗೊಲ್ಲರ ಪಶುಪಾಲನೆ ಅವರ ವಲಸೆ ಪ್ರವೃತ್ತಿ ಪರಿಸರದೊಂದಿಗೆ ಹೊಂದಿರುವ ಅವಿನಾಭಾವ ಸಂಬಂಧವನ್ನು ಒಳಗೊಂಡಿದೆ. ಇದರ ಜೊತೆಗೆ ಕುಮಾರರಾಮನ ಪರನಾರಿ ಸಹೋದರತ್ವ ಮತ್ತು ಆತನ ಪರಾಕ್ರಮವನ್ನು ತಿಳಿಸಿಕೊಡುತ್ತದೆ.

*ಕೃಷ್ಣಮೂರ್ತಿ ಹನೂರು, 'ಜನಪದ ಮತ್ತು ಬುಡಕಟ್ಟು ಗೀತೆಗಳು,' ೧೯೯೮.*

ಈ ಗ್ರಂಥದಲ್ಲಿ ಸಿರಿಯಣ್ಣನ ವೀರತ್ವವನ್ನು ಹೇಳುತ್ತದೆ. ಸಿರಿಯಣ್ಣ ದನಕಾಯುವ ಹುಡುಗ. ಇವನು ಹಂದಿ ಜೊತೆ ಹೋರಾಡಿ ಮಡಿಯುತ್ತಾನೆ. ಇವನಿಗೆ ಮದುವೆ ಮಾಡಲೆಂದು ನಿಗದಿ ಮಾಡಿದ ಹೆಣ್ಣು ಕೊಂಡವೇರುವ ಪ್ರಸಂಗ ಕಂಡುಬರುತ್ತದೆ. ಕಾಡುಗೊಲ್ಲರಲ್ಲಿ ಒಂದು ಹೆಣ್ಣು ಒಬ್ಬ ಯುವಕನಿಗೆ ಕೊಡಬೇಕು ಎಂದು ವೀಳ್ಯೇದೆಲೆಯ ಶಾಸ್ತ್ರ ಮುಗಿದ ಮೇಲೆ, ಅದು ಮದುವೆ ಆದಂತೆ ಎಂದು ಪರಿಗಣಿಸುತ್ತಾರೆ. ಈ ವ್ಯವಸ್ಥೆಯು ಹಲವಾರು ಹೆಣ್ಣುಮಕ್ಕಳ ಸಜೀವ ದಹನಕ್ಕೆ ಕಾರಣವಾಗಿದೆ.

*ಡಾ. ಮೀರಾಸಾಬಿಹಳ್ಳಿ ಶಿವಣ್ಣ ಬರೆದಿರುವ 'ಎತ್ತಪ್ಪನ ಸಂಪ್ರದಾಯ,'* ಎಂಬ ಲೇಖನದಲ್ಲಿ ಎತ್ತಪ್ಪನಿಗೆ ಅಜ್ಜೆರ ಗೊಲ್ಲರ ಮನೆಯ ಹೆಣ್ಣುಮಗಳೊಂದಿಗೆ ಮದುವೆ ಮಾಡುತ್ತಾರೆ. ಇದರಿಂದಾಗಿ ಎತ್ತಪ್ಪನ ಎತ್ತುಗಳು ಅವನನ್ನು ಗೂಡಿನ ಬಳಿ ಸೇರಿಸುವುದಿಲ್ಲ. ನಂತರ ಎತ್ತಪ್ಪ ತಾನು ಮಲ್ಲಮ್ಮನಿಂದ ದೂರ ಇರುವುದಾಗಿ ಮಾತು ಕೊಟ್ಟಾಗ ಹತ್ತಿರ ಸೇರಿಸಿಕೊಳ್ಳುತ್ತವೆ. ಕಾಡುಗೊಲ್ಲರಿಗೆ ಕುಲದ ಆಚಾರವನ್ನು ತಿಳಿಸಿಕೊಟ್ಟವನು ಎತ್ತಪ್ಪ. ಅವನಿಗೆ ಹಾಲಿನ ಮೀಸಲು ಅಕ್ಕಿ ಹಾಗೂ ದುಡ್ಡಿನ ಮೀಸಲು ಕಟ್ಟಿಕೊಳ್ಳುತ್ತಾರೆ. ಎತ್ತಪ್ಪನ ಸಂಪ್ರದಾಯಗಳನ್ನು ಇನ್ನೂ ಕಾಡುಗೊಲ್ಲರು ಅನುಸರಿಸುತ್ತಿರುವುದರಿಂದ ಅವರಲ್ಲಿ ಇನ್ನೂ ಅವೈಜ್ಞಾನಿಕತೆ ಮನೆ ಮಾಡಿದೆ ಎಂದು ಹೇಳಬಹುದು.

*ಮೇತ್ರಿ ಕೆ.ಎಂ., 'ಕೃಷ್ಣಗೊಲ್ಲರ ಕಥನ ಕಾವ್ಯಗಳು,' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.*

ಈ ಕಾವ್ಯವು ಕಾಡುಗೊಲ್ಲರ ಸಾಂಸ್ಕೃತಿಕ ನಾಯಕರಾದ ಎತ್ತಯ್ಯ, ಚಿತ್ತಯ್ಯ, ಬಂಜಿಗೆರೆ ಈರಣ್ಣ, ಬೊಮ್ಮೈಲಿಂಗ, ಗೌರಸಮುದ್ರದ ಮಾರಮ್ಮ, ತಿರುಪತಿ ತಿಮ್ಮಪ್ಪ ಹಾಗೂ ವೀರ ಅಭಿಮನ್ಯುವನ್ನು ಕುರಿತಾದ ಗೀತೆಗಳಿವೆ. ಈ ಕಾವ್ಯಗಳನ್ನು ಹಾಡಿದವರ ವಿಳಾಸ ಬೆಡಗು ವಯಸ್ಸು ಮತ್ತು ಹೆಸರುಗಳನ್ನು ತಿಳಿಸಿದ್ದಾರೆ. ಈ ಕಾವ್ಯಗಳನ್ನು ಹಾಡಿದವರು ಬಂಜಗೆರೆಗೆ ಸೇರಿದವರು ಆದ ಕಾರಣ ಪ್ರಾದೇಶಿಕ ಭಿನ್ನತೆಯನ್ನು ಗುರುತಿಸಬಹುದು.

*ಮೀರಾಸಾಬಿಹಳ್ಳಿ ಶಿವಣ್ಣ, 'ಗಣೆಯ ದನಿ,' ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೦.*

'ಗಣೆಯ ದನಿ' ಎಂಬ ಕೃತಿಯಲ್ಲಿ ಕಾಡುಗೊಲ್ಲರು ಪದ ಹೇಳಲು ಬಳಸುವ ವಾದ್ಯಗಳಾದ ಗಣೆ ಮತ್ತು ಡೋಲು ಇವುಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಕಾಡುಗೊಲ್ಲರು ತಾವು ಹೇಳುವ ಎಲ್ಲಾ ಮೌಖಿಕ ಕಾವ್ಯಗಳ ಅಭಿವ್ಯಕ್ತಿಗಾಗಿ ಗಣೆಯನ್ನು ಬಳಕೆ ಮಾಡಿಕೊಂಡಿದ್ದಾರೆ. ಇದು ೫-೬ ಅಡಿ ಉದ್ದವಿರುತ್ತದೆ. ಇದನ್ನು ಬಿದಿರಿನಿಂದ ತಯಾರು ಮಾಡಿರುತ್ತಾರೆ. ಇದು ಹಾಳಾಗದಂತೆ ತಡೆಯಲು ಇದರ ಸುತ್ತಲೂ ಬಣ್ಣ ಇಲ್ಲವೆ ತಾಮ್ರದ ತಗಡು ಸುತ್ತಿರುತ್ತಾರೆ. ಎತ್ತಪ್ಪನ ಕಾವ್ಯ, ಜುಂಜಪ್ಪನ ಕಾವ್ಯ, ಚಿತ್ರದೇವರಕಾವ್ಯ, ವೀರ ಮಿಂಚಣ್ಣನ ಕಾವ್ಯ, ವೀರಬಡಪ್ಪಕಾವ್ಯ ಮುಂತಾದ ಕಾವ್ಯಗಳನ್ನು ಗಣೆಯ ಸಹಾಯದಿಂದ ಹಾಡುತ್ತಾರೆ. ಈ ಕಾವ್ಯಗಳು ದೀರ್ಘವಾಗಿರುವುದರಿಂದ ಹಾಡುವವರಿಗೆ ವಿಶ್ರಾಂತಿಗಾಗಿ ಗಣೆಯನ್ನು ಬಳಸುತ್ತಾರೆ.

*ಮೀರಾಸಾಬಿಹಳ್ಳಿ ಶಿವಣ್ಣ, 'ಎತ್ತಪ್ಪ,' ಸಿ.ವಿ.ಜಿ. ಪಬ್ಲಿಕೇಷನ್ಸ್ ಬೆಂಗಳೂರು, ೨೦೦೨.*

ಕಾಡುಗೊಲ್ಲರನ್ನು ಕುರಿತು ಹೆಚ್ಚು ಅಧ್ಯಯನ ಮಾಡಿದವರಲ್ಲಿ ಮೀರಾಸಾಬಿಹಳ್ಳಿ ಶಿವಣ್ಣನವರು ಪ್ರಮುಖರು ಎಂದೇ ಹೇಳಬೇಕಾಗುತ್ತದೆ. ಇವರು ಕಾಡುಗೊಲ್ಲರ ತವರೂರಾದ ಚಿತ್ರದುರ್ಗದವರು. ಇವರು ಕಾಡುಗೊಲ್ಲರೊಂದಿಗೆ ಪ್ರತಿನಿತ್ಯ ಬೆರೆತವರು. ಆ ಕಾರಣದಿಂದ ಕಾಡುಗೊಲ್ಲರನ್ನು ಸಮಗ್ರವಾಗಿ ಅಧ್ಯಯನ ಮಾಡಲು ಸಾಧ್ಯವಾಯಿತು. ಕಾಡುಗೊಲ್ಲರ ಸಾಂಸ್ಕೃತಿಕ ನಾಯಕನಾದ ಎತ್ತಪ್ಪನನ್ನು ಕುರಿತು ಪುಸ್ತಕ ಬರೆದಿದ್ದಾರೆ. ಎತ್ತಪ್ಪನ ಸಂಪ್ರದಾಯ, ಅವನು ಪಶುಪಾಲಕನಾಗಿ ಮ್ಯಾಸ ಬೇಡರೊಂದಿಗೆ ಹೋರಾಡಿ ಮಡಿದ ಕತೆಯನ್ನು ಈ ಗ್ರಂಥದಲ್ಲಿ ವಿವರಿಸಿದ್ದಾರೆ.

*ಮೀರಾಸಾಬಿಹಳ್ಳಿ ಶಿವಣ್ಣ , 'ಕಾಡುಗೊಲ್ಲರ ಸಂಸ್ಕೃತಿ,' ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.*

'ಕಾಡುಗೊಲ್ಲರ ಸಂಸ್ಕೃತಿ' ಎಂಬ ಕೃತಿಯು ಚಿತ್ರದುರ್ಗದ ಬರಗಾಲದ ವಾಸ್ತವ ಪರಿಸ್ಥಿತಿಯನ್ನು ಹೇಳುವುದರ ಜೊತೆಗೆ, ಕಾಡುಗೊಲ್ಲರ ಅಂಟು ಮುಂಟಿನ ದೇವರುಗಳಾದ ಹಾಲುಗುಡುದಪ್ಪ, ಕೇತಪ್ಪ ಮತ್ತು ಪಾತೇದೇವರು ಇವರ ಬಗ್ಗೆ ಮಾಹಿತಿ ನೀಡಿದ್ದಾರೆ. ಕಾಡುಗೊಲ್ಲರ ಪೂಜಾರಿಗಳು ಅನುಸರಿಸುವ ಸಂಪ್ರದಾಯ, ಅವರ ಬೆಡಗುಗಳಾದ ತಾಳಿಕಟ್ಟುವ ಮತ್ತು ತಾಳಿಕಟ್ಟದಿರುವ ಬೆಡಗುಗಳ ಮಧ್ಯೆ ಇರುವ ವೈರುಧ್ಯವನ್ನು ಗುರುತಿಸಿದ್ದಾರೆ. ಇದರ ಜೊತೆಗೆ ಎತ್ತಪ್ಪನ ಸಂಪ್ರದಾಯ, ಕಾಡುಗೊಲ್ಲರ ಈರಗಾರರುಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

*ತಿಮ್ಮಯ್ಯ, ಕೆ. 'ನೊಸರಿ,' ತಳಗವಾದಿ ಪ್ರಕಾಶನ, ಮೈಸೂರು, ೨೦೦೪.*

'ನೊಸರಿ' ಎಂಬುದು ಕಾಡುಗೊಲ್ಲರು ಸಾಕಿರುವ ಆಕಳು ಎಮ್ಮೆ ಅಥವಾ ಕುರಿಗಳ ಮರಿಗಳು ಹಾಲು ಕುಡಿಯದಂತೆ ತಡೆಯುವ ಸಲುವಾಗಿ ಕುರಿ ಇಲ್ಲವೆ ಹಸುಗಳ ಮೊಲೆಗೆ ಹಸುವಿನ ಇಲ್ಲವೆ ಕುರಿಯ ಸಗಣಿಯನ್ನು ಹಾಲಿನಲ್ಲಿ ನೆನೆಸಿ ಮೊಲೆಯ ಸುತ್ತಾ ಸವರುತ್ತಾರೆ. ಜೊತೆಗೆ ಅದರ ಮೇಲೆ ಒಂದು ಬಟ್ಟೆ ಕಟ್ಟುತ್ತಾರೆ. ಇದರ ಉದ್ದೇಶ ಹಾಲು ಎಂಜಲು ಆಗಬಾರದು ಎನ್ನುವುದು ಮತ್ತು ಉದ್ದೇಶದ ಜೊತೆಗೆ ಪದೆ 'ಪದೆ' ಹಾಲು ಕುಡಿಯುವುದರಿಂದ ತಾಯಿ ಹಸು ಇಲ್ಲವೆ ಕುರಿಗೆ ಮೇವು ತಿನ್ನಲು ತೊಂದರೆ ಆಗುವುದನ್ನು ತಡೆಯಲು ಈ ರೀತಿ ಮಾಡುತ್ತಾರೆ. ಇದಕ್ಕೆ ಕಾಡುಗೊಲ್ಲರು 'ನೊಸರಿ' ಎನ್ನುವರು

*ಕಾಳೇಗೌಡ ನಾಗವಾರ, ಜಿ.ವಿ ಆನಂದಮೂರ್ತಿ, 'ಗರಿಗೆದರಿದ ನವಿಲು', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೨೦೦೫.*

'ಗರಿಗೆದರಿದ ನವಿಲು', ಕೃತಿಯ 'ಕಾಡುಗೊಲ್ಲರ ಪೂಜಾರಿ ಈರಣ್ಣ' ಎಂಬ ಲೇಖನದಲ್ಲಿ ಕಾಡುಗೊಲ್ಲರ ಪೂಜಾರಿಗಳು ಯಾವ ರೀತಿ ಕಟ್ಟುನಿಟ್ಟಿನ ಸಂಪ್ರದಾಯಗಳನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಕಾಡುಗೊಲ್ಲರಲ್ಲಿ ಪೂಜಾರಿಗೂ ದೇವರಿಗೂ ಅಂತಹ ವ್ಯತ್ಯಾಸ ಕಂಡುಬರುವುದಿಲ್ಲ. ಒಂದು ಕಡೆ ಕಟ್ಟಾ ಸಂಪ್ರದಾಯವಾದಿಗಳೆನಿಸಿದರೂ ದೇವರ ನಿಯಮಗಳಿಗೆ ಬದ್ಧರಾಗಿರುತ್ತಾರೆ. ಇವರು ಕಾವ್ಯವನ್ನು ಸಹ ಹಾಡುತ್ತಾರೆ. ಹೋಟೆಲುಗಳಲ್ಲಿ ಊಟ ಮಾಡುವುದಿಲ್ಲ, ಬೇರೆಯವರ ಮನೆಯಲ್ಲಿ ಊಟ ನೀರು ಏನನ್ನೂ ಮುಟ್ಟುವುದಿಲ್ಲ. ಕಂಚಿನ ತಟ್ಟೆಯನ್ನು ಹೊರತುಪಡಿಸಿ ಬೇರೆ ಯಾವ ತಟ್ಟೆಯಲ್ಲಿಯೂ ಊಟ ಮಾಡುವುದಿಲ್ಲ.

*ಮೀರಾಸಾಬಿಹಳ್ಳಿ ಶಿವಣ್ಣ, 'ಕಾಡುಗೊಲ್ಲ ಬುಡಕಟ್ಟು ವೀರರು,' ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫.*

ಮೀರಾಸಾಬಿಹಳ್ಳಿ ಶಿವಣ್ಣನವರು ಪ್ರಕಟಿಸಿದ 'ಕಾಡುಗೊಲ್ಲ ಬುಡಕಟ್ಟು ವೀರರು' ಕೃತಿಯಲ್ಲಿ ಕಾಡುಗೊಲ್ಲರ ಪ್ರಧಾನ ಸಾಂಸ್ಕೃತಿಕ ನಾಯಕರಾದ ಎತ್ತಪ್ಪ ಮತ್ತು ಜುಂಜಪ್ಪ ಈ ಇಬ್ಬರನ್ನು ಕುರಿತು

ಸಮಗ್ರವಾದ ಅಧ್ಯಯನ ಮಾಡಿದ ಕೃತಿ. ಕರ್ನಾಟಕದಾದ್ಯಂತ ಕ್ಷೇತ್ರಕಾರ್ಯ ಕೈಗೊಂಡು ಎತ್ತಪ್ಪ ಮತ್ತು ಜುಂಜಪ್ಪನ ಬಗ್ಗೆ ಮಾಹಿತಿಯನ್ನು ಕಲೆಹಾಕಿ ಮಹಾಪ್ರಬಂಧವನ್ನು ಬರೆದರು. ಇತರೆ ವೀರಗಾರರಾದ ವೀರಯರ‍್ರಣ್ಣ, ವೀರಸಿಂಪಣ್ಣ ಈರಬಡಪ್ಪ ಮೆಲ್ಲಜ್ಜ ಮತ್ತು ವೀರಗಾರ್ತಿಯರಾದ ಕೊಂಡದ ಕಾಟವ್ವ, ವೀರತಿಮ್ಮವ್ವ, ಗಿಡ್ಡಮ್ಮ, ಈರೋಬಿ ಮುಂತಾದವರ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.

*ಗುರುಲಿಂಗಯ್ಯ ಎಂ. 'ಕರ್ನಾಟಕದ ಗೊಲ್ಲ ಸಮುದಾಯ' ಶಕ್ತಿ ಪ್ರಿಂಟರ್ಸ್, ಅಂಡ್ ಪಬ್ಲಿಷರ್ಸ್ ಬೆಂಗಳೂರು, ೨೦೦೫.* 'ಕರ್ನಾಟಕದ ಗೊಲ್ಲ ಸಮುದಾಯ' ಕೃತಿಯಲ್ಲಿ ಕರ್ನಾಟಕದಾದ್ಯಂತ ವಾಸವಾಗಿರುವ ಕಾಡುಗೊಲ್ಲರು, ಊರುಗೊಲ್ಲರು ಅಲ್ಲದೆ ಇತರೆ ಗೊಲ್ಲರಾದ ಹಂದಿಗೊಲ್ಲರು, ಪೆದ್ದಟ್ಟಿ ಗೊಲ್ಲರು, ಯಳವ ಗೊಲ್ಲರು, ಬಸವ ಗೊಲ್ಲರು ಮುಂತಾದ ಗೊಲ್ಲರ ಸಂಸ್ಕೃತಿ ಅವರ ಬೆಡಗುಗಳು, ಅವರು ವಾಸವಾಗಿರುವ ಪ್ರದೇಶ, ಅವರು ಆಡುವ ಭಾಷೆ, ವೇಷಭೂಷಣ, ಕಲೆಗಳು ಅವರ ಸಮಾಜ ಮುಂತಾದವುಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.

*ಮಲ್ಲಿಕಾರ್ಜುನ ಕಲಮರಹಳ್ಳಿ, 'ಈರಬಡಪ್ಪ(ಆತ್ಮಕಥನ), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೭.*

'ಈರಬಡಪ್ಪ(ಆತ್ಮಕಥನ) ಕಾಡುಗೊಲ್ಲರ ಹಿರಿಯ ವ್ಯಕ್ತಿಯೊಬ್ಬರ ಆತ್ಮಕಥನ, ಈರಬಡಪ್ಪ ತನ್ನ ಹಟ್ಟಿಯಲ್ಲಿ ಎಲ್ಲಾ ವಯಸ್ಸಿನವರಿಗೂ ತುಂಬ ಆತ್ಮಿ ಯವಾಗಿರುತ್ತಾನೆ. ತಾನು ಜೀವನದುದ್ದಕ್ಕೂ ಅನುಭವಿಸಿದ ಅನುಭವಗಳನ್ನು ಹೇಳಿಕೊಂಡಿರುವುದನ್ನು ಮಲ್ಲಿಕಾರ್ಜುನ ಕಲಮರಹಳ್ಳಿ ಅವರು ಕೃತಿರೂಪಕ್ಕೆ ತಂದಿದ್ದಾರೆ.

*ಅಂಗಡಿ ಎಸ್.ಎಸ್., 'ಕರ್ನಾಟಕ ಬುಡಕಟ್ಟು ಭಾಷೆ', ೨೦೦೮.*

ಈ ಕೃತಿಯಲ್ಲಿ 'ಕಾಡುಗೊಲ್ಲರು ಭಾಷೆ ಮತ್ತು ಸಂಸ್ಕೃತಿ' ಎಂಬ ಲೇಖನದಲ್ಲಿ ಕರ್ನಾಟಕದ ಬುಡಕಟ್ಟುಗಳಲ್ಲಿ ಕಾಡುಗೊಲ್ಲರು ಪ್ರಮುಖರಾಗಿದ್ದಾರೆ ಎಂದು ಹೇಳುತ್ತಾರೆ. ಆದರೆ ಕಾಡುಗೊಲ್ಲರು ಇನ್ನೂ ಸಹ ಬುಡಕಟ್ಟು ಪಟ್ಟಿಯಲ್ಲಿ ಸೇರಿಕೊಂಡಿಲ್ಲ. ಕಾಡುಗೊಲ್ಲರು ಮತ್ತು ಊರುಗೊಲ್ಲರು ಎಂದು ವಿಭಾಗಿಸಿ, ಕಾಡುಗೊಲ್ಲರ ಭಾಷೆ, ಸಂಸ್ಕೃತಿ, ಅವರ ದೇವರುಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

*ಗುರುಲಿಂಗಯ್ಯ ಎಂ., ನಾಗಪ್ಪ ವಿ. 'ಕಾಡುಗೊಲ್ಲ', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.*

'ಕಾಡುಗೊಲ್ಲ', ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆಗೆ ಸೇರುವ ಈ ಕೃತಿಯು ಕಾಡುಗೊಲ್ಲರ ಮೂಲ, ಅವರ ಸೃಷ್ಟಿಪುರಾಣ, ಬಂಧುತ್ವ, ವಿವಾಹ, ಆಚರಣೆ ಆರಾಧನೆ, ಆಡಳಿತ ವ್ಯವಸ್ಥೆ, ಆರ್ಥಿಕ ಮೂಲಗಳು, ಶೈಕ್ಷಣಿಕ, ರಾಜಕೀಯ, ದೇವರ ಬಗ್ಗೆ ಇರುವ ನಂಬಿಕೆಗಳನ್ನು ವಿವರಿಸಿದ್ದಾರೆ.

*ಮೀರಾಸಾಬಿಹಳ್ಳಿ ಶಿವಣ್ಣ, 'ಕಾಡುಗೊಲ್ಲರ ಕಾವ್ಯಗಳು,' ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು, ೨೦೦೯.*

ಮೀರಾಸಾಬಿಹಳ್ಳಿ ಶಿವಣ್ಣ ಅವರು ಈ ಕೃತಿಯಲ್ಲಿ ಕಾಡುಗೊಲ್ಲರ ಸಂಸ್ಕೃತಿ, ವಾಸದ ನೆಲೆಗಳು, ಗ್ರಾಮದ ನಿವಾಸಿಗಳು, ಅನ್ಯರ ಪ್ರವೇಶ ನಿರ್ಬಂಧ, ಕಾಡುಗೊಲ್ಲ ಎಂಬ ಪದದ ನಿಷ್ಪತ್ತಿ, ಅವರ ಬಗೆಗೆ ಇರುವ ಐತಿಹ್ಯ, ಮ್ಯಾಸಬೇಡರಿಗೂ ಮತ್ತು ಕಾಡುಗೊಲ್ಲರಿಗೂ ಪದೆ 'ಪದೆ' ನಡೆಯುವ ಹೋರಾಟ, ಕಾಡುಗೊಲ್ಲರ ಬೆಡಗುಗಳು, ಕಾಡುಗೊಲ್ಲರ ವ್ರತಗಳು, ಗೊಲ್ಲಕಡಗ, ರವಿಕೆರಹಿತ ಸಂಪ್ರದಾಯ, ಜನಿಗೆ ಹಾಕುವ ವಿಧಾನ ಮುಂತಾದ ವಿಷಯಗಳನ್ನು ಚರ್ಚಿಸಿದ್ದಾರೆ.

*ವಿಮಲ ಅಮಲಪ್ಪ, 'ಕಾಡುಗೊಲ್ಲರ ಆರ್ಥಿಕ ಸ್ಥಿತಿಗತಿಗಳು'(ಅಪ್ರಕಟಿತ ಪಿಎಚ್.ಡಿ. ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.*

'ಕಾಡುಗೊಲ್ಲರ ಆರ್ಥಿಕ ಸ್ಥಿತಿಗತಿಗಳು' ಕಾಡುಗೊಲ್ಲರ ಸಮಾಜ, ವಿವಾಹ, ಋತುಮತಿಶಾಸ್ತ್ರ, ಸೀಮಂತ ಕಾರ್ಯಕ್ರಮ ಮುಂತಾದ ವಿಷಯಗಳ ಜೊತೆಗೆ ಕಾಡುಗೊಲ್ಲರ ಆದಾಯದ ಮೂಲಗಳು ಯಾವುವು? ಮಹಿಳೆಯ ಪಾಲು ಎಷ್ಟಿದೆ? ಎಂಬುದಾಗಿ ಈ ಅಧ್ಯಯನ ಮಾಹಿತಿಯನ್ನು ನೀಡುತ್ತದೆ.

*ಮಲ್ಲಿಕಾರ್ಜುನ ಕಲಮರಹಳ್ಳಿ, 'ಗೊಲ್ಲರ ಇತಿಹಾಸ ಕಥನ,' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.*

'ಗೊಲ್ಲರ ಇತಿಹಾಸ ಕಥನ' ಕೃತಿಯಲ್ಲಿ ಕಾಡುಗೊಲ್ಲರು ಎನ್ನುವುದಕ್ಕಿಂತ ಗೊಲ್ಲರ ಬಗ್ಗೆ ಪ್ರಾಚೀನ ಕಾಲದಿಂದ ಹಿಡಿದು ಮುದ್ದಣ್ಣನ ಕಾಲದವರೆಗೆ ಕನ್ನಡ ಸಾಹಿತ್ಯದ ಕಾವ್ಯಗಳಲ್ಲಿ ಗೊಲ್ಲರ ಉಲ್ಲೇಖವನ್ನು ಗುರುತಿಸಲಾಗಿದೆ. ವಿವಿಧ ಭಾಷೆಗಳಲ್ಲಿ ಗೊಲ್ಲರನ್ನು ಸಂಬೋಧನೆ ಮಾಡಿರುವ ಉಲ್ಲೇಖಗಳ ಬಗ್ಗೆ ಈ ಗ್ರಂಥದಲ್ಲಿ ತಿಳಿಸಿದ್ದಾರೆ.

*ಚಿಕ್ಕಣ್ಣ ಎಣ್ಣೆಕಟ್ಟೆ, 'ವೀರ ಜುಂಜಪ್ಪ ಸಮಗ್ರ ಕಥಾವಳಿ' ಗಡಿನಾಡ ಜಾನಪದ ಸಂಪರ್ಕಾಭಿವೃದ್ಧಿ ಕೇಂದ್ರ ಪ್ರತಿಷ್ಠಾನ, ತುಮಕೂರು ಜಿಲ್ಲೆ, ೨೦೧೧.*

'ವೀರ ಜುಂಜಪ್ಪ ಸಮಗ್ರ ಕಥಾವಳಿ' ಜುಂಜಪ್ಪನ ಕಾವ್ಯವು ಕಥೆಯ ರೂಪದಲ್ಲಿರುವುದನ್ನು ಎಣ್ಣೆಕಟ್ಟೆ ಚಿಕ್ಕಣ್ಣ ಸಂಪಾದನೆ ಮಾಡಿರುವುದು ಕಂಡುಬಂದಿದೆ. ಇವರಿಗಿಂತ ಮುಂಚೆ ಜಿ.ಶಂ.ಪ. ಸಂಗ್ರಹ ಮಾಡಿದ್ದರು. ಆದರೆ ಚಿಕ್ಕಣ್ಣ ಸಂಪಾದನೆ ಮಾಡಿದ ಗದ್ಯವು ಚಲುವರಾಜು ಸಂಪಾದಿಸಿರುವ ಕಾವ್ಯದ ಗದ್ಯ ರೂಪವೆನಿಸುತ್ತದೆ.

*ಪ್ರೇಮಾ ಜಿ.ಕೆ., 'ಜನ್ನಿಗೆ,' ಶ್ರೀ ಅನ್ನಪೂರ್ಣ ಪ್ರಕಾಶನ, ಬೆಂಗಳೂರು, ೨೦೧೩.*

'ಜನ್ನಿಗೆ' ಇದು ಮಹಿಳಾ ಸಂಕಥನ. ಕಾಡುಗೊಲ್ಲರ ವೀರಗಾರ್ತಿಯರಿಂದ ಹಿಡಿದು ಪ್ರಸ್ತುತ ದಿನಮಾನಗಳಲ್ಲಿ ಕಾಡುಗೊಲ್ಲರ ಮಹಿಳೆಯರು ಯಾವ ಯಾವ ಕ್ಷೇತ್ರದಲ್ಲಿ ಯಾವ ಯಾವ

ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದನ್ನು ತಮ್ಮ ಅಧ್ಯಯನದ ಮೂಲಕ ತಿಳಿಸಿದ್ದಾರೆ. ಇವರು ಕಾಡುಗೊಲ್ಲರಲ್ಲಿಯೇ ಮೊಟ್ಟ ಮೊದಲು ಪಿಎಚ್.ಡಿ. ಮಾಡಿದ ಮಹಿಳೆ ಎಂದು ಹೇಳಬಹುದು.

***ಮೋಹನ್ ಕುಮಾರ್ ಎನ್., 'ಕಾಡುಗೊಲ್ಲರ ಕೋಲಾಟದ ಪದಗಳು,' ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೋಟಗೋಡಿ, ಹಾವೇರಿ, ೨೦೧೩.***

'ಕಾಡುಗೊಲ್ಲರ ಕೋಲಾಟದ ಪದಗಳು' ಗೋಟಗೋಡಿ ಜಾನಪದ ವಿಶ್ವವಿದ್ಯಾಲಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಮೋಹನ್ ಕುಮಾರ್ ಸಂಗ್ರಹಕಾರರು ಮಾತ್ರವಲ್ಲ ಸ್ವತಃ ಗಾಯಕರು. ಕಾಡುಗೊಲ್ಲರು ತಮ್ಮ ಹಟ್ಟಿಗಳಲ್ಲಿ ಹಬ್ಬಗಳಲ್ಲಿ ದೇವರು ಮಾಡುವ ಸಂದರ್ಭದಲ್ಲಿ ಜನರ ಮನೋರಂಜನೆಗಾಗಿ ಕೋಲು ಹೊಯ್ಯುವ ಪದ್ಧತಿಯು ಇಂದಿಗೂ ಜೀವಂತವಾಗಿರುವುದನ್ನು ಕಾಣಬಹುದು. ಇವು ದಾಖಲು ರೂಪದಲ್ಲಿರಲಿ ಎಂದು ಸಂಗ್ರಹಿಸಿ ಪ್ರಕಟಿಸಿದ್ದಾರೆ.

***ತೀ.ನಂ.ಶಂಕರನಾರಾಯಣ., ವೆಂಕಟೇಶ ಎಂ.ಎನ್., 'ಜುಂಜಪ್ಪ ಮಹಾಕಾವ್ಯ,' ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ಹಾವೇರಿ, ೨೦೧೪.***

'ಜುಂಜಪ್ಪ ಮಹಾಕಾವ್ಯ'ವನ್ನು ಹೇಳಿದವರು ಪೂಜಾರಿ ಶಿವಣ್ಣನವರು. ಈ ಕಾವ್ಯವು ಚಂಪೂ ರೂಪದಲ್ಲಿದೆ ಎಂದು ಹೇಳಿದರೆ ತಪ್ಪಾಗಲಾರದೇನೋ. ಏಕೆಂದರೆ ಇದರಲ್ಲಿ ಸ್ವಲ್ಪ ಭಾಗ ಕಾವ್ಯ ರೂಪದಲ್ಲಿದ್ದರೆ ಸ್ವಲ್ಪ ಭಾಗ ಗದ್ಯ ರೂಪದಲ್ಲಿದೆ. ಕೆಲವು ಸಂದುಗಳಲ್ಲಿ ವ್ಯತ್ಯಾಸ ಬಿಟ್ಟರೆ ಉಳಿದಂತೆ ಹೆಸರುಗಳಲ್ಲಿ ವ್ಯತ್ಯಾಸ ಕಂಡುಬರುವುದನ್ನು ಗಮನಿಸಬಹುದು.

***ಮೀರಾಸಾಬಿಹಳ್ಳಿ ಶಿವಣ್ಣ, 'ಗೊಲ್ಲಕಡಗ,' ಸಿ.ವಿ.ಜಿ. ಪಬ್ಲಿಕೇಷನ್ಸ್ ಬೆಂಗಳೂರು, ೨೦೧೫.***

'ಗೊಲ್ಲಕಡಗ' ಕೃತಿಯಲ್ಲಿ ಕಾಡುಗೊಲ್ಲರ ಮಹಿಳೆಯರು ಬಳಸುವ ಕಂಚಿನ ಕಡಗದ ಬಗ್ಗೆ ಲೇಖಕರು ಹೇಳುತ್ತಾರೆ. ಕಾಡುಗೊಲ್ಲರು ದ್ರಾವಿಡ ಪರಂಪರೆಯವರಾದರೂ ನಾವು ಕೃಷ್ಣಗೊಲ್ಲರು ಎಂದು ಹೇಳಿಕೊಂಡು ಕೃಷ್ಣನ ಆರಾಧಕರೆಂದು ಹೇಳಿಕೊಳ್ಳುತ್ತಾರೆ. ಆದರೆ ಅವರ ಎಲ್ಲಾ ಸಾಂಸ್ಕೃತಿಕ ನಾಯಕರ ಸೃಷ್ಟಿಪುರಾಣವನ್ನು ಗಮನಿಸಿದರೆ ಇವರು ಶಿವನ ಆರಾಧಕರೆಂಬುದು ಪ್ರತಿಯೊಬ್ಬ ಸಂಶೋಧಕನಿಗೂ ತಿಳಿದುಬರುವ ವಿಷಯ. ಇದರ ಜೊತೆಗೆ ಹುರುಳಿ-ನವಣೆ ಬತ್ತದ ಬಗ್ಗೆ ವಿವರಿಸಿದ್ದಾರೆ. ಕಾಡುಗೊಲ್ಲರು ಮಾಡುವ ದೀವಣಿಗೆ ಹಬ್ಬದ ಬಗ್ಗೆ ಅದರ ವಿಶೇಷತೆ ಹಾಗೂ ಪಶುಪಾಲಕರು ಏಕೆ ದೀವಣಿಗೆ ಹಬ್ಬವನ್ನು ಮಾಡುತ್ತಾರೆ ಎಂಬುದನ್ನು ವಿಶ್ಲೇಷಿಸಿದ್ದಾರೆ.

***ಕಾಳೇಗೌಡ ನಾಗವಾರ, 'ಬೇವಿನಹಳ್ಳಿ ಕಾಡುಗೊಲ್ಲರಹಟ್ಟಿ,' ಸಿ.ವಿ.ಜಿ. ಇಂಡಿಯಾ, ಕಸ್ತೂರಿ ಬಾ ಭವನ, ಬೆಂಗಳೂರು, ೨೦೧೫.***

ಕಾಡುಗೊಲ್ಲರ ಬೇವಿನಹಳ್ಳಿ ಎಂಬ ಒಂದು ಹಟ್ಟಿಯ ಸಂಸ್ಕೃತಿಯನ್ನು ಅಧ್ಯಯನ ಮಾಡಿದ್ದಾರೆ. ಈ ಕೃತಿಯಲ್ಲಿ ಕಾಡುಗೊಲ್ಲರ ಸಂಸ್ಕೃತಿಯನ್ನು ಒಂದು ಹಟ್ಟಿಗೆ ಸೀಮಿತ ಮಾಡುವುದರ ಮೂಲಕ ತಿಳಿಸಿಕೊಟ್ಟಿದ್ದಾರೆ. ಬೇವಿನಹಳ್ಳಿ ಗೊಲ್ಲರಹಟ್ಟಿಯಲ್ಲಿ ಜುಂಜಪ್ಪನ ಜಾತ್ರೆ ಮಾಡುವುದರ ಬಗ್ಗೆ ಅವರ

ಹಿರಿದೀವಣಿಗೆ ಮತ್ತು ಕಿರಿದೀವಣಿಗೆ, ದೀಪಾವಳಿ, ಕಾರಹುಣ್ಣಿಮೆ ಹಬ್ಬ ಮಾಡುವ ವಿಧಾನವನ್ನು ವಿವರಿಸಿದ್ದಾರೆ. ಕಾಡುಗೊಲ್ಲರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಅವರ ನ್ಯಾಯಪದ್ಧತಿ ಮುಂತಾದವುಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.

*ಗಂಗಾಧರ ದೈವಜ್ಞ, 'ಬುಡಕಟ್ಟು: ಹುಟ್ಟು–ಸಾವಿನ ನಡುವೆ', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫.*

'ಬುಡಕಟ್ಟು ಸಮಾಜ ಹುಟ್ಟು– ಸಾವಿನ ನಡುವೆ' ಈ ಕೃತಿಯಲ್ಲಿ ಕಾಡುಗೊಲ್ಲರ ಸೃಷ್ಟಿಪುರಾಣಕ್ಕೆ ಸಂಬಂಧಿಸಿದ ಮಾಹಿತಿ ಹಾಗೂ ಕಾಡುಗೊಲ್ಲರ ಶವ ಸಂಸ್ಕಾರದ ವಿಧಿ ವಿಧಾನಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ. ಅಷ್ಟೇ ಅಲ್ಲದೇ ಕಾಡುಕುರುಬರು ಜೇನುಕುರುಬರು, ಹಾಲಕ್ಕಿ ಒಕ್ಕಲಿಗರು, ಇರುಳಿಗರು, ಸಿದ್ದಿಯರು, ಸೋಲಿಗರು ಮುಂತಾದ ಬುಡಕಟ್ಟುಗಳ ಶವಸಂಸ್ಕಾರದ ಬಗ್ಗೆ ಮಾಹಿತಿಯನ್ನು ತಿಳಿಸುತ್ತದೆ.

*ಬೇವಿನಹಳ್ಳಿ ಕಟ್ಟೆ ಮನೆಯ ಯಜಮಾನರಾದ ಪಟೇಲ್ ನಾಗೇಗೌಡ ೧೯೩೬* ಅವರು ಅಂದಿನ ಮದ್ರಾಸ್ ಸರ್ಕಾರಕ್ಕೆ ಸಾರ್ವಜನಿಕರ ಪರವಾಗಿ ಒಂದು ಪತ್ರ ಬರೆದು ರವಾನಿಸುತ್ತಾರೆ. ಈ ಕರಪತ್ರದಲ್ಲಿ ಅವರು ಕಾಡುಗೊಲ್ಲರನ್ನು ಊರುಗೊಲ್ಲರೊಂದಿಗೆ ಸೇರಿಸಿ ಯಾದವರೆಂದು ಪರಿಗಣಿಸಿದ್ದ ಮದ್ರಾಸ್ ಸರ್ಕಾರದ ಆದೇಶವನ್ನು ಪ್ರಬಲವಾಗಿ ವಿರೋಧಿಸಿದ್ದರು, ದುರದೃಷ್ಟವಶಾತ್ ಇವರ ಈ ಪತ್ರಕ್ಕೆ ವ್ಯಾಪಕವಾದ ಬೆಂಬಲ ದೊರೆತಿಲ್ಲದಿರುವುದು ತಿಳಿದುಬಂದಿದೆ.

*'ಗೊಲ್ಲಗೌಡರ ವಂಶಾವಳಿಗಳು,' ೧೯೪೦,* ಎಂಬ ತಮ್ಮ ಪುಸ್ತಕದಲ್ಲಿ ಬಿ.ಎ ಮಹದೇವ ಶಾಸ್ತ್ರಿಗಳು ಗೊಲ್ಲ ಜನಾಂಗದ ಹಿರಿಯ ಯಜಮಾನರುಗಳಿಂದ ಸಂಗ್ರಹಿಸಿದ ಆಧಾರದ ಮೇಲೆ ಕಾಡುಗೊಲ್ಲ ಜನಾಂಗದ ವಂಶಾವಳಿಯನ್ನು ರಚಿಸಿದ್ದಾರೆ. ಅಂತೆಯೇ ಈ ಆಧಾರದ ಮೇಲೆ ಕಾಡುಗೊಲ್ಲರು ದೆಹಲಿಯಿಂದ ವಲಸೆ ಬಂದಿರುವುದರ ಬಗ್ಗೆ ವಿಸ್ತೃತ ಮಾಹಿತಿ ನಿರೂಪಿಸಿದ್ದಾರೆ. ಅಲ್ಲದೆ ಅವರು ಈ ಪುಸ್ತಕದಲ್ಲಿ ಪಾತೆಲಿಂಗನ ಪುರಾಣ ಮತ್ತು ಜಾಡಿ ವಿಳ್ಯಾದ ಕುರಿತಾಗಿ ಅವಶ್ಯಕ ಮಾಹಿತಿಗಳನ್ನು ದಾಖಲಿಸಿದ್ದಾರೆ.

*ಕಣ್ಮರೆಯಾಗುತ್ತಿರುವ ಕೆಲವು ಜೀವನ ಚಿತ್ರಗಳು–ಗೊಲ್ಲರು* ಎಂಬ ೧೯೭೪ರಲ್ಲಿ ಪ್ರಕಟಿಸಿದ ತಮ್ಮ ಲೇಖನದಲ್ಲಿ ವರಕವಿ ದ.ರಾ ಬೇಂದ್ರೆಯವರು ಧಾರವಾಡ ಸುತ್ತಮುತ್ತಲಿನ ಗೊಲ್ಲರ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಚಿತ್ರಿಸಿದ್ದಾರೆ. ಕಾಡುಗೊಲ್ಲರು ತಮ್ಮ ಜೀವನೋಪಾಯಕ್ಕಾಗಿ ಪಶುಪಾಲನೆಯ ವೃತ್ತಿಯನ್ನು ಅಷ್ಟೇ ಅಲ್ಲದೆ ಗುಡಿ ಕೈಗಾರಿಕೆಗಳನ್ನು ಸಹ ಅವಲಂಬಿಸಿದ್ದು, ಈ ಗುಡಿ ಕೈಗಾರಿಕೆಗಳು ಬುಡಕಟ್ಟು ಜನಾಂಗದ ವೃತ್ತಿ ಆಧಾರಿತ ವೃತ್ತಿಗಳಾಗಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ.

*ಅಂಬಳಿಕೆ ಹಿರಿಯಣ್ಣ ಅವರ 'ಕಾಡುಗೊಲ್ಲರ ಜನಪದ ಗೀತೆಗಳು,' ೧೯೭೮,* ಕ್ಷೇತ್ರಕಾರ್ಯದಿಂದ ಅವರು ಸಂಗ್ರಹಿಸಿದ ಗೀತೆಗಳಲ್ಲಿ ಕಾಡುಗೊಲ್ಲರ ದೈವಭಕ್ತಿಯ ಕುರುಹುಗಳಾದ ಕಾಡುಗೊಲ್ಲ ಜನಾಂಗ

ದೈವೀಪುರುಷರಾಗಿ ಜನ್ಮ ತಾಳಿ ಆ ಜನಾಂಗದ ದೇವರುಗಳಾಗಿ ಪರಿವರ್ತಿತರಾದ ಕಾಟಯ್ಯ, ಚಿತ್ತಯ್ಯ, ಕ್ಯಾತಪ್ಪ, ಜುಂಜಪ್ಪ ಇತ್ಯಾದಿ ದೇವರುಗಳನ್ನು ಕುರಿತಾಗಿ ಮಹತ್ವದ ತ್ರಿಪದಿ ರೂಪದ ಹಾಡುಗಳನ್ನು ಸಂಗ್ರಹಿಸಿದ್ದಾರೆ. ಈ ತ್ರಿಪದಿಗಳು ಕಾಡುಗೊಲ್ಲ ಜನಾಂಗದ ಒಟ್ಟಾರೆ ಸಮುದಾಯದ ಜೀವನದ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗಿದೆ. 'ಕತ್ತಾಲ ದಾರಿ ದೂರ' ಮತ್ತು 'ಜನಪದ ವೀರ ಗೀತೆಗಳು' ಎಂಬ ಎರಡು ಮಹತ್ವದ ಕೃತಿಗಳನ್ನು ೧೯೮೧ರಲ್ಲಿ ಕೃಷ್ಣಮೂರ್ತಿ ಹನೂರು ಪ್ರಕಟಿಸಿದ್ದಾರೆ. 'ಕತ್ತಾಲ ದಾರಿ ದೂರ' ಎಂಬ ಕೃತಿಯು ಗೊಲ್ಲ ಜನಾಂಗದ ಮಹಾಸತಿಯರ ಬಗ್ಗೆ ಮಾಹಿತಿ ಒಳಗೊಂಡಿದೆ. ಗೊಲ್ಲ ಜನಾಂಗದವರು ತಮ್ಮ ಜನಾಂಗದ ಪರಿಶುದ್ಧತೆಯ ದೃಷ್ಟಿಯಿಂದ ಕಾಡುಗೊಲ್ಲರ ಹೆಣ್ಣುಮಕ್ಕಳಿಗೆ ಪಾತಿವ್ರತ್ಯದ ನಿಯಮ ಕಡ್ಡಾಯ ಎಂಬಂತಹ ವಿವರವಿದೆ. ಮಹಾಸತಿಯರಾಗಿ ವೀರತಿಮ್ಮವ್ವ ಮತ್ತು ಕೊಂಡದ ಕಾಟಮ್ಮ ಅವರನ್ನು ಪರಿಚಯಿಸಿದ್ದಾರೆ. 'ಜನಪದ ವೀರಗೀತೆಗಳು' ಕೃತಿಯಲ್ಲಿ ಕಾಡುಗೊಲ್ಲ, ಮ್ಯಾಸಬೇಡ ಮತ್ತು ಕುಂಚಿಟಿಗ ಸಮುದಾಯದ ವೀರಗಾರರನ್ನು ಕುರಿತಾಗಿ ಕಥನಗೀತೆಗಳಿದ್ದು ಈ ಜನಾಂಗಗಳ ಆಚರಣೆಗಳಲ್ಲಿನ ಸಾಮ್ಯತೆಗಳನ್ನು ಎತ್ತಿ ಹಿಡಿದಿದ್ದಾರೆ.

*'ಗೊಲ್ಲರ ಹಟ್ಟಿ'* ಎಂಬ ಲೇಖನದಲ್ಲಿ ಬಿ.ವಿ. ನಾಗರಾಜು ಅವರು ಕಾಡುಗೊಲ್ಲ ಜನಾಂಗದ ಸಾಮಾಜಿಕ ವ್ಯವಸ್ಥೆಯ ಸಂಕೀರ್ಣತೆಯನ್ನು ಮತ್ತು ಈ ಜನಾಂಗದ ಜಟಿಲ ಸಾಂಪ್ರದಾಯಿಕ ನಂಬಿಕೆಗಳು ಅತಿ ಶೀಘ್ರವಾಗಿ ಬದಲಾವಣೆ ಆಗಬೇಕು ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

*'ಜಾನಪದ ದೇವರು ಜುಂಜಪ್ಪ ಕೆಲವು ಹೆಚ್ಚಿನ ಸಂಗತಿಗಳು'* ಎಂಬ ಲೇಖನವನ್ನು ಎಂ.ಬಿ ನೇಗಿನ ಹಾಳ ಅವರು 'ಸಾಧನೆ' ಎಂಬ ಪತ್ರಿಕೆಯಲ್ಲಿ ೧೯೮೮ರಲ್ಲಿ ಪ್ರಕಟಿಸಿದ್ದಾರೆ. ಇವರ ಲೇಖನದಲ್ಲಿ ಕಾಡುಗೊಲ್ಲರ ಪವಾಡ ಪುರುಷ ಜುಂಜಪ್ಪನ ಪ್ರಸಿದ್ಧಿ ಮತ್ತು ಆಳ್ವಿಕೆ ದಕ್ಷಿಣ ಕರ್ನಾಟಕ ಮಾತ್ರವಲ್ಲದೆ, ಉತ್ತರ ಕರ್ನಾಟಕಕ್ಕೂ ಹಬ್ಬಿತ್ತು. ಹಿರೇಮೈಲಾರ, ದೇವರಗುಡ್ಡ, ಸವದತ್ತಿ ತಾಲ್ಲೂಕಿನ ಕಾರಿಮನಿ, ಬೈಲಹೊಂಗಲ ತಾಲ್ಲೂಕಿನ ಶೀಗೆಹಳ್ಳಿ ಇತ್ಯಾದಿ ಕ್ಷೇತ್ರಗಳು ಜುಂಜಪ್ಪನ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳು ಆಗಿದ್ದವು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೆ ಇವರ ಅಭಿಪ್ರಾಯಗಳನ್ನು ಒಪ್ಪುವುದು ಅಷ್ಟು ಸಮಂಜಸವಲ್ಲ ಎನಿಸುತ್ತದೆ. ಏಕೆಂದರೆ ಕಾಡುಗೊಲ್ಲರ ಜುಂಜಪ್ಪ ವೈಷ್ಣವ ಪಂಥದ ಅವಲಂಬಿಯಾಗಿದ್ದು, ಉತ್ತರ ಕರ್ನಾಟಕದವರು ಶೈವ ಪಂಥದ ಆರಾಧಕರಾಗಿದ್ದಾರೆ ಎಂಬುದನ್ನು ನಾವು ಗಮನಿಸಬಹುದು. ಬಹುಶಃ ಅದಕ್ಕಾಗಿಯೇ ಮೀರಾಸಾಬಿಹಳ್ಳಿ ಶಿವಣ್ಣ ಅವರು ನೇಗಿನಹಾಳ ಅವರ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಬದಲಾಗಿ ಅವರ 'ಜುಂಜಪ್ಪ ಎಂಬ ಸಮಾನ ಹೆಸರಿನ ಹೋಲಿಕೆ ಒಂದು ಸಾಹಿತ್ಯಿಕ ಕಾಕತಾಳೀಯತೆ' ಎಂಬ ಮಾತನ್ನು ಒಪ್ಪಬಹುದಾಗಿದೆ.

***ಮೋಗಳ್ಳಿ ಗಣೇಶ, 'ದಲಿತರು ಮತ್ತು ಜಾಗತೀಕರಣ' ದಲಿತ ಸಂಸ್ಕೃತಿ ಅಧ್ಯಯನ ಮಾಲೆ-೧೯೯೯***

ಜಾಗತೀಕರಣವನ್ನು ಜಗತ್ತಿನ ದೇಶಗಳಿಗೆ ಸಲಭವಾಗಿ ಅರಗಿಸಿಕೊಳ್ಳುವಂತೆಯೂ ಇಲ್ಲ ಅದೇ ರೀತಿ ಬಿಡುವಂತೆಯೂ ಇಲ್ಲ ಹಾಗೆಯೇ ಈ ಜಾಗತೀಕರಣದಿಂದ ಆಗುವ ಅನೇಕ ತೊಂದರೆಗಳನ್ನು ಹಾಗೆಯೇ ಅದನ್ನು ಒಪ್ಪಿಕೊಳ್ಳದಿದ್ದರೆ ಇದರಿಂದ ಆಗುವ ಅನಾನುಕೂಲಗಳನ್ನು ಮತ್ತು ವಿಶ್ವಮಾರೂಕಟ್ಟೆಗೂ ನಮಗೂ ಯವುದೇ ಸಂಬಂಧ ಬೇಡ ಎಂದು ಹಿಂದುಳಿದ ದೇಶಗಳು

ಘೋಷಿಸಿಕೊಂಡಾಗ ಆ ದೇಶಗಳು ಆರ್ಥಿಕವಾಗಿ ಯಾವತ್ತು ಮೇಲೇಳದಂತೆ ಬಿದ್ದಂತಹ ಆರ್ಥಿಕ ಹೊಡೆತಗಳಿಂದ ಮುಂದೆ ಎಂದೂ ಚೇತರಿಸಿಕೊಳ್ಳಲು ಸಾಧ್ಯವಿಲ್ಲದಂತಹ ಪರಿಸ್ಥಿತಿ ಕಾಣುತ್ತದೆಂದು ಮೊಗಳ್ಳಿ ಗಣೇಶ್‌ರವರು ಅಭಿಪ್ರಾಯ ಪಟ್ಟಿದ್ದಾರೆ.

***"Globalization" www.Academy publish .org. Edited by Jay Rajasekar-2015'***

The spread of humans, information, knowledge, culture, wealth, goods, and services around the world can be thought of as globalization. Of course there are more that moves around the world and the globalization keeps producing more and more endeavors to be explored and researched.

Making Globalization Socially Sustainable- Edited by Marc Bacchetta and Marion Jansen Published by WTO.

ಜಾಗತೀಕರಣದಿಂದ ಆದಂತಹ ಆರ್ಥಿಕ ಬಿಕ್ಕಟ್ಟುಗಳು ಹಾಗೂ ನಿರುದ್ಯೋಗದ ಸಮಸ್ಯೆ, ಕಾರ್ಮಿಕರ ಸಮಸ್ಯೆ ಹಾಗೂ ಮರೆಮಾಚಿದ ನಿರುದ್ಯೋಗ ಕುರಿತಂತೆ, ವೇತನ ತಾರಾತಮ್ಯಕ್ಕೆ ಸಂಬಂಧಿಸಿದ ಮತ್ತು ಕೌಶಲ್ಯಾದಾರಿತ ಉದ್ಯೋಗಕ್ಕೆ ಸಂಬಂಧಿಸಿದಂತೆ ವಿಶ್ವವ್ಯಾಪಾರ ಸಂಘಟನೆಯಿಂದ ಈ ಪುಸ್ತಕ ಪ್ರಕಟಗೊಂಡು ಈ ಮೇಲಿನ ಆಂಶಗಳನ್ನು ಕುರಿತು ಚರ್ಚಿಸಲಾಗಿದೆ.

ಜಾಗತೀಕರಣ, ಎಂಬ ಪುಸ್ತಕದಲ್ಲಿ ಒಡೆಯರ್ ಡಿ ಹೆಗಡೆ. ಯವರು ಜಾಗತೀಕರಣದ ಪ್ರಭಾವದಿಂದ ಉಂಟಾದ ಅನುಕೂಲಗಳು ಹಾಗೂ ಅದರಿಂದ ಸಂಬಂವಿಸಿದಂತಹ ಅನಾನುಕೂಲಗಳ ಹಾಗೂ ಅದರಿಂದ ಬದಲಾದ ಸಂಸ್ಕೃತಿಗಳ ಕುರಿತು ತಿಳಿಸಿದ್ದಾರೆ.

***The Dark Side of Globalisation, Jarge Heine, Ramesh Thakur, The Hindu E-Paper.January 10,2011, Updated October,22nd-2016.***

ಈ ಮೇಲಿನ ದ ಹಿಂದೂ ಇ-ಪೇಪರ್‌ನಲ್ಲಿ ಪ್ರಕಟಗೊಂಡ ಲೇಖನದಲ್ಲಿ ಜಾಗತೀಕರಣ ಯಾರ ಹಿಡಿತಕ್ಕೂ ಸಿಗದಿರುವ ಒಂದು ಆರ್ಥಿಕ ಪ್ರಕ್ರಿಯೆ. ಇದರಿಂದ ಜಾಗತಿಕ ಮಾರುಕಟ್ಟೆಗಳು ಅತ್ಯಂತ ಮೇಲಸ್ತರಕ್ಕೆ ಬೆಳೆದು ಇದು ನಿಯಂತ್ರಣಕ್ಕೆ ಬರದೇ ಇಲ್ಲದ್ದಾಗಿದೆ. ಹಾಗೂ ಇದು ಆರ್ಥಿಕ ಅಸಮತೋಲನ ಬೆಳವಣಿಗೆಗೆ ಹಾಗೂ ಆರ್ಥಿಕ ಬಿಕ್ಕಟ್ಟಿಗೆ ಕಾರಣವಾಯಿತು. ಹಿಂದುಳಿದ ಹಾಗೂ ಮುಂದುವರೆಯುತ್ತಿರುವ ದೇಶಗಳು ಶೋಷಣೆ ಒಳಗಾದವು ಎಂದು ವಿಶ್ಲೇಷಿಸಿಸಲಾಗಿದೆ.

***'Impact of Globalization on Women' ISSN:2319–7285, (March-April, 2018. https://www.longdom.org/articles/impact-of-globalization-on-women.***

ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಮಹಿಳೆಯರ ಮೇಲೆ ಜಾಗತೀಕರಣ ಮಹಿಳೆಯರ ಶಿಕ್ಷಣ, ಉದ್ಯೋಗ, ಆರೋಗ್ಯ ಮತ್ತು ನಾಗರೀಕತೆಯು ಮೇಲೆ ಯಾವ ರೀತಿಯ ಪರಿಣಾಮ

ಬೀರಿದೆ ಹಾಗೂ ಲಿಂಗ ತಾರತಮ್ಯ ಮತ್ತು ಶಿಶುಮರಣಕ್ಕೆ ಸಂಬಂಧಿಸಿದಂತೆ ಈ ಲೇಖನದಲ್ಲಿ ಪುಷ್ಪೇಂದರ್ ಕತೂರ್‌ರವರು ತಿಳಿಸಿದ್ದಾರೆ.

ಮೇಲ್ಕಾಣಿಸಿದ ಅಧ್ಯಯನಗಳು, ಜಾಗತೀಕರಣಕ್ಕೆ ಸಂಬಂಧಿಸಿದಂತೆ ಅದರ ಪರಿಣಾಮಗಳು ಮತ್ತು ಪ್ರಭಾವಗಳು ಮತ್ತು ಅನುಕೂಲ, ಅನಾನುಕೂಲಗಳು ಇನ್ನಿತರ ಮಾಹಿತಿಗಳನ್ನು ಒದಗಿಸುವುದರ ಜೊತೆಗೆ ಕಾಡುಗೊಲ್ಲರ ಸಾಮಾಜಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ಮೇಲೆ ಜಾಗತೀಕರಣದ ಪ್ರಭಾವ ಹೇಗೆ ಆಗಿದೆ ಎನ್ನುವುದಕ್ಕೆ ಸಂಬಂಧಿಸಿದಂತೆ ಈ ಮೇಲಿನ ಪುಸ್ತಕಗಳು ಹಾಗೂ ಲೇಖನಗಳು ಮಾಹಿತಿಯನ್ನು ಒದಗಿಸುತ್ತವೆ. ಆದರೆ, ಕಾಡುಗೊಲ್ಲರ ಆರ್ಥಿಕತೆಯನ್ನು ಮತ್ತು ಆ ಆರ್ಥಿಕತೆಯಲ್ಲಿ ಆದ ಬದಲಾವಣೆಗಳನ್ನು ಇಲ್ಲಿಯವರೆಗೂ ಅಧ್ಯಯನ ಮಾಡಿದ್ದರೂ ಸಹ ಇಲ್ಲಿ ಇನ್ನೂ ಹೆಚ್ಚಿನ ಅಧ್ಯಯನದ ಅವಶ್ಯಕತೆ ಇರುವುದು ಕಂಡುಬರುವ ಕಾರಣಗಳಿಂದ ನಾನು ಪ್ರಸ್ತತ ಅಧ್ಯಯನವನ್ನು ಕೈಗೊಂಡಿದ್ದೇನೆ.

**ಮಹಾಪ್ರಬಂಧದ ಅಧ್ಯಾಯಗಳ ವಿನ್ಯಾಸ**

ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ ಎಂಬ ಸಂಶೋಧನಾ ಶೀರ್ಷಿಕೆ ಅಡಿಯಲ್ಲಿ ಸಂಶೋಧನೆ ಕೈಗೊಳ್ಳಲಾಗಿದ್ದು, ಈ ಸಂಶೋಧನೆಯ ಮೂಲ ಆಶಯಗಳನ್ನು ಪೂರೈಸಲು ಪ್ರಾಥಮಿಕ ಹಾಗೂ ಆನುಷಂಗಿಕ ಮಾಹಿತಿ ಲಭ್ಯದ ಆಧಾರದ ಮೇಲೆ ಒಟ್ಟು ೬ ಅಧ್ಯಾಯಗಳನ್ನಾಗಿ ವರ್ಗೀಕರಿಸಲಾಗಿದೆ.

**ಅಧ್ಯಾಯ ಒಂದು** ಅಧ್ಯಯನದ ಉದ್ದೇಶ, ಪ್ರಾಕಲ್ಪನೆ, ವ್ಯಾಪ್ತಿ, ಅಧ್ಯಯನ ಮಾದರಿ ನಮೂನೆ, ಸಾಹಿತ್ಯಾವಲೋಕನ ಸಂಶೋಧನಾ ವಿನ್ಯಾಸ ಹಾಗೂ ಮಹತ್ವವನ್ನು ತಿಳಿಯಪಡಿಸುತ್ತದೆ.

**ಅಧ್ಯಾಯ ಎರಡು** ಜಾಗತೀಕರಣ ಮತ್ತು ತಳಸಮುದಾಯಗಳ ಸ್ಥಿತಿಗತಿಗಳು ಎಂಬ ಉಪಶೀರ್ಷಿಕೆ ಅಡಿಯಲ್ಲಿ ಜಾಗತೀಕರಣದ ಅರ್ಥ, ವ್ಯಾಖ್ಯೆ ಮತ್ತು ಭಾರತದ ತಳಸಮುದಾಯಗಳು ಹಾಗೂ ಇವುಗಳ ಮೇಲೆ ಜಾಗತೀಕರಣದ ಪ್ರಭಾವ ಬೀರಿರುವ ಅಂಶಗಳನ್ನು ವ್ಯಕ್ತಪಡಿಸುತ್ತದೆ.

**ಅಧ್ಯಾಯ ಮೂರು** ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಸಂಸ್ಕೃತಿ ಎಂಬ ಅಧ್ಯಾಯದಲ್ಲಿ ಕಾಡುಗೊಲ್ಲರ ಚಾರಿತ್ರಿಕ ಹಿನ್ನಲೆ, ಸೃಷ್ಟಿಪುರಾಣಗಳ ಪರಿಚಯ ಮತ್ತು ಕಾಡುಗೊಲ್ಲರ ಕುರಿತು ಇರುವ ಐತಿಹ್ಯಗಳು, ಕಥೆ ಮತ್ತು ಕಾವ್ಯಗಳು, ಕಾಡುಗೊಲ್ಲರ ಸಾಹಿತ್ಯಿಕ ಪ್ರಕಾರಗಳು ಮತ್ತು ಭಾಷೆಯ ಕುರಿತು ಮಾಹಿತಿ ನೀಡಲಾಗಿದೆ. ಇದಲ್ಲದೆ ಸಾಮಾಜಿಕ ಸಂರಚನೆ, ಕುಟುಂಬದ ರಚನೆ ಮತ್ತು ಒಡೆತನ, ಲಿಂಗ ಸಂಬಂಧಗಳು, ನ್ಯಾಯ ಪಂಚಾಯಿತಿಗಳು ಹೆಚ್ಚಿನ ಪರಿಕಲ್ಪನೆ ಹಾಗೂ ಕಾಡುಗೊಲ್ಲರ ಸಂಸ್ಕೃತಿ ದೈವ ಮತ್ತು ಆಚರಣೆಗಳ ಕುರಿತು ಈ ಅಧ್ಯಾಯ ತಿಳುವಳಿಕೆ ನೀಡುತ್ತದೆ.

**ಅಧ್ಯಾಯ ನಾಲ್ಕ** ಕಾಡುಗೊಲ್ಲರ ಸಾಂಪ್ರದಾಯಿಕ ಕುಲಕಸುಬುಗಳಾದ ಬೇಟೆ, ಪಶುಪಾಲನೆ, ದನಗಳ ಸಾಗಣೆ, ದೈವದ ಹಸುಗಳು, ರೊಪ್ಪಗಳು, ಕಸುಬಿನ ಕುರಿತಾದ ನಂಬಿಕೆಗಳು ಮತ್ತು ಇತರೆ ಕಸುಬುಗಳ ಕುರಿತು ಮಾಹಿತಿ ನೀಡಲಾಗಿದೆ.

**ಅಧ್ಯಾಯ ಐದು** ಕಾಡುಗೊಲ್ಲರ ಮೇಲೆ ಜಾಗತೀಕರಣದ ಪ್ರಭಾವಗಳು ಎಂಬ ಅಧ್ಯಯದಲ್ಲಿ ಕಾಡುಗೊಲ್ಲರ ಆರ್ಥಿಕ ಸ್ಥಿತಿ ಮತ್ತು ಕಾಡುಗೊಲ್ಲರ ಸಾಮಾಜಿಕೆ ಬದುಕಿನ ಮೇಲೆ ಹಾಗೂ ಸಂಸ್ಕೃತಿಯ ಮೇಲೆ ಜಾಗತೀಕರಣದಿಂದಾಗಿರುವ ಪ್ರಭಾವವನ್ನು ತಿಳಿಸಲಾಗಿದೆ. ವರ್ತಮಾನದಲ್ಲಿ ಕಾಡುಗೊಲ್ಲ ಸಮುದಾಯದ ಪ್ರಸ್ತುತ ಸ್ಥಿತಿಗಳ ಕುರಿತು ಮಾಹಿತಿ ನೀಡುತ್ತದೆ.

ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಕಾಡುಗೊಲ್ಲರ ಸಮುದಾಯದ ಜನಸಂಖ್ಯೆ ಹಂಚಿಕೆ, ಲಿಂಗಾನುಪಾತ, ವೃತ್ತಿಗಳ ವರ್ಗೀಕರಣ, ಕುಟುಂಬದ ರಚನೆ ಮತ್ತು ಒಡೆತನ, ಸಾಮಾಜಿಕ ಸ್ಥಾನಮಾನ, ಸಾಕ್ಷರತೆಯ ಪ್ರಮಾಣ ಹಾಗೂ ಜಮೀನಿನ ಒಡೆತನದ ಕುರಿತು ಮಾಹಿತಿ ನೀಡುತ್ತದೆ.

**ಸಮಾರೋಪ** ಎಂಬ ಕೊನೆಯ ಅಧ್ಯಾಯವು ಸಂಶೋಧನೆಯಿಂದ ವ್ಯಕ್ತವಾದ ಫಲಿತಗಳು ಮತ್ತು ಪರಿಹಾರೋಪಾಯಗಳು ಕುರಿತು ಮಾಹಿತಿ ನೀಡುತ್ತದೆ.

ಅಧ್ಯಯನದ ಕೊನೆಯಲ್ಲಿ ಅನುಬಂಧಗಳಲ್ಲಿ ಪರಾಮರ್ಶನ ಗ್ರಂಥಗಳು ಕೊಷ್ಟಕಗಳು, ವಕ್ತೃಗಳ ಮಾಹಿತಿ ಪ್ರಶ್ನಾವಳಿ ಮಾದರಿ, ಅಂಕಿಅಂಶಗಳ ಪಟ್ಟಿ ಹಾಗೂ ಛಾಯಾಚಿತ್ರಗಳನ್ನು ನೀಡಲಾಗಿದೆ.

ಈ ಮೇಲ್ಕಂಡಂತೆ ಆರು ಅಧ್ಯಾಯಗಳಾಗಿ ವಿಂಗಡಿಸಿ ಮಾಹಿತಿ ಮೂಲದ ಲಭ್ಯತೆಯಿಂದ ವಿಷಯಾನುಸಾರ ವರ್ಗೀಕರಿಸಿ ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಸಮಗ್ರ ಬದುಕನ್ನು ಅನಾವರಣ ಮಾಡಲಾಗಿದೆ.

**ಅಡಿಟಿಪ್ಪಣಿಗಳು**

೧. ಚಂದ್ರಶೇಖರ್ ಟಿ.ಆರ್., ಅಮರ್ತ್ಯಸೇನ್‌ರ ಅಭಿವೃದ್ಧಿ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ,೧೨,೨೦೦೩.

೨. ಎಚ್ಚಾರ್ಕೆ, ಸೂಕ್ಷ್ಮ ಅರ್ಥಶಾಸ್ತ್ರ, ಸಪ್ನ ಬಕ್ ಹೌಸ್, ಬೆಂಗಳೂರು, ಪುಟ–೨,೨೦೦೪

೩. ಮಾನವಿಕಾರ್ಥಶಾಸ್ತ್ರ, ಅಂತರ್ಜಾಲ ವಿಕಿಪೀಡಿಯ. http://www.kitkatwords.com/ economics

೪. ಚಂದ್ರ ಪೂಜಾರಿ ಎಂ., ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟು ಅಭಿವೃದ್ಧಿ, (ಸಂ), ಪ್ರಭಾಕರ ಎ.ಎಸ್., ಆದಿವಾಸಿ ಆಖ್ಯಾನ, ಪುಟ, ೪೭೭.

೫. Fortune R.C. The Garden Rituvals Dobu, Tribal Religion and Economic Life, p. ೨೭೨,೨೦೦೨.

೬. ಅನೀಕಿನ್ ಎ.ವಿ., ರಾಜಕೀಯ ಅರ್ಥಶಾಸ್ತ್ರದ ತಾರುಣ್ಯ, ಪ್ರಸ್ತಾವನೆ, ಪ್ರಗತಿ ಪ್ರಕಾಶನ ಮಾಸ್ಕೋ, ಪುಟ, ೭, ೧೯೮೨.

## ಅಧ್ಯಾಯ : ಎರಡು

# ಜಾಗತೀಕರಣ ಮತ್ತು ತಳಸಮುದಾಯಗಳ ಸ್ಥಿತಿಗತಿಗಳು

# ಅಧ್ಯಾಯ : ಎರಡು

# ಜಾಗತೀಕರಣ ಮತ್ತು ತಳಸಮುದಾಯಗಳ ಸ್ಥಿತಿಗತಿಗಳು

## ೨.೧. ಪೀಠಿಕೆ

ಭಾರತೀಯ ಸಮಾಜವು ಬಹು ಧರ್ಮ, ಭಾಷೆ, ಜಾತಿ ಜನಾಂಗ ಮತ್ತು ಬುಡಕಟ್ಟುಗಳಿಂದ ಕೂಡಿದ ಸಮಾಜವಾಗಿದ್ದು, ಸಂಕೀರ್ಣ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದೆ. ಈ ಸಂಕೀರ್ಣ ಸಾಮಾಜಿಕ ವ್ಯವಸ್ಥೆಯಲ್ಲಿ ಏಕತೆಗಿಂತಲೂ ಹೆಚ್ಚಿಗೆ ಭಿನ್ನತೆಯ ವಿವಿಧ ಆಯಾಮಗಳನ್ನು ಕಾಣಬಹುದು. ಹೋಲಿಕೆಯ ಮತ್ತು ವಿವಿಧತೆಯ ಅಂಶಗಳು ಒಂದೇ ವಿಸ್ತೃತ ಸಮಾಜದ ಭಾರತದಲ್ಲಿ ಬೇರೆ ಬೇರೆ ಸಾಮಾಜಿಕ ಗುಂಪುಗಳಲ್ಲಿ ಕಂಡುಬರುತ್ತದೆ. ಭಾರತೀಯ ಸಮಾಜದಲ್ಲಿ ನಾವು ನಗರ ಸಮಾಜ, ಗ್ರಾಮೀಣ ಸಮಾಜ ಎಂಬ ಭೇದಗಳನ್ನು ಮಾಡುವುದರೊಂದಿಗೆ ಬುಡಕಟ್ಟು ಸಮಾಜ ಅಥವಾ ಸಂಸ್ಕೃತಿ ಎಂಬ ಮತ್ತೊಂದು ಸಮಾಜವನ್ನು ಗುರುತಿಸುತ್ತೇವೆ. ಬುಡಕಟ್ಟು ಸಮಾಜ ಸರ್ವವಿದಧಲ್ಲಿಯೂ ಭಿನ್ನವಾಗಿರುತ್ತದೆ. ಬುಡಕಟ್ಟುಗಳ ಇತಿಹಾಸವನ್ನು ನಾವು ಹುಡುಕ ಹೊರಟರೆ ಪ್ರಪಂಚದ ವಿವಿಧ ಪ್ರದೇಶಗಳಲ್ಲಿ ವಿವಿಧ ಮಾನವ ಜನಾಂಗಗಳಿಗೆ ಸೇರಿದ ಬುಡಕಟ್ಟುಗಳು ಕಂಡುಬರುತ್ತವೆ. ಬುಡಕಟ್ಟುಗಳೆಂದು ಕರೆಯಲ್ಪಡುವ ಆದಿವಾಸಿಗಳು ಪ್ರಪಂಚದಾದ್ಯಂತ ಹಂಚಿ ಹೋಗಿದ್ದಾರೆ. ಭಾರತದಲ್ಲಿ ಬುಡಕಟ್ಟುಗಳು ಸಾಮಾನ್ಯವಾಗಿ ಎಲ್ಲಾ ವಲಯಗಳಲ್ಲಿ ಕಂಡುಬರುತ್ತವೆ. ಮುಖ್ಯವಾಗಿ ಬೆಟ್ಟ, ಗುಡ್ಡ, ಕಾಡು ಮೇಡು, ಗಿರಿ ಶಿಖರ, ಕಣಿವೆ–ಕಾನನ ಹಾಗೂ ಕರಾವಳಿ ತಪ್ಪಲಿನ ಪಶ್ಚಿಮ ಘಟ್ಟಗಳಲ್ಲಿ ವಾಸಿಸುವ ಬುಡಕಟ್ಟು ಜನರನ್ನು ಕಾಣಬಹುದು.

ಜಾಗತೀಕರಣ ಹಿನ್ನೆಲೆಯಲ್ಲಿ ಇಂದು ತಳಸಮುದಾಯಗಳು ತಮ್ಮ ಪಾರಂಪರಿಕ ಕಸುಬುಗಳನ್ನು ಮುಂದುವರಿಸಲಾಗದೆ ಅದಕ್ಕೆ ಹೊಂದಿಕೊಳ್ಳಲಾಗದೇ ಶೋಚನೀಯ ಪರಿಸ್ಥಿತಿಯಲ್ಲಿ ಕಾಲ ದೂಡುವಂತಹ ಪರಿಸ್ಥಿತಿ ಎದುರಾಗಿರುವುದು ಕಂಡುಬರುತ್ತದೆ. ತಮ್ಮ ಮೂಲ ಕಸುಬಾದ ಪಶುಪಾಲನೆಯನ್ನು ಮುಂದುವರಿಸಲು ಹುಲ್ಲುಗಾವಲುಗಳು ಕಣ್ಮರೆಯಾಗುತ್ತಿದ್ದು, ತಮ್ಮ ಜೀವನಕ್ಕೆ ಸಾಕಾಗುವಷ್ಟು ಆದಾಯವೂ ಇಲ್ಲದೇ ತಮ್ಮ ಮೂಲವೃತ್ತಿಯನ್ನು ಮುಂದುವರಿಸಲಾಗದೆ

ಒದ್ದಾಡುತ್ತಿದ್ದಾರೆ. ಇಂದು ತಮಗೆ ಇದ್ದಂತಹ ಅಲ್ಪ ಸ್ವಲ್ಪ ಕೃಷಿ ಭೂಮಿ ಇದ್ದರೂ ಸರಿಯಾದ ಸಮಯಕ್ಕೆ ಮಳೆ ಬೆಳೆ ಇಲ್ಲದೆಯೇ ತಮ್ಮ ಜಮೀನುಗಳಿಂದ ಯಾವುದೇ ಜೀವನೋಪಾಯಕ್ಕೆ ಆಸರೆಯಾಗದೇ ಇರುವುದು ಕಂಡುಬಂದಿರುತ್ತದೆ.

'ಸಂಸ್ಕೃತಿ ಮತ್ತು ನಿಸರ್ಗದ ಮಾನವ ಸಂಬಂಧಗಳನ್ನು ಸಾವಯವ ರೀತಿಯಲ್ಲಿ ಧ್ಯಾನಿಸದೆ ರೂಪಿಸಲ್ಪಡುವ ಯಾವುದೇ ಯೋಜನೆಗಳು ತಳಸಮುದಾಯಗಳ ಬದುಕನ್ನು ಸುಧಾರಿಸಲಾರವು. ಜಾತಿ ಶ್ರೇಣಿ ವ್ಯವಸ್ಥೆಯ ಸದಾ ತನ್ನ ಅಸ್ತಿತ್ವಕ್ಕಾಗಿ ಇಡೀ ಮಾನವ ಸಂಪತ್ತಿನ ಶೋಷಣೆಯಲ್ಲೇ ಜಾಗವನ್ನು ಬಲಪಡಿಸುತ್ತದೆ. ಜಾತ್ಯತೀತವಾದ ಆರ್ಥಿಕ ಪರಿಸ್ಥಿತಿಯ ಕ್ರಮಗಳು ನಮ್ಮಲ್ಲಿ ಜಾರಿಯಲ್ಲಿಲ್ಲ. ಜಾತಿಗೂ, ಅಧಿಕಾರ ವ್ಯವಸ್ಥೆಗೂ, ಅದರ ರಾಜಕಾರಣಗಳನ್ನು ಇವನ್ನೆಲ್ಲ ನಿರ್ಧರಿಸುವ ಧರ್ಮಕ್ಕೂ ಮಾನವೀಯ ಸಂಬಂಧಗಳಿಲ್ಲ. ಅಂದರೆ ಸಂಸ್ಕೃತಿ ಹಾಗೂ ನಿಸರ್ಗದ ಮೂಲಕ ವಿಕಾಸಗೊಂಡ ತಳಸಮುದಾಯಗಳನ್ನು ಈ ಎಲ್ಲಾ ವಿರೂಪದ ಯಾಜಮಾನ್ಯವು ಹೊಸಕಾಲದಲ್ಲಿ ಹೊಸ ಆರ್ಥಿಕ ತಂತ್ರಗಳಲ್ಲಿ ವಂಚಿಸಬಲ್ಲದು. ಹಾಗೆ ನೋಡಿದರೆ ಧಾರ್ಮಿಕ ವ್ಯವಸ್ಥೆಯೇ ಆರ್ಥಿಕ ವ್ಯವಸ್ಥೆಯನ್ನು ಬಂಡವಾಳಶಾಹಿ ದರ್ಪದಲ್ಲಿ ಪ್ರತಿಷ್ಠಾಪಿಸಿಕೊಳ್ಳುವಂತಹದ್ದು, ನಮ್ಮ ಹಳೆಯ ಧರ್ಮಗಳಿಗೂ ಇವತ್ತಿನ ಆರ್ಥಿಕ ಸ್ಥಿತಿಗತಿಗಳಿಗೂ ನೇರ ಸಂಬಂಧವಿದೆ. ಇಂದಿನ ತಳಸಮುದಾಯಗಳ ಆರ್ಥಿಕ ಸ್ವಾತಂತ್ರ್ಯದ ಸುತ್ತ ಕೋಟೆಗಳನ್ನು, ಕ್ರೂರ ಬಂಧನಗಳನ್ನು ನಿರ್ಮಿಸಿದ್ದು ಹಳೆಯ ಇಂತಹ ವ್ಯವಸ್ಥೆಗಳೇ. ವ್ಯವಸ್ಥೆ ಹಳೆಯದಾದರೂ ಅದರ ಪರಿಣಾಮವು ಆಧುನಿಕ ಕಾಲದಲ್ಲಿ ಒಂದೇ ಬಗೆಯಾಗಿರುತ್ತದೆ. ಈ ಅರ್ಥದಲ್ಲಿ ಭಾರತದ ಜಾತಿಗಳ ಅಧಿಕಾರಕ್ಕೆ ದಣಿವೇ ಇಲ್ಲ. ಜಾತಿವ್ಯವಸ್ಥೆಯೇ ಬಂಡವಾಳಶಾಹಿ ದೋರಣೆಯದು. ತಳ ಜಾತಿಗಳನ್ನು ಮೂಲ ಬಂಡವಾಳವಾಗಿಸಿಕೊಂಡ ಮೇಲುಜಾತಿಗಳು ಖಾಸಗಿ ಅಧಿಪತಿಗಳಂತೆಯೇ ನಮ್ಮ ಸಮಾಜವನ್ನು, ಚರಿತ್ರೆಯನ್ನು ಆರ್ಥಿಕ, ಕಾರ್ಮಿಕ ಯಜಮಾನಿಕೆಗಳಲ್ಲಿ ಆಳಿವೆ. ಹೀಗಾಗಿಯೇ ಗತಕಾಲದ ಕ್ರೂರ ಪರಿಣಾಮಗಳು ಹೊಸಕಾಲದ ಬಿಡುಗಡೆಯ ಕ್ರಮಗಳ ಮೇಲೆ ತಡೆಯೊಡ್ಡುವುದು.

ಇಂತಹ ಸ್ಥಿತಿಯಲ್ಲಿ ತಳಸಮುದಾಯಗಳಿಗೆ ಪ್ರತ್ಯೇಕವಾದ ಮತ್ತು ಅಲ್ಪಾವಧಿಯ ಬೃಹತ್ ಯೋಜನೆಗಳನ್ನು ರೂಪಿಸಬೇಕು. ಪ್ರತ್ಯೇಕ ಆರ್ಥಿಕ ಪದ್ಧತಿಯಲ್ಲಿ ತಳಸಮುದಾಯಗಳ ಉತ್ಪಾದನಾ ಸಾಮರ್ಥ್ಯದ ವಿಸ್ತರಣೆಗೆ ಬೇಕಾದ ಸ್ಥಳೀಯ ಮತ್ತು ಜಾಗತಿಕ ಸಾಧ್ಯತೆಗಳನ್ನೆಲ್ಲ ಸಾವಯವವಾಗಿಯೇ ಏರ್ಪಡಿಸಬೇಕು. ಉತ್ಪಾದಕ ಸಮುದಾಯಗಳಾದ ಎಲ್ಲಾ ಕರಕುಶಲ ಕರ್ಮಿಗಳು ಜಗತ್ತಿನ ಉದ್ದಕ್ಕೂ ಇದ್ದು, ಸಾರ್ವತ್ರಿಕವಾದ ಹಾಗೂ ಸಾಮಾನ್ಯವಾದ ಅನೇಕ ಗುಣಗಳನ್ನು ಸಾಂಸ್ಕೃತಿಕವಾಗಿಯೂ, ಆರ್ಥಿಕವಾಗಿಯೂ ಪಡೆದುಕೊಂಡಿದೆ. ಇಂತಹ ಸಮಾಜಗಳ ಅಂತರ್‌ಸಂಬಂಧಗಳನ್ನು ವಿಸ್ತರಿಸುತ್ತಲೇ ಆಯಾ ಸಮುದಾಯಗಳ ಅನನ್ಯತೆಯನ್ನು ಅಸ್ತಿತ್ವದ ಬಹುಸಾಧ್ಯತೆಗಳನ್ನು ಬಲಪಡಿಸಬೇಕು. ಜಗತ್ತಿನ ಇಷ್ಟೊಂದು ಸಾಮಿಪ್ಯ ಮತ್ತು ಅನಿವಾರ್ಯತೆಯಲ್ಲಿ ತಳಸಮುದಾಯಗಳನ್ನು ದೂರ ಇಡುವ ಅಗತ್ಯವಿಲ್ಲ. ಸಮೀಪವಾಗುತ್ತಲೇ ದೂರ ಸರಿವ ಗುಣವು ಎಲ್ಲಾ ಸಮುದಾಯಗಳ ಒಳಗೆ ಇದ್ದೇ

ಇರುತ್ತದೆ. ತಳಸಮುದಾಯಗಳು ಎಂದಿಗೂ ಮತ್ತೊಂದು ಹೊಸ ಜಗತ್ತಿಗೆ ವರ್ಗದ ಒಳಗೆ ಕಳೆದು ಹೋಗುವಂತಹದ್ದಲ್ಲ.

ಸಮುದಾಯಗಳ ಅಭಿವೃದ್ಧಿಯನ್ನು ಪಶ್ಚಿಮದ ನಕಲು ಯೋಜನೆಗಳಿಂದ ಸಾಧಿಸಲಾಗದು. ಸಂಸ್ಕೃತಿನಿಷ್ಠವಾದ ಉತ್ಪಾದನೆಯು ಸಾಮಾಜಿಕ ಪರಿಸರವನ್ನು ಬಲಪಡಿಸುತ್ತದೆ. ನಿಜವಾಗಿಯೂ ಆಗಬೇಕಾದ ಅಭಿವೃದ್ಧಿ ಯಾವುದೆಂದರೆ ಸಾಮಾಜಿಕ ವ್ಯವಸ್ಥೆಯೇ ಸಮಾಜದ ಕುರುಡು ಜೀವನ ಮೌಲ್ಯಗಳು ಮಾನವ ಸಂಪತ್ತನ್ನು ಕುಬ್ಜಗೊಳಿಸುತ್ತವೆ. ಇಲ್ಲಿ ಆರ್ಥಿಕ ಅಪರಾಧಗಳಿಗೆ ಮಿತಿಯೇ ಇಲ್ಲ. ಈ ಅಪರಾಧಗಳನ್ನು ಮರೆತು ನಿರ್ಧರಿಸುವ ಅಭಿವೃದ್ಧಿ ಕಾರ್ಯಕ್ರಮಗಳು ಕೇವಲ ಆಲಂಕಾರಿಕವಾಗಿರುತ್ತವೆ. ಜಾತಿ ಮತ್ತು ವರ್ಗವಿಲ್ಲದ ಸಮಾಜವೇ ಸಹಜ ಅಭಿವೃದ್ಧಿಯ ದಾರಿಗಳನ್ನು ಸಲೀಸಾಗಿ ಕಂಡುಕೊಳ್ಳಬಲ್ಲದು. ಆಧುನಿಕ ಜಗತ್ತಿನ ಬೃಹತ್ ಯೋಜನೆಗಳು ತಳಸಮುದಾಯಗಳಿಗೆ ಅಗತ್ಯವಿಲ್ಲ. ಬೃಹತ್ ತಾಂತ್ರೀಕೃತ ಉತ್ಪಾದನಾ ವ್ಯವಸ್ಥೆಗಳೆಲ್ಲ ದೇಶೀಯ ಉತ್ಪಾದನಾ ಕ್ರಮಗಳನ್ನು ನುಂಗಿಬಿಡುತ್ತವೆ. ವೃತ್ತಿಗಳನ್ನು ನಾಶಪಡಿಸುವ ತಂತ್ರಜ್ಞಾನದ ಅಭಿವೃದ್ಧಿ ಮೀಮಾಂಸೆಗೂ ಮಾನವ ಸಂಬಂಧಗಳನ್ನು ಸಂಸ್ಕೃತಿ ಹಾಗೂ ನಿಸರ್ಗದ ಜೊತೆ ಬೆಸೆಯುವ ತಳಸಮುದಾಯಗಳ ಅಭಿವೃದ್ಧಿ ಮೀಮಾಂಸೆಗೂ ಬಹಳ ದೂರ ಅಂತರವಿದೆ. ಈ ಅಂತರವಳಿಸುವ ದಾರಿಯಲ್ಲಿ ತಳಸಮುದಾಯಗಳನ್ನು ಹೊಸಕಾಲದ ಕಾಣಿಕೆಗಳ ಜೊತೆಗೆ ಅನುಸಂಧಾನಗೊಳಿಸಬೇಕು. ತಳಸಮುದಾಯವೇ ಆರ್ಥಿಕ ವ್ಯವಸ್ಥೆಯ ಬುನಾದಿ. ತಳಭದ್ರವಿಲ್ಲದೆ ತುದಿಯನ್ನು ಮಾತ್ರವೇ ರಕ್ಷಿಸುವ ಧೋರಣೆ ಅಪಾಯಕಾರಿಯಾದುದು. ದುಡಿಯುವ ಬೃಹತ್ ಸಮೂಹವನ್ನೇ ಅಂಚಿಗೆ ದೂಡಿ ಅನುಭೋಗಿ ವರ್ಗವನ್ನೇ ಪ್ರಧಾನ ಮಾಡಿದ್ದರಿಂದ ಮಾನವೀಯ ಮೌಲ್ಯಗಳ ಆರ್ಥಿಕ ವ್ಯವಸ್ಥೆಯು ಇಲ್ಲವಾಗಿದೆ. ಮಾರ್ಕ್ಸ್‌ವಾದವು ತಳಸಮುದಾಯಗಳ ಅಭಿವೃದ್ಧಿಯ ಮೀಮಾಂಸೆಯನ್ನು ವರ್ಗದಿಂದ ವಿಶ್ಲೇಷಿಸುತ್ತದೆ. ಭಾರತದ ವರ್ಣವ್ಯವಸ್ಥೆಯ ವಿಕಾರದ ಮೈ ತುಂಬಾ ವರ್ಗದ ವೇಷವನ್ನು ಧರಿಸಿ ಈ ಕಾಲದ ಶೋಷಣೆಯ ಸಂಕೀರ್ಣ ಸ್ವರೂಪವನ್ನು ಅಳವಡಿಸಿಕೊಂಡು ಆಳುವ ಇಂದಿನ ಆರ್ಥಿಕ ವ್ಯವಸ್ಥೆಯು ಏಕಕಾಲಕ್ಕೆ ಸನಾತನ ಮತ್ತು ಸಮಕಾಲೀನ ಎರಡೂ ಮಾನದಂಡಗಳನ್ನು ದುಡಿಯುವ ಸಮೂಹಗಳ ಮೇಲೆ ಹೇರುತ್ತಿರುತ್ತದೆ. ಇಂದಿನ ಪರಿಸ್ಥಿತಿಯಲ್ಲಿ ತಳಸಮುದಾಯಗಳ ಅಭಿವೃದ್ಧಿ ಎಂದರೆ ಮತ್ತೆ ಜಾತಿಗೆ ಮರುಳುವುದೇ ಎಂಬ ಗೊಂದಲ ಎದುರಾಗುತ್ತದೆ. ನಿಜದ ನೆಲೆ ಯಾವುದೆಂದರೆ ವೃತ್ತಿಯ ಉತ್ಪಾದನಾ ಸಾಮರ್ಥ್ಯವೇ ವಿನಾಃ ಅದಕ್ಕೆ ಅಂಟಿರುವ ಜಾತಿಯಲ್ಲ. ಉತ್ಪಾದನೆಯ ತಂತ್ರಜ್ಞಾನವನ್ನು ನಿಸರ್ಗ ಹಾಗೂ ಸಂಸ್ಕೃತಿನಿಷ್ಠಗೊಳಿಸುತ್ತಲೇ ಸಮಕಾಲೀನತೆಯ ಜೊತೆಗೆ ವಿಸ್ತರಿಸಬೇಕು. ಈ ಬಗೆಯ ಕ್ರಮಗಳಲ್ಲಿ ಬುಡಕಟ್ಟು ಸಮುದಾಯಗಳ ಅಭಿವೃದ್ಧಿ ಮೀಮಾಂಸೆಯನ್ನು ಜಾರಿಗೊಳಿಸಬೇಕಾಗಿದೆ. ಅಲೆಮಾರಿ, ಆದಿವಾಸಿ ಮತ್ತು ಬುಡಕಟ್ಟು ಇತ್ಯಾದಿ ಸಮೀಪ ಚಹರೆಯ ಎಲ್ಲಾ ತಳಸಮುದಾಯಗಳನ್ನು ಅಖಂಡವಾಗಿ ದಲಿತ ವ್ಯಾಪ್ತಿಯಲ್ಲಿ ಅನುಸಂಧಾನಗೊಳಿಸುತ್ತ ಅವರಿಗೆ ಪ್ರತ್ಯೇಕವಾದ ಅಭಿವೃದ್ಧಿ ಯೋಜನೆಗಳನ್ನು ಅಳವಡಿಸಿಕೊಳ್ಳಬೇಕಾದ ಚಾರಿತ್ರಿಕ ಒತ್ತಡ ಈ ಕಾಲದ್ದಾಗಿದೆ.

ನಮ್ಮ ದೇಶದ ಎಲ್ಲಾ ಬಗೆಯ ಕರಕುಶಲ ಸಮುದಾಯಗಳನ್ನು ಜಾಗತಿಕ ಮಟ್ಟದ ಉತ್ಪಾದನಾ ರೀತಿಗೆ ಒಳಪಡಿಸಬೇಕು. ನಮ್ಮ ಶ್ರಮ ಕೂಡ ವಿಶ್ವದ ಯಾವುದೇ ಕೌಶಲ್ಯದ ಎದುರು ಸಮನಾಗಿ ನಿಲ್ಲಬಲ್ಲದು ಹಾಗೂ ಹೊರಗಿನ ಯಾವುದೇ ಸಾಮರ್ಥ್ಯದ ಜೊತೆಗೆ ಪುನರ್‌ಸೃಷ್ಟಿಗೆ ಒಳಪಟ್ಟು ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಬಲ್ಲದು ಎಂಬುದನ್ನು ತೋರಿಸಬೇಕು. ನಮ್ಮ ಕರಕುಶಲ ಸಮುದಾಯಗಳನ್ನು ಈ ರೀತಿಯಲ್ಲಿ ಜಾಗತೀಕರಣಗೊಳಿಸುತ್ತ ತಮ್ಮ ಅಸ್ತಿತ್ವವನ್ನು ಜಾಗತಿಕ ಮಟ್ಟಕ್ಕೆ ವಿಸ್ತರಿಸಿಕೊಳ್ಳುವಂತೆ ವ್ಯವಸ್ಥೆಯನ್ನು ರೂಪಿಸಬೇಕು. ಆಗ ಮಾತ್ರ ಜಾಗತೀಕರಣದ ಕೆಲವು ನಿರ್ದಿಷ್ಟ ಅಪಾಯಗಳಿಂದ ಸಂಸ್ಕೃತಿಗಳು ಪಾರಾಗಲು ಸಾಧ್ಯ.'[೧]

**೨.೨. ಜಾಗತೀಕರಣದ ಅರ್ಥ:** ಜಾಗತೀಕರಣವು ಒಂದು ಹೊಚ್ಚ ಹೊಸ ಆರ್ಥಿಕ ಪ್ರಕ್ರಿಯೆ. ಇದೊಂದು ಬಾಹ್ಯ ರೂಪದ ಆರ್ಥಿಕ ನೀತಿಯಾಗಿದ್ದು ಇದರ ಚಟುವಟಿಕೆಗಳು ಸ್ಥಳೀಯ ಮತ್ತು ವಿಶ್ವ ಮಾರುಕಟ್ಟೆಗಳಿಂದ ನಿಯಂತ್ರಿಸಲ್ಪಟ್ಟಿವೆ. ಇದು ಸ್ಥಳೀಯ ಮಾರುಕಟ್ಟೆ ಮತ್ತು ಅಂತಾರಾಷ್ಟ್ರೀಯ ಮಾರುಕಟ್ಟೆಯ ಒಂದು ಕೊಂಡಿಯಾಗಿದೆ. ಇಪ್ಪತ್ತನೇ ಶತಮಾನದ ಅಂತ್ಯದಲ್ಲಿ ವಿಶ್ವದಾದ್ಯಂತ ತ್ವರಿತ ಆರ್ಥಿಕ ಸುಧಾರಣೆಗಳು ಕಂಡುಬಂದವು. ಇವುಗಳಲ್ಲಿ ಎಲ್.ಪಿ.ಜಿ. ಮಾದರಿ ಅಂದರೆ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ಪ್ರಮುಖವಾದವು. ಈ ಆರ್ಥಿಕ ವಿನೂತನ ಪ್ರಕ್ರಿಯೆಗಳಿಗೆ ವಿಶ್ವಬ್ಯಾಂಕು ಮತ್ತು ಅಂತಾರಾಷ್ಟ್ರೀಯ ಹಣಕಾಸು(ಐ.ಎಂ.ಎಫ್.) ಪ್ರೇರಕ ಅಭಿವೃದ್ಧಿಶೀಲ ರಾಷ್ಟ್ರಗಳು ಮತ್ತು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳೆಲ್ಲವೂ ಈ ಪ್ರಕ್ರಿಯೆಗೊಳಪಟ್ಟಿವೆ. ಭಾರತವು ಈ ಆರ್ಥಿಕ ಸುಧಾರಣೆಗಳನ್ನು ಅಳವಡಿಸಿಕೊಂಡು ವಿಶ್ವವ್ಯಾಪಾರ ಸಂಘಟನೆಯ ಸದಸ್ಯ ರಾಷ್ಟ್ರವಾಯಿತು. ಪಿ. ವಿ. ನರಸಿಂಹರಾವ್ ಅವರು ಪ್ರಧಾನ ಮಂತ್ರಿಯಾಗಿದ್ದಾಗ ಅಂದಿನ ಭಾರತದ ಅರ್ಥ ಸಚಿವರಾಗಿದ್ದ ಡಾ. ಮನಮೋಹನ್‌ಸಿಂಗ್ ಇವರ ನೇತೃತ್ವದಲ್ಲಿ ಭಾರತವು ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ನೀತಿಗಳನ್ನು ಒಪ್ಪಿ ಅಳವಡಿಸಿಕೊಂಡಿತು.

**೨.೩ ಜಾಗತೀಕರಣದ ವ್ಯಾಖ್ಯೆಗಳು**

**Anand Teltumbde:** " It is a euphemism for all the imperialist strategy of capitalism in a terminal crisis"[೨]

**ಮೊಗಳ್ಳಿ ಗಣೇಶ್:** "ಮೂರನೇ ಜಗತ್ತಿನ ದೇಶಗಳಿಗೆ ಜಾಗತೀಕರಣವನ್ನು ಸುಲಭವಾಗಿ ನುಂಗುವಂತೆಯೂ ಇಲ್ಲ ಅಥವಾ ಹೊರಹಾಕುವುದಕ್ಕೂ ಆಗುವುದಿಲ್ಲ"[೩]

**ಪ್ರಭಾಕರ ಎ.ಎಸ್.:** "ಬುಡಕಟ್ಟು ಸಮುದಾಯಗಳಿಗೆ ದೇಶೀಯ ಭೂಮಾಲೀಕರಿಗಿಂತ, ಬಂಡವಾಳಶಾಹಿಗಳಿಗಿಂತ ಜಾಗತೀಕರಣ ತುಂಬಾ ಅಪಾಯಕಾರಿಯಾದದ್ದು ಎಂಬ ತಿಳುವಳಿಕೆ ಇದೆ."[೪]

**ಎಸ್.ಕೆ. ಮಿಶ್ರಾ ಮತ್ತು ವಿ.ಕೆ. ಪೂರಿ** ಇವರ ಪ್ರಕಾರ "ಸಾಧಾರಣ ಪದಗಳಲ್ಲಿ ಹೇಳುವುದಾದರೆ ಜಾಗತೀಕರಣವು ದೇಶಿಯ ಆರ್ಥಿಕತೆ ಮತ್ತು ವಿಶ್ವ ಆರ್ಥಿಕತೆಯನ್ನು ಸಮಗ್ರಗೊಳಿಸುವ ಅಥವಾ ಐಕ್ಯಗೊಳಿಸುವ ಪ್ರಕ್ರಿಯೆ ಆಗಿದೆ"[೫] ಎಂದಿದ್ದಾರೆ.

ಕ್ಯೂಲಿನ್ಸ್ ಸಮಾಜ ಶಾಸ್ತ್ರೀಯ ನಿಘಂಟಿನ ಪ್ರಕಾರ "ವಿಶ್ವವ್ಯಾಪಿ ಖಾಸಗಿ ಬಂಡವಾಳ ಘಟಕಗಳ ಮೂಲಕ ಆರ್ಥಿಕ ಚಟುವಟಿಕೆಗಳನ್ನು ಸಮಗ್ರಗೊಳಿಸುವುದೇ ಜಾಗತೀಕರಣ."[೬]

ಕನ್ನಡ ವಿಕಿಪೀಡಿಯ ವ್ಯಾಪಾರ, ವಿದೇಶಿ ನೇರ ಬಂಡವಾಳ ಹರಿವು, ವಲಸೆ, ತಾಂತ್ರಿಕತೆಯ ವಿಸ್ತರಣೆಯ ಮೂಲಕ ರಾಷ್ಟ್ರೀಯ ಆರ್ಥಿಕತೆಯ ಜೋತೆ ಅಂತರರಾಷ್ಟ್ರೀಯ ಆರ್ಥಿಕತೆಯ ಸಮನ್ವಯತೆ"[೭]

ಕನ್ನಡ ವಿಕಿಪೀಡಿಯ "ಜಾಗತೀಕರಣವನ್ನು ಸಾಮಾನ್ಯವಾಗಿ ಆರ್ಥಿಕ, ತಾಂತ್ರಿಕ, ರಾಜಕೀಯ ಮತ್ತು ಜೈವಿಕ ವಿಚಾರಗಳ ಸಂಯೋಗವೆಂದು ಪರಿಗಣಿಸಲಾಗುತ್ತದೆ."[೮]

A World Bank Publication "According to World Bank Publication Glibalisation is the growing integration of economics and societies around the World."[೯]

ಜಾಗತೀಕರಣವು ೧೯ನೇ ಶತಮಾನದ ಒಂದು ನವೀನ ಆರ್ಥಿಕ ಪ್ರಕ್ರಿಯೆಯಾಗಿದ್ದು, ಪ್ರಪಂಚದಾದ್ಯಂತ ದೇಶೀಯ ಆರ್ಥಿಕತೆಯೊಂದಿಗೆ ವಿಶ್ವ ಆರ್ಥಿಕತೆಯನ್ನು ಒಗ್ಗೂಡಿಸುವ ಒಂದು ಕಾರ್ಯವಾಗಿದೆ. ಅಭಿವೃದ್ಧಿಯ ದೃಷ್ಟಿಕೋನದಿಂದ ಈ ಅಂಶಗಳನ್ನು ಭಾರತವೂ ಸಹ ಅಳವಡಿಕೊಂಡಿದ್ದು, ಇದರಿಂದ ಧನಾತ್ಮಕ ಅಂಶಗಳ ಜೊತೆಯಲ್ಲಿ ಋಣಾತ್ಮಕ ಅಂಶಗಳು ಸಹ ತಮ್ಮ ಪ್ರಭಾವವನ್ನು ಬೀರುತ್ತಿವೆ. ಅಂದರೆ ಕೇಂದ್ರೀಕೃತ ಆರ್ಥಿಕತೆಯನ್ನು ನಿರ್ಮಿಸುವುದರ ಮೂಲಕ ಉತ್ಪಾದನಾ ಕ್ಷೇತ್ರದಲ್ಲಿ ಸ್ಪರ್ಧೆ ಏರ್ಪಟ್ಟು ಆಧುನಿಕ ತಂತ್ರಜ್ಞಾನದಿಂದ ಉತ್ಪಾದನಾ ದಕ್ಷತೆ ಹೆಚ್ಚುವುದರೊಂದಿಗೆ ಬಂಡವಾಳ ಸಂಚಯನ ಏರ್ಪಟ್ಟು ರಾಷ್ಟ್ರೀಯ ಆದಾಯದ ಹೆಚ್ಚಳದಿಂದ ತಲವರಮಾನ ಹೆಚ್ಚಾಗಿ ಜೀವನಮಟ್ಟ ಸುಧಾರಿಸುತ್ತದೆ. ಇದರಿಂದ ಜನಸಂಖ್ಯೆಗನುಗುಣವಾಗಿ ಉತ್ಪಾದನೆಯ ಮಟ್ಟವನ್ನು ಹೆಚ್ಚಳ ಮಾಡಲು ಸಹಕಾರಿಯಾಗುತ್ತದೆ. ಜಾಗತೀಕರಣದಿಂದಾಗಿ ವಿದೇಶಿ ಕಂಪನಿಗಳ ಉತ್ಪನ್ನಗಳು ಮಾರುಕಟ್ಟೆಯನ್ನು ಪ್ರವೇಶಿಸುವುದರಿಂದ ಆಯ್ಕೆಯ ಸಮಸ್ಯೆಗಳು ಉಂಟಾಗುವ ಸಂಭವ ಕಡಿಮೆ. ಜಾಗತೀಕರಣದ ಪ್ರಭಾವದಿಂದಾಗಿ ತಮ್ಮ ಸಾಂಪ್ರದಾಯಿಕ ಜೀವನದಿಂದ ಹೊರಬಂದು ಆಧುನಿಕ ಜೀವನದ ಕಡೆಗೆ ತಮ್ಮ ನಿಲುವುವನ್ನು ಬದಲಾಯಿಸುತ್ತಿದ್ದಾರೆ. ಇದರಿಂದ ಮೂಲಭೂತ ಸೌಕರ್ಯಗಳು ಸಹ ಹೆಚ್ಚುತ್ತಿರುವುದನ್ನು ಕಾಣಬಹುದು. ಜಾಗತೀಕರಣದಿಂದ ಅನುಕೂಲಗಳ ಜೊತೆ ಅನನುಕೂಲಗಳನ್ನು ಸಹ ಕಾಣುತ್ತೇವೆ. ಇದರಿಂದ ಸ್ಥಳೀಯ ಗುಡಿ ಕೈಗಾರಿಕೆಗಳು ಅವನತಿ ಪಥದತ್ತ ಹೆಜ್ಜೆ ಹಾಕುತ್ತಿವೆ. ಸ್ಥಳೀಯವಾಗಿ ದುಡಿಯುವ ವರ್ಗದವರನ್ನು ಅವಸಾನದ

ಹಂಚಿನೆಡೆಗೆ ತಳ್ಳುತ್ತಿದೆ. ಸ್ಥಳೀಯ ಪಾರಂಪರಿಕ ಜ್ಞಾನ ವಿದೇಶಿಗಳ ಪೇಟೆಂಟ್‌ನೊಂದಿಗೆ ಆಧುನಿಕತೆಯ ಹೊಸ ರೂಪದಿಂದ ಮಾರುಕಟ್ಟೆ ಪ್ರವೇಶ ಪ್ರವೇಶ ಮಾಡುತ್ತಿರುವುದನ್ನು ನೋಡುತ್ತಿದ್ದೇವೆ. 'ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಒಂದೆಡೆ ಇಂತಹ ದೇಶಗಳು, ವಸಾಹತುಶಾಹಿಯು ಜಾಗತೀಕರಣದ ಹೆಸರಲ್ಲಿ ನಡೆಸಲಿರುವ ಮರು ಆಕ್ರಮಣದ ಕುರಿತು ಆತಂಕಗೊಂಡಿದ್ದರೆ, ಜಾಗತೀಕರಣದ ಫಲವಾಗಿ ಹುಟ್ಟಿರುವ ಉದಾರೀಕರಣ ಮತ್ತು ಖಾಸಗೀಕರಣಗಳಿಂದ ಜಾಗತಿಕ ಮಟ್ಟದ ತಂತ್ರಜ್ಞಾನದ ಪ್ರವಾಹದಲ್ಲಿ ಒಂದಾಗಿ ಅಭಿವೃದ್ಧಿ ಸಾಧಿಸುವ ತವಕವೂ ಹೆಚ್ಚುತ್ತಿದೆ.[೧೦] ಒಟ್ಟಾರೆಯಾಗಿ ಜಾಗತೀಕರಣದ ಪ್ರವೇಶದಿಂದ ಕೈಗಾರಿಕೆಗಳ ಅನುಷ್ಠಾನ ಹೆಚ್ಚಾಗಿ ಹವಾಮಾನ ವೈಪರೀತ್ಯಗಳು ಹಾಗೂ ಹಿಂದುಳಿದ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ಶೋಷಣೆ ಹೆಚ್ಚುತ್ತಿದ್ದು, ಮುಂದುವರಿದ ದೇಶಗಳ ಬಿಗಿ ಹಿಡಿತದಲ್ಲಿ ನರಳುತ್ತಿವೆ. ಇಂತಹ ವ್ಯವಸ್ಥೆಯಿಂದಾಗಿ ಇಂದು ನಾವು ಬುಡಕಟ್ಟು ಸಮುದಾಯಗಳ ಬೆನ್ನೆಲುಬಾಗಿದ್ದಂತಹ ಕುಲಕಸುಬುಗಳು ಅವನತಿಯತ್ತ ಸಾಗುತ್ತಿರುವುದನ್ನು ನೋಡುತ್ತಿದ್ದೇವೆ. ಕಾರಣ ಬುಡಕಟ್ಟು ಸಮುದಾಯಗಳು ಆಧುನಿಕತೆಯೊಂದಿಗೆ ಸ್ಪರ್ಧಿಸಲಾಗದೇ ಒಂದೆಡೆ ಮುಂದುವರಿಸಲಾಗದೇ ತಮ್ಮ ಜೀವನ ನಿರ್ವಹಣೆಗೂ ಕಷ್ಟ ಅನುಭವಿಸುವ ಪರಿಸ್ಥಿತಿಯನ್ನು ಇಂದು ಕಾಣುತ್ತಿದ್ದೇವೆ.

'ಮಾನವ ಜಗತ್ತಿನ ಇತಿಹಾಸದ ಗತಿಯನ್ನು ಬದಲಿಸುವಂತಹ ಮಹತ್ವದ ಆರ್ಥಿಕ, ರಾಜಕೀಯ, ವೈಜ್ಞಾನಿಕ ಹಾಗೂ ತಾಂತ್ರಿಕ ಪರಿವರ್ತನೆಗಳಾದವು. ಆಗ ವಿದ್ವಾಂಸರು, ಮಾಧ್ಯಮಗಳು, ರಾಜಕೀಯ ಧುರೀಣರು ಎಂಬ ಭೇದವಿಲ್ಲದೆ ಹೆಚ್ಚಿನ ಶಿಕ್ಷಿತ ಜನರೆಲ್ಲರೂ ಪ್ರಸ್ತಾಪಿಸುತ್ತಿದ್ದ ಪರಿಕಲ್ಪನೆಗಳೆಂದರೆ 'ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣ. ಎರಡನೇ ಮಹಾಯುದ್ಧದ ನಂತರದ ಅಂತಾರಾಷ್ಟ್ರೀಯ ಘಟನಾವಳಿಗಳ ಪರಿಣಾಮವಾಗಿ ವಿವಿಧ ದೇಶಗಳ ನಡುವಿನ ಬಹುಪಕ್ಷೀಯ ಮಾತುಕತೆಯ ಫಲಶ್ರುತಿಯಾಗಿ ಗ್ಯಾಟ್ ಒಪ್ಪಂದ(General Agreement on Trade and Tariffs) ಏರ್ಪಟ್ಟಿತು. ಈ ಒಪ್ಪಂದ ಸಂಬಂಧವಾಗಿ ನಡೆದ ಹಲವು ಸುತ್ತಿನ ಮಾತುಕತೆಗಳು ಹಾಗೂ ಉರುಗ್ವೆ ಸುತ್ತಿನ ಮಾತುಕತೆ (೧೯೮೬) ಎಂಬ ಖ್ಯಾತಿಯ ೮ನೇ ಹಾಗೂ ಅಂತಿಮ ಸುತ್ತಿನ ಮಾತುಕತೆಯ ಫಲವಾಗಿ ವಿಶ್ವ ವ್ಯಾಪಾರ ಸಂಘಟನೆ(WTO) ೧೯೯೫ರಲ್ಲಿ ಹುಟ್ಟಿಕೊಂಡಿತು. ಈ ಸಂಘಟನೆಯ ಸ್ಥಾಪನೆಗೆ ಭಾರತವನ್ನೊಳಗೊಂಡತೆ ೧೦೪ ದೇಶಗಳು ಸಹಿ ಹಾಕುತ್ತಿದ್ದಂತೆ ಹಾಗೂ ಅದು ಅಂತಾರಾಷ್ಟ್ರೀಯ ವ್ಯಾಪಾರ ವಹಿವಾಟಿಗೆ ಸಂಬಂಧಿಸಿದಂತೆ ಬಹುಪಕ್ಷೀಯ ಸ್ವರೂಪದ ಹೊಸ ಒಪ್ಪಂದಗಳನ್ನು ಹುಟ್ಟು ಹಾಕುತ್ತಿದ್ದಂತೆ ಜಗತ್ತಿನ ಆರ್ಥಿಕ ವಲಯದಲ್ಲೊಂದು ಹೊಸ ಅಲೆ ಉತ್ಪತ್ತಿಯಾಯಿತು. ಈ ಅಲೆಯ ಪರಿಣಾಮವಾಗಿಯೇ ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣ ಪ್ರಕ್ರಿಯೆಗಳು ಚಾಲನೆಗೆ ಬಂದವು. ಭಾರತವೂ ಸಹ ಈ ಪ್ರಕ್ರಿಯೆಗಳ ಸುಳಿಗೆ ಸಿಲುಕಿತು'.[೧೧] ಜಾಗತೀಕರಣವು ಭಾರತೀಯ ಸಮಾಜದಲ್ಲಿ ಮದ್ಯಮವರ್ಗಗಳು ಮತ್ತು ಶ್ರಮಿಕ ವರ್ಗಗಳ ನಡುವೆ ಸಮಾಜದ ದುರ್ಬಲ ಮತ್ತು ಮೂಲೆಗುಂಪಾದ ವರ್ಗಗಳು, ಸಣ್ಣ ಮತ್ತು ಅತಿ ಸಣ್ಣ ಕೃಷಿಕರು ಮತ್ತು ಕೃಷಿ ಕಾರ್ಮಿಕರು ಇಂತಹ ಸಮುದಾಯಗಳಿಗೆ ಜಾಗತೀಕರಣದಿಂದಾಗಿ ವಿಶೇಷ ಅನುಕೂಲತೆಗಳೇನು ಸಹ ಸಿಗದಾಗಿರುತ್ತದೆ. ಜಾಗತೀಕರಣದಿಂದ ಕೃಷಿಯು ಬಂಡವಾಳ

ಪ್ರಧಾನವಾಗುವ ಸಾಧ್ಯತೆಗಳೇ ಹೆಚ್ಚು. ಕೃಷಿ ಕ್ಷೇತ್ರಕ್ಕೆ ಕಾರ್ಪೋರೇಟ್ ಪ್ರಪಂಚದ ಪ್ರವೇಶವಾಗುವ ಸೂಚನೆಗಳಿದ್ದು, ಇಲ್ಲಿ ಜಾಗತಿಕ ಕೃಷಿ ಉದ್ದಿಮೆ ಮತ್ತು ಜೈವಿಕ ತಂತ್ರಜ್ಞಾನ ಕಾರ್ಪೋರೇಟ್‌ಗಳ ಬಲವಾದ ಹಿಡಿತ ಗೋಚರಿಸುತ್ತದೆ. ಬಂಡವಾಳ ಪ್ರಧಾನವಾದ ಹಾಗೂ ನಿರ್ಯಾತ ಉದ್ದೇಶಿತ ಕೃಷಿಯಿಂದಾಗಿ ಬಡ ರೈತಾಪಿ ವರ್ಗವು ತತ್ತರಿಸಿ ಹೋಗಬಹುದಾಗಿದ್ದು ಇದೇ ಕಾರಣಕ್ಕಾಗಿ ಸಣ್ಣ ಮಟ್ಟದ ಕೃಷಿಕರು ತೊಂದರೆಗೀಡಾಗಿದ್ದಾರೆ. ಜಗತ್ತಿನ ಬಹುತೇಕ ರಾಷ್ಟ್ರಗಳು ಈ ಜಾಗತೀಕರಣದ ಸುಳಿಗೆ ಸಿಲುಕಿದ್ದು, ಮಿಕ್ಕುಳಿದ ದೇಶಗಳು ಅದರ ಪ್ರಭಾವೀ ವಲಯಕ್ಕೆ ಒಳಗಾಗುತ್ತಿರುವುದರಿಂದ ಅದರ ಆರ್ಥಿಕ ಪ್ರಾಮುಖ್ಯತೆಯನ್ನು ನಾವು ನೋಡಬಹುದು. ಅರ್ಥಶಾಸ್ತ್ರಜ್ಞರು ಈ ಕುರಿತು ಈಗಾಗಲೇ ಬಹು ವ್ಯಾಪಕ ಅಧ್ಯಯನವನ್ನು ಕೈಗೊಂಡಿದ್ದು, ಅದರ ಸಂಕೀರ್ಣತೆಯ ಬಗ್ಗೆ ಹಲವಾರು ಅಭಿಪ್ರಾಯಗಳನ್ನು, ಕೆಲವೊಮ್ಮೆ ಪರಸ್ಪರ ವೈರುದ್ಯಾತ್ಮಕವಾದುವುಗಳನ್ನು ಕೂಡ ವ್ಯಕ್ತಪಡಿಸಿದ್ದಾರೆ. ಜಾಗತೀಕರಣ ಪ್ರಕ್ರಿಯೆ ಎಲ್ಲಕ್ಕಿಂತ ಮುಖ್ಯವಾಗಿ ಮತ್ತು ಬಹು ವ್ಯಾಪಕವಾಗಿ ಆರ್ಥಿಕ ಕ್ಷೇತ್ರದಲ್ಲಿ ಲಗ್ಗೆ ಇರಿಸಿದ್ದರೂ ಅದು ಅಷ್ಟಕ್ಕೇ ಸೀಮಿತವಾಗಿರದೆ ಅದರ ನಿರ್ಣಾಯಕವೆನ್ನಬಹುದಾದ ಪ್ರಭಾವ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಕ್ಷೇತ್ರಗಳ ಮೇಲೂ ಆಗಿದೆ.

ಒಟ್ಟಾರೆಯಾಗಿ ಜಾಗತೀಕರಣದ ಹೆಸರಿನಲ್ಲಿ ಅಭಿವೃದ್ಧಿಯನ್ನು ನೆಪವಾಗಿಟ್ಟುಕೊಂಡು ಲಕ್ಷಗಟ್ಟಲೆ ಎಕರೆ ಕೃಷಿ ಜಮೀನನ್ನು ಕೈಗಾರಿಕೆ, ವಿಮಾನ ನಿಲ್ದಾಣ, ನಗರೀಕರಣ ಮತ್ತು ರಸ್ತೆ ನಿರ್ಮಾಣ ಮುಂತಾದ ಯೋಜನೆಗಳಿಗೆ ಬಳಸಿಕೊಳ್ಳಲಾಗುತ್ತಿದ್ದು, ದೇಶಿ ಸಂಸ್ಕೃತಿಯ ಪಾರಂಪರಿಕ ನೆಲೆಗೆ ಪೆಟ್ಟು ಬಿದ್ದಂತಾಗಿದೆ ಹಾಗೂ ರಾಸಾಯನಿಕ ಗೊಬ್ಬರಗಳು ಹಾಗೂ ಕೀಟನಾಶಕಗಳ ಮೇಲಿನ ಸಬ್ಸಿಡಿ ಕಡಿತಗೊಂಡಿದ್ದು, ಜೊತೆಗೆ ಅವುಗಳ ಬೆಲೆ ಕೂಡ ಏರುತ್ತಿದ್ದು ಕೃಷಿಯೂ ಸಹ ದುಬಾರಿಯಾಗುತ್ತಿದೆ. ಹಾಗೆಯೇ ರಾಸಾಯನಿಕ ಗೊಬ್ಬರಗಳ ಮಿತಿಮೀರಿದ ಬಳಕೆಯಿಂದ ಭೂಮಿ ನಿಸ್ಸತ್ವಯುಕ್ತವಾಗಿ ಇಳುವರಿ ಸಹ ಕಡಿಮೆಯಾಗುತ್ತಿದೆ.

**೨.೪. ಜಾಗತೀಕರಣ ಮತ್ತು ಭಾರತದ ತಳಸಮುದಾಯಗಳು**

ಜಾಗತೀಕರಣ ಇಪ್ಪತ್ತನೇ ಶತಮಾನದ ಅಂತ್ಯದಲ್ಲಿ ಕಂಡುಬಂದು ತಳಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕತೆಯ ಮೇಲೆ ಪ್ರಭಾವ ಬೀರಿದರೂ ಇದಕ್ಕಿಂತ ಹಿಂದೆ ಈ ತಳಸಮುದಾಯಗಳ ಪಾರಂಪರಿಕತೆ ಕುರಿತು ಹದಿನೇಳನೇ ಶತಮಾನದಲ್ಲಿ ಈ ಸಮುದಾಯಗಳನ್ನು ಕುರಿತು ಅಧ್ಯಯನ ನಡೆಸಲಾಯಿತು. ಅರಣ್ಯದಲ್ಲಿದ್ದ ಸಾಂಪ್ರದಾಯಿಕತೆ ಕುರಿತಂತೆ ಕೆಲವೊಂದು ಅಧ್ಯಯನಗಳು ನಡೆದವು.

ಭಾರತದಲ್ಲಿ ಕಂಪನಿ ಆಡಳಿತದ ಸಂದರ್ಭದಲ್ಲಿ ಜಾತಿ ಮತ್ತು ಬುಡಕಟ್ಟುಗಳ ಅಧ್ಯಯನದಲ್ಲಿಯೇ ಅಲೆಮಾರಿಗಳ ಅಧ್ಯಯನಗಳು ಪ್ರಾರಂಭವಾದವು. ಅಲೆಮಾರಿಗಳನ್ನು ಹಾಗೂ ಜಾತಿ ಮತ್ತು ಬುಡಕಟ್ಟುಗಳನ್ನು ಬೇರ್ಪಡಿಸದೆ ಒಟ್ಟಾಗಿಯೇ ಅಧ್ಯಯನ ಮಾಡಿದರೂ ಸಹ ಮುಖ್ಯವಾಹಿನಿಯಲ್ಲಿರುವ ಜಾತಿಗಳಿಗಿಂತ ಹೆಚ್ಚಾಗಿ ಅಧ್ಯಯನ ನಡೆದಿದ್ದು ಕುಶಲಕರ್ಮಿ, ಆದಿವಾಸಿ ಮತ್ತು ಅಲೆಮಾರಿಗಳ ಮೇಲೆ, ಈ ಮೂರು ಗುಂಪಿನ ಸಮುದಾಯಗಳನ್ನು ಅಧ್ಯಯನ ಮಾಡಲು ಕಂಪನಿ ಆಡಳಿತಕ್ಕೆ

ತನ್ನದೇ ಆದ ರಾಜಕೀಯಾರ್ಥಿಕ ಕಾರಣಗಳು ಇದ್ದವು. ಕಂಪನಿ ಆಡಳಿತದ ಹೊಸ ಕೃಷಿ ನೀತಿ ಮತ್ತು ಭೂಕಂದಾಯ ಹಾಗೂ ತೆರಿಗೆ ವ್ಯವಸ್ಥೆಗಳು ದೇಶೀಯ ವ್ಯವಸಾಯ ಸಂರಚನೆಯನ್ನು ಮತ್ತು ವಾಣಿಜ್ಯ ವ್ಯವಹಾರಗಳನ್ನು ನಿಯಂತ್ರಿಸುವುದಾಗಿತ್ತು. 'ದೇಶೀಯ ಊಳಿಗಮಾನ್ಯ ವ್ಯವಸ್ಥೆಯ ಆರ್ಥಿಕ ಚಟುವಟಿಕೆಗಳು ಕಂಪನಿ ಅಡಳಿತದ ಹೊಸ ಕಾಯ್ದೆಗಳ ನಿಯಂತ್ರಣಕ್ಕೊಳಪಟ್ಟಿದ್ದು, ಆಗ ದೇಶೀಯ ಊಳಿಗಮಾನ್ಯ ವ್ಯವಸ್ಥೆಯ ಆರ್ಥಿಕತೆಯ ಜೊತೆಗೆ ಸಂಬಂಧವಿರಿಸಿಕೊಂಡಿದ್ದ ಕುಶಲಕರ್ಮಿ, ವ್ಯಾಪಾರಿ ಹಾಗೂ ಸೇವಕ ವರ್ಗಗಳು ದಿಕ್ಕು ತಪ್ಪಿದವು. ಮುಖ್ಯವಾಗಿ ಈ ವರ್ಗಕ್ಕೆ ಸೇರಿದ ಸಮುದಾಯಗಳು ಆರ್ಥಿಕವಾಗಿ ನೆಲೆ ಕಳೆದುಕೊಂಡವು ಮತ್ತು ಇಲ್ಲಿನ ವ್ಯವಸಾಯ ಸಂಬಂಧವನ್ನು ಪೋಷಿಸುತ್ತಿದ್ದ ಕುಶಲಕರ್ಮಿ ಸಮುದಾಯಗಳು ಆರ್ಥಿಕವಾಗಿ ಊಳಿಗಮಾನ್ಯ ವ್ಯವಸ್ಥೆಯನ್ನು ಅವಲಂಬಿಸಿದವು. ಇನ್ನೂ ಅಲೆಮಾರಿ ವ್ಯಾಪಾರಿಗಳು ಹಳ್ಳಿ ಮತ್ತು ನಗರಗಳ ನಡುವೆ ಸೇತುವೆಯಾಗಿದ್ದುಕೊಂಡು ಸ್ಥಳೀಯ ವ್ಯಾಪಾರವನ್ನು ಪೋಷಿಸುತ್ತಿದ್ದರು. ಸೇವಕ ವರ್ಗದವರು ಸಹ ಊಳಿಗಮಾನ್ಯ ವ್ಯವಸ್ಥೆಯನ್ನು ಆರ್ಥಿಕವಾಗಿ ಅವಲಂಬಿಸಿತು.'[೨] ಇಂತಹ ಸಂದರ್ಭದಲ್ಲಿ ಕೃಷಿ ಮತ್ತು ವ್ಯಾಪಾರಿಗಳ ಮೇಲೆ ಕಂಪನಿ ಆಡಳಿತ ತಂದ ಕಾಯ್ದೆಗಳು ಈ ಪಾರಂಪರಿಕ ಉತ್ಪಾದನಾ ಸಂಬಂಧಗಳನ್ನು ನಿರ್ಣಾಯಕವಾಗಿ ತಲೆಕೆಳಗೆ ಮಾಡಿದವು.

ಜಾಗತೀಕರಣದ ಸಂದರ್ಭದ ಹಿಂದಿನಿಂದಲೂ ಈ ತಳಸಮುದಾಯಗಳ ಶೋಷಣೆ ನಡೆಯುತ್ತಲೇ ಬಂದಿದ್ದು, ಜಾಗತೀಕರಣದ ಸಂದರ್ಭದಲ್ಲಿ ಇದರ ಹೊಡೆತಕ್ಕೆ ಒಳಗಾಗಿ ತಮ್ಮ ಮೂಲ ವೃತ್ತಿಯನ್ನು ಇತ್ತ ಮುಂದುವರಿಸಲು ಸಾಧ್ಯವಾಗದೇ ಅತ್ತ ಬೇರೆ ಉದ್ಯೋಗಕ್ಕೆ ಹೊಂದಿಕೊಳ್ಳಲು ಸಾಧ್ಯವಾಗದೆ ನೀರಿನಿಂದ ತೆಗೆದ ಮೀನಿನಂತೆ ಇವರ ಜೀವನ ಕಂಟುತ್ತಾ ಸಾಗಿದೆ. ಇನ್ನು ಕಾಡುಗೊಲ್ಲರು ಹಾಗೂ ಇವರ ಕುಲಕಸುಬುಗಳ ಮೇಲೆ ಜಾಗತೀಕರಣದ ಪ್ರಭಾವವನ್ನು ನೋಡುವುದಾದರೆ ಒಟ್ಟಾರೆಯಾಗಿ ಕಾಡುಗೊಲ್ಲರ ಬಗ್ಗೆ ಹಿಂದಿನಿಂದಲೂ ಹಲವಾರು ಅಧ್ಯಯನಗಳಾಗಿದ್ದರೂ ಬುಡಕಟ್ಟಿನ ಅರ್ಥವ್ಯವಸ್ಥೆಯ ಹಿನ್ನೆಲೆಯಲ್ಲಿ ಅವರ ಸಮಸ್ಯೆಗಳ ವಿಶ್ಲೇಷಣೆ ಸೂಕ್ತವಾಗಿ ಆಗಿಲ್ಲವೆಂಬುದು ನನ್ನ ಭಾವನೆ. ಕಾರಣ ಬುಡಕಟ್ಟು ಆರ್ಥಿಕತೆ ಎಂಬ ಕಲ್ಪನೆಯೇ ಕನ್ನಡದ ಮಟ್ಟಿಗೆ ತುಂಬಾ ಹೊಸದು. ಕನ್ನಡದಲ್ಲಿನ ಇದುವರೆಗಿನ ಆರ್ಥಿಕ ಅಧ್ಯಯನಗಳು ಹಲವಾರು ಬುಡಕಟ್ಟುಗಳ ಸಾಮಾಜಿಕ, ಆರ್ಥಿಕ ಸಮಸ್ಯೆಗಳು, ಆರ್ಥಿಕಾಭಿವೃದ್ಧಿ ಇತ್ಯಾದಿಗಳ ಹೆಸರಿನಲ್ಲಿ ಅವರ ತಲಾವರಮಾನ ಕಡಿಮೆ ಇದೆ. ತಲಾ ಅನುಭೋಗ ಕಡಿಮೆ ಇದೆ. ಜೀವನಮಟ್ಟ ತುಂಬಾ ನಿಕೃಷ್ಟವಾಗಿದೆ. ಒಬ್ಬ ಮನುಷ್ಯ ಸುಖವಾಗಿ ಬದುಕಲು ಅಷ್ಟೆ ಏಕೆ ಕನಿಷ್ಠ ಜೀವನ ನಡೆಸಲು ಅವಶ್ಯಕವಾದ ಅನುಕೂಲಗಳು ಎಂಬ ಇತ್ಯಾದಿ ಅಂಶಗಳಿಗೆ ಆದ್ಯತೆ ನೀಡಿವೆ. ಆದರೆ ಈ ಎಲ್ಲಾ ಸಮಸ್ಯೆಗಳ ಮೂಲವಾದ ಬುಡಕಟ್ಟು ಆರ್ಥಿಕತೆಯ ಮೂಲ ಹಾಗೂ ಹಿನ್ನೆಲೆಯನ್ನು ಅವು ಪ್ರಮುಖವಾಗಿ ಪರಿಗಣಿಸಿಲ್ಲವೆಂದು ಹೇಳಬಹುದಾಗಿದೆ.

ಆಧುನಿಕ ಜಗತ್ತಿಗಿಂತ ಬುಡಕಟ್ಟು ಜಗತ್ತು ಸಂಪೂರ್ಣ ಭಿನ್ನವಾಗಿದೆ. ನಮ್ಮಂತೆ ಅವರು ಸ್ವಾರ್ಥದ, ಲಾಭದ, ಪರಾವಲಂಬನೆಯ ಆರ್ಥಿಕತೆಯನ್ನು ಕಟ್ಟಿಕೊಳ್ಳದೇ ನಿಸ್ವಾರ್ಥ, ನಿರ್ಭೀತ, ಸ್ವತಂತ್ರ ಹಾಗೂ

ಸ್ವಾವಲಂಬಿ ಆರ್ಥಿಕತೆಯನ್ನು ಹೊಂದಿದ್ದು ಪಾಶ್ಚಾತ್ಯ ದೃಷ್ಟಿಕೋನದಿಂದ ಹೊರತಾದ, ಹೊಸದಾದ ಆರ್ಥಿಕ ಅಧ್ಯಯನದ ಜ್ಞಾನ ಶಿಸ್ತಿನ ಅವಶ್ಯಕತೆ ಇದೆ ಅಂದರೆ ನಮ್ಮ ಸಾಂಪ್ರದಾಯಿಕ ಆರ್ಥಿಕ ವಿಶ್ಲೇಷಣೆಗಳನ್ನು ಬುಡಕಟ್ಟುಗಳೆಂಬ ವಿಶಿಷ್ಟ ವಿಭಾಗಕ್ಕೆ ಯಥಾವತ್ತಾಗಿ ಅನ್ವಯಿಸುವ ಅಪಾಯಗಳೇನೆಂಬ ಪರಿವೆಯೇ ಇವರಿಗಿಲ್ಲ. ಬುಡಕಟ್ಟು ಅರ್ಥಶಾಸ್ತ್ರ ಎಂಬ ಸಮಗ್ರ ದೃಷ್ಟಿಕೋನದ ಅಧ್ಯಯನ ಇಂದಿನ ಕಾಲದ ಅವಶ್ಯಕತೆ ಹಾಗೂ ಅನಿವಾರ್ಯವಾಗಿದೆ.

ವರ್ತಮಾನದಲ್ಲಿ ಕಾಡುಗೊಲ್ಲರು ಯಾವ ಬಗೆಯ ಸಾಮಾಜಿಕ ಆರ್ಥಿಕ ಸ್ಥಾನಮಾನಗಳನ್ನು ಹೊಂದಿದ್ದಾರೆ. ಅದರಲ್ಲಿ ಆದ ಬದಲಾವಣೆಗಳಿಗೆ ಯಾವ ಚಾರಿತ್ರಿಕ ಅನಿವಾರ್ಯತೆಗಳು ಕಾರಣವಾದವು? ಗೊಲ್ಲರ ವರ್ತಮಾನದ ಬದುಕು ಯಾವ ಬಗೆಯ ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗುತ್ತದೆ ಎಂಬ ಪ್ರಶ್ನೆಗಳು ಬಹುಮುಖ್ಯವಾದವುಗಳೆಂದು ಭಾವಿಸಿದ್ದೇವೆ. ಸಾಮಾಜಿಕ ಬದಲಾವಣೆಯು ಕೇವಲ ಕಾಲದ ಒತ್ತಡದ ಅನಿವಾರ್ಯತೆಯಿಂದ ಮಾತ್ರ ಸಂಭವಿಸುವಂತಹದ್ದಲ್ಲ ಅದಕ್ಕೆ ಆಯಾ ಸಮುದಾಯಗಳು ಪಾಲ್ಗೊಳ್ಳುವ ಒಟ್ಟು ವ್ಯವಸ್ಥೆಯ ರಾಜಕೀಯಾರ್ಥಿಕ ಚಲನೆಗಳೂ ಕಾರಣವಾಗುತ್ತವೆ. ಪಾರಂಪರಿಕ ಸಮಾಜಗಳು ಇನ್ನೂ ಜೀವಂತವಿರುವ ಭಾರತದಂತಹ ದೇಶದಲ್ಲಿ ಕಾಡುಗೊಲ್ಲರ ಸಾಮಾಜಿಕ ಆರ್ಥಿಕ ಸ್ಥಾನಮಾನಗಳ ಕುರಿತು ಅಧ್ಯಯನವು ಅನೇಕ ಬಿಕ್ಕಟ್ಟುಗಳನ್ನು ಎದುರಿಸಬೇಕಾಗುತ್ತದೆ.

ಪ್ರಸ್ತುತ ಅಧ್ಯಯನವು ಕಾಡುಗೊಲ್ಲರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನು ವಿವರಿಸುವ ಪ್ರಯತ್ನವಾಗಿದೆ. ಅದರಲ್ಲಿಯೂ ಕಾಡುಗೊಲ್ಲರ ಆರ್ಥಿಕ ಚಟುವಟಿಕೆಗಳನ್ನು ವಿಶೇಷವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಶತಮಾನಗಳ ಕಾಲ ಈ ದೇಶದ ಸಾಮಾಜಿಕ ಆರ್ಥಿಕ ವಿಷಮತೆಗಳ ನಡುವೆ ಕಾಡುಗೊಲ್ಲ ಬುಡಕಟ್ಟುಗಳು ವಿವಿಧ ಕಾಲಘಟ್ಟದಲ್ಲಿ ಯಾವ ಬಗೆಯ ರಾಜಕೀಯಾರ್ಥಿಕ ವಿಪ್ಲವಗಳ ಮೂಲಕ ಹಾದು ಬಂದಿದ್ದಾರೆ ಎಂಬುದನ್ನು ಅಧ್ಯಯನ ಮಾಡಲಾಗಿದೆ.

ಶ್ರೇಣೀಕೃತ ವ್ಯವಸ್ಥೆಯ ಈ ಸಮಾಜದಲ್ಲಿ ಅವರು ರೂಢಿಸಿಕೊಂಡು ಬಂದ ದುಡಿಮೆಯ ಮಾದರಿಗಳಾವುವು? ವರ್ತಮಾನದಲ್ಲಿ ಅವರ ಅರ್ಥಿಕ ವ್ಯವಸ್ಥೆಯ ಸ್ವರೂಪವೇನು ಎಂಬ ಪ್ರಶ್ನೆಗಳನ್ನು ಮುಖ್ಯವಾಗಿಟ್ಟುಕೊಂಡು ಈ ಅಧ್ಯಯನ ಕೈಗೊಳ್ಳಲಾಗಿದೆ.

ಜಾಗತೀಕರಣ ಮತ್ತು ಖಾಸಗೀಕರಣಗಳ ಹಿನ್ನೆಲೆಯಲ್ಲಿ ಜಗತ್ತು ಎದುರಿಸುತ್ತಿರುವ ವ್ಯಕ್ತಿ ವ್ಯಕ್ತಿಗಳ ಶೋಷಣೆ, ದೇಶ ದೇಶಗಳ ಶೋಷಣೆ, ಪರಿಸರದ ಶೋಷಣೆ ಮತ್ತು ನಾಶ ಅಂತಿಮವಾಗಿ ತನ್ನ ಮತ್ತು ಸೃಷ್ಟಿಯ ವಿನಾಶದ ಸಾಧ್ಯತೆಗಳು ಹೆಚ್ಚಾಗಿರುವ ಹಿನ್ನೆಲೆಯಲ್ಲಿ ಅಭಿವೃದ್ಧಿ ಎಂದರೆ ಮುಂದೆ ಮುಂದೆ ಸಾಗುವುದು, ಹೆಚ್ಚು ಹೆಚ್ಚು ಉತ್ಪಾದಿಸುವುದು, ಹೆಚ್ಚು ಹೆಚ್ಚು ಅನುಭೋಗಿಸುವುದು ಎಂಬ ಭಾವನೆಯ ಬದಲಾಗಿ ಎಲ್ಲರ ಹಿತದೃಷ್ಟಿಯಿಂದ ಅಭಿವೃದ್ಧಿ ಎಂದರೆ ಒಂದೆರಡು ಹೆಜ್ಜೆ ಹಿಂದೆ ಸರಿಯುವುದು, ಐಶಾರಾಮದ ಬದಲು ಸರಳ ಸಂಪತ್ತಿನ ಜೀವನ ನಡೆಸುವುದು ಎಂದೇಕಾಗಬಾರದು? ಇದು ಸಾಧ್ಯವಿಲ್ಲ, ಕೇವಲ ಭ್ರಮೆ ಎನ್ನುವವರಿಗೆ ನಮ್ಮದೇ ಬುಡಕಟ್ಟುಗಳು ನಡೆಸಿದ, ನಡೆಸುತ್ತಿರುವ

ಜೀವನ ಜೀವಂತ ಉದಾಹರಣೆಯಾಗಬಲ್ಲದು. ಇಂದಿನ ಕಾಲಕ್ಕೆ ಬುಡಕಟ್ಟುಗಳೇ ಮುಖ್ಯವಾಹಿನಿಗೆ ಬರಲು ಹವಣಿಸುತ್ತಿರುವಾಗ ಮತ್ತೆ ಹಿಂದೆ ಹೋಗಲಾರದಷ್ಟು ಮುಂದೆ ಬಂದಿದ್ದೇವೆ ಎಂದು ಕೊಳ್ಳುವವರಿಗೆ ಅವರ ಜೀವನವನ್ನು ಯಥಾವತ್ತಾಗಿ ಅನುಕರಿಸುವುದು ಸಾಧ್ಯವಾಗಿದ್ದರೂ ಅವರ ಜೀವನದ ಉದಾತ್ತ ತತ್ವಗಳನ್ನಾದರೂ, ಅವುಗಳಲ್ಲಿ ಕೆಲವನ್ನಾದರೂ ಅನುಸರಿಸುವುದು ಸಾಧ್ಯ ಹಾಗೂ ಅನಿವಾರ್ಯವೂ ಹೌದು. ಇಂದಿನ ಶ್ರೀಮಂತಿಕೆ ಜೀವನ ನಡೆಸುವವರಲ್ಲಿ ಕಂಡುಬರುತ್ತಿರುವ ಹತಾಶೆ, ಅಸಹನೆ, ಅಶಾಂತಿ, ಇತ್ಯಾದಿಗಳು ಪ್ರಸ್ತುತ ಆರ್ಥಿಕತೆಯ ವೈಫಲ್ಯಗಳಿಗೆ ಹಿಡಿದ ಕನ್ನಡಿಯಾಗಿದೆ.

ಹೀಗಾಗಿ ಯಂತ್ರಗಳ ಮತ್ತು ಹಣದ ಪ್ರಾಮುಖ್ಯತೆಯನ್ನು ಇಷ್ಟಿಷ್ಟೆ ಕಳಚುತ್ತಾ ಕಾಯಕ, ಶ್ರಮ, ವಿನಿಮಯ ಕೇಂದ್ರಿತ ನೈಸರ್ಗಿಕ, ನೈತಿಕ ಜೀವನಪದ್ಧತಿಯನ್ನು ಪುನರ್ ಸ್ಥಾಪಿಸಬೇಕಾಗಿದೆ. ಸಮಾಜವಾದ ಸಮತಾವಾದಗಳು ಕೂಡ ಇದನ್ನೇ ಶ್ರಮ ಮೌಲ್ಯ ಸಿದ್ಧಾಂತದ ಮೂಲಕ ಹೇಳುತ್ತಾವಾದರೂ ಅವು ವೈಯಕ್ತಿಕ ಮನಃ ಪರಿವರ್ತನೆಗಿಂತ ರಾಜಕೀಯ ಅಧಿಕಾರವನ್ನು ಹಿಡಿದು ಪರಿವರ್ತನೆ ತರಲು ಒತ್ತು ನೀಡುತ್ತವೆ. ಈ ಪರಿವರ್ತನೆ ತರಲು ವಿಫಲವಾಗಿರುವುದನ್ನು ರಷ್ಯಾ, ಚೀನಾಗಳ ಉದಾಹರಣೆಯ ಮೂಲಕ ಈಗಾಗಲೇ ಕಂಡುಕೊಳ್ಳಲಾಗಿದೆ. ಹಾಗಾಗಿ ಈ ಪರಿವರ್ತನೆ ಒಂದು ಜನಮಾನದ ಚಳುವಳಿಯಾಗಿ ರೂಪುಗೊಳ್ಳುವುದರ ಜೊತೆಗೆ ವೈಯಕ್ತಿಕ ಮಟ್ಟದಲ್ಲಿ ಮತ್ತು ಸಾಮುದಾಯಿಕವಾಗಿ ಚರ್ಚೆ ಮಾಹಿತಿ, ಮನಃಪರಿವರ್ತನೆಗಳ ಮೂಲಕವೇ ಆಗಬೇಕಿದೆ. ಅಭಿವೃದ್ಧಿಯ ನೆಪದಲ್ಲಿ ಕುಲಕಸುಬುಗಳು ಅವನತಿಯತ್ತ ಸಾಗುತ್ತಿರುವುದನ್ನು ನಾವು ನೋಡಬಹುದು. ಸರ್ಕಾರ ಅಭಿವೃದ್ಧಿ ಯೋಜನೆಯಡಿ ಹಲವಾರು ಯೋಜನೆಗಳನ್ನು ಅಭಿವೃದ್ಧಿ ದೃಷ್ಟಿಯಿಂದ ಹಮ್ಮಿಕೊಂಡರೂ ಅಲ್ಲಿ ಬುಡಕಟ್ಟುಗಳಿಗೆ ಹಾಗೂ ಸಮುದಾಯಗಳಿಗೆ ಎಲ್ಲೋ ಒಂದು ಕಡೆ ಅವರ ಕುಲಕಸುಬುಗಳು ಅವನತಿಯತ್ತ ಸಾಗುತ್ತಿರುವುದನ್ನು ನೋಡಬಹುದು. ಬುಡಕಟ್ಟುಗಳ ಮೂಲ ಕಸುಬು ಪಶುಸಂಗೋಪನೆ ಮತ್ತು ಕೃಷಿಯುನ್ನು ಅಭಿವೃದ್ಧಿ ಯೋಜನೆಗಳು ಮೆಟ್ಟಿನಿಂತು ಅವುಗಳನ್ನು ಹಿಂದಿಕ್ಕಿ ಮುಂದುವರಿಯುತ್ತಿರುವುದನ್ನು ಕಾಣಬಹುದಾಗಿದೆ. ಒಂದು ಕಡೆ ಅಭಿವೃದ್ಧಿ ಯೋಜನೆಗಳನ್ನು ನೋಡಿ ಸಂತೋಷವಾದರೂ ಇನ್ನೊಂದು ಕಡೆ ಅವನತಿ ಹೊಂದುತ್ತಿರುವ ಕುಲಕಸುಬುಗಳನ್ನು ನೋಡಿದರೆ ದುಃಖವನ್ನು ಕಾಣಬಹುದಾಗಿದೆ.

ಅಭಿವೃದ್ಧಿ ಯೋಜನೆಗಳು ಬಂಡವಾಳಶಾಹಿಗಳಿಗೆ ಅನುಕೂಲವಾದರೆ ಇದರಿಂದ ಸಮುದಾಯಕ್ಕೆ ಕಿಂಚಿತ್ತು ಅನುಕೂಲವಲ್ಲ. ಅಭಿವೃದ್ಧಿ ಯೋಜನೆಗಳಿಂದ ನಗರೀಕರಣ ಏರ್ಪಟ್ಟು ಬಂಡವಾಳಶಾಹಿಗಳಿಗೆ ಲಾಭವಾಗುತ್ತಿರುವುದನ್ನು ನಾವು ಕಾಣಬಹುದಾಗಿದೆ. ನಗರೀಕರಣದಿಂದ ಮಾರುಕಟ್ಟೆ ವಿಸ್ತಾರವಾದರೆ ಮತ್ತೊಂದು ಕಡೆ ಬುಡಕಟ್ಟು ಜನರ ಒಕ್ಕಲೆಬ್ಬಿಸುವಿಕೆಯನ್ನು ನಾವು ನೋಡಬಹುದಾಗಿದೆ. ಇತ್ತೀಚಿನ ದಿನಗಳಲ್ಲಿ ಬುಡಕಟ್ಟು ಆರ್ಥಿಕತೆ ಸುಧಾರಣೆ ಕಾಣದೆ ಹೀನಾಯ ಸಾಲಿಗೆ ಸೇರುತ್ತಿರುವುದರಿಂದ ನಾವು ಹಿಂದಿನ ಬುಡಕಟ್ಟು ಆರ್ಥಿಕತೆಯನ್ನು ಮುಂದೆಂದೂ ಕಾಣಲು ಸಾಧ್ಯವಾಗದೇ ಇರುವ ಪರಿಸ್ಥಿತಿ ನಿರ್ಮಾಣವಾಗುತ್ತದೆ.

ಜಾಗತೀಕರಣದಿಂದ ಅತಿ ಹೆಚ್ಚು ಅಪವ್ಯಾಖ್ಯಾನಕ್ಕೀಡಾಗುವುದೇನೆಂದರೆ ಅಭಿವೃದ್ಧಿ. ಬಂಡವಾಳ ಶಾಹಿಗಳ ಹೊಸ ಅಸ್ತ್ರವಾಗಿರುವ ಈ ಜಾಗತೀಕರಣ ಎಲ್ಲವನ್ನು ತನ್ನ ಲಾಭಕ್ಕೆ ಬಳಸಿಕೊಳ್ಳುತ್ತದೆ ಮತ್ತು ಅದಕ್ಕಾಗಿ ಪ್ರತಿಯೊಂದನ್ನೂ ತನ್ನ ಮೂಗಿನ ನೇರಕ್ಕೆ ವಿಶ್ಲೇಷಿಸುತ್ತದೆ. ಇದಕ್ಕೆ ಅಭಿವೃದ್ಧಿಯೂ ಹೊರತಾಗಿಲ್ಲ. ಅಭಿವೃದ್ಧಿ ಎಂದರೇನು ಎನ್ನುವುದನ್ನು ಶ್ರೀಯುತ ನಾಗೇಶ್ ಹೆಗಡೆಯವರು ತಮ್ಮ ಅಭಿವೃದ್ಧಿಯ ಅಂದ ಯುಗ ಕೃತಿಯಲ್ಲಿ ತುಂಬಾ ಮಾರ್ಮಿಕವಾದ ಉದಾಹರಣೆ ಮೂಲಕ ವಿವರಿಸುತ್ತಾರೆ.

"ಯಾವನೋ ಹಳ್ಳಿ ಹೈದನೊಬ್ಬ (ತಳಸಮುದಾಯದಲ್ಲೊಬ್ಬ) ಯಾವುದೋ ಕುಗ್ರಾಮದ ಆಚೆಗಿನ ಹಳ್ಳದ ಪಕ್ಕದ ಗುಡಿಸಲಿನಲ್ಲಿ ವಾಸಿಸುತ್ತಿದ್ದಾನೆ. ಅಯ್ಯೋ ಪಾಪ, ಆತ ಕಾಲ್ನಡಿಗೆಯಲ್ಲೇ ಸಂಚರಿಸಬೇಕು. ಅವನಿಗೆ ಹಲ್ಲುಜ್ಜಲು ಟೂತ್ ಬ್ರಶ್ ಕೂಡ ಇಲ್ಲ. ಇಜ್ಜಲು ಬೇವಿನ ಕಡ್ಡಿಯನ್ನೇ ಬಳಸುತ್ತಿದ್ದಾನೆ. ಮೈಕೈ ಕೆಸರು ಮಾಡಿಕೊಂಡು, ಜಿಗಣೆಗಳಿಂದ ಕಚ್ಚಿಸಿಕೊಂಡು ದುಡಿಮೆ ಮಾಡಬೇಕು. ಹಳ್ಳದ ನೀರನ್ನೇ ಕುಡಿಯುತ್ತಾನೆ. ಕ್ಲೋರಿನ್ನಿಂದ ಶುದ್ಧೀಕರಿಸಿದ ನೀರು ನೋಡಿದ್ದಾನೋ ಇಲ್ಲವೋ? ಆಧುನಿಕ ಕೃಷಿ ಗೊತ್ತಿಲ್ಲ. ಅವನ ಊಟವೋ ಗಡ್ಡೆ, ಗೆಣಸು, ಕುಟ್ಟಿದ ಅಕ್ಕಿ, ಮುದ್ದೆ ಸಾರು. ಜ್ವರ ಬಂದರಂತೂ ಯಾವುದೋ ಕಷಾಯ, ಗಿಡ ಮೂಲಿಕೆ ಬೇರು. ಓದು ಬರಹ ಕೂಡ ಗೊತ್ತಿಲ್ಲದ ಗಮಾರನಿಗೆ ಅನ್ಯಾಯವಾದರೆ ಕಾನೂನಿನ ನೆರವು ಇಲ್ಲ. ಬೇಸರವಾದರೆ ಜಾನಪದ ಹಾಡು ಕುಣಿತ ಬಿಟ್ಟರೆ ರೇಡಿಯೋ ಕೂಡ ಇಲ್ಲ. ಕತ್ತಲೆಯಲ್ಲಿ ಬುಡ್ಡಿಯ ಬೆಳಕು ಬಿಟ್ಟರೆ ಬೇರೇನೂ ಇಲ್ಲ."[೧೩]

'ಈ ಆಧುನಿಕತೆಯಲ್ಲಿ ಪಕ್ಕಾ ಮೈ ನೋಯಿಸಿಕೊಳ್ಳದ ಹಾಗೆಯೇ ಬೆಳೆಯಬೇಕು. ಅವರಿಗೆ ದುಃಖ ದಾರಿದ್ರ್ಯ, ರೋಗರುಜಿನ, ವೃದ್ಧಾಪ್ಯಗಳ ಸೋಂಕು ತಗಲದ ಹಾಗೆ ನೋಡಿಕೊಳ್ಳಬೇಕು. ಇಡೀ ಜಗತ್ತನ್ನೇ ಒಂದು ಮಾಡಿ ಸೇವೆಗೆ ಒಡ್ಡಬೇಕು. ಸೊಪ್ಪು ತರಕಾರಿಯ ಕೈಗಾಡಿ ಬರಕೂಡದು. ಕೃಷಿಯನ್ನೇ ಒಂದು ಉದ್ಯಮ ಮಾಡಿ, ಆಹಾರವನ್ನು ವಿಮಾನದ ಮೂಲಕ ಪೂರೈಕೆ ಮಾಡಿ ಕೋಲ್ಡ್ ಸ್ಟೋರೇಜ್ ಚೈನ್‌ಗಳ ಮೂಲಕ ತಾಜಾ ಎನಿಸುವ ತರಕಾರಿಗಳನ್ನು ಹೋಮ್ ಡೆಲಿವರಿ ಮಾಡಬೇಕು. ಈರುಳ್ಳಿ ಕೊಳೆಯದ ಹಾಗೆ ಆಲೂಗಡ್ಡೆ ಮೊಳಕೆ ಬಾರದ ಹಾಗೆ ಅವುಗಳಿಗೆಲ್ಲ ವಿಕಿರಣ ಸೇಚನ ಮಾಡಿಸಿ ಪೂರೈಸಬೇಕು.

ಇಂಥ ಸೌಲಭ್ಯ ಅದೆಷ್ಟು ಜನರಿಗೆ ಸಿಗಲು ಸಾಧ್ಯ? ದೇಶದ ಶೇ. ೩೦ರಷ್ಟು ಜನರು ಈಗಲೂ ಬಡತನದ ಕಂದರದಲ್ಲೆ ಇದ್ದಾರೆ. ಕೆಲವರಂತೂ ಅದೆಷ್ಟು ಕಡುಬಡವರೆಂದರೆ, ಹಳ್ಳದ ಪಕ್ಕದ ಗುಡಿಸಿಲುಗಳಲ್ಲಿ ವಾಸಿಸುತ್ತಿದ್ದಾರೆ. ಕಾಲ್ನಡಿಗೆಯ ಸಂಚಾರ, ಹಲ್ಲುಜ್ಜಲು ಟೂತ್ ಬ್ರಶ್ ಕೂಡ ಇಲ್ಲ. ಮೈ ಕೈ ಕೆಸರು ಮಾಡಿಕೊಂಡು, ಜಿಗಣೆಗಳಿಂದ ಕಚ್ಚಿಸಿಕೊಂಡು ದುಡಿಮೆ, ಶುದ್ಧೀಕರಿಸಿದ ನೀರಿಲ್ಲ, ಕುಟ್ಟಿದ ಅಕ್ಕಿ, ಮುದ್ದೆ ಸಾರು, ಔಷಧಕ್ಕೆ ಮೂಲಿಕೆ ಬೇರು, ಮನರಂಜನೆಗೆ ರೇಡಿಯೋ ಕೂಡ ಇಲ್ಲ, ಇವರನ್ನೆಲ್ಲ ಅಭಿವೃದ್ಧಿಯ ಪಥಕ್ಕೆ ಹಚ್ಚಲು ಇನ್ನೆಷ್ಟು ವರ್ಷ ಬೇಕೋ?'[೧೪]

ಈ ಮೇಲೆ ಚರ್ಚಿಸಿದ ವಿಷಯ ಜಾಗತೀಕರಣದ ಅಭಿವೃದ್ಧಿಯ ನಿಜವಾದ ಚಿತ್ರಣವಾಗಿದೆ. ಆದರೆ ಇದನ್ನೆಲ್ಲಾ ವ್ಯವಸ್ಥಿತವಾಗಿ ಮುಚ್ಚಿಹಾಕಿ ಬೇರೆಯದೇ ಮುಖವಾಡವನ್ನು ತೊಟ್ಟು ನಮ್ಮ ನಡುವೆ ಇರುವ ಈ ಜಾಗತೀಕರಣದ ಪ್ರವಾಹದ ಹೊಡೆತಕ್ಕೆ ಸಿಕ್ಕು ಹಲವಾರು ತಳಸಮುದಾಯಗಳು ಗುರುತು ಸಿಗದಷ್ಟು ಬದಲಾಗಿವೆ. ಒಂದೆಡೆ ಬಡವರು, ದಲಿತರು ಮತ್ತು ಬುಡಕಟ್ಟುಗಳೆಲ್ಲಾ ತುಂಬಾ ಹಿಂದುಳಿದಿದ್ದು ಆಧುನೀಕರಣಗೊಳ್ಳದಿದ್ದರೆ ಉಳಿಗಾಲವಿಲ್ಲ ಎಂದು ಬಿಂಬಿಸುವ ಜಾಗತೀಕರಣ, ಇನ್ನೊಂದೆಡೆ ಬುಡಕಟ್ಟುಗಳ ಕಲೆ, ಗಾಯನ ನೃತ್ಯಗಳು ಅನನ್ಯವೆಂದು ಹೇಳುತ್ತಾ ಅವುಗಳನ್ನು ತನ್ನ ಹಿತಾಸಕ್ತಿಗೆ ತಕ್ಕಂತೆ ಬದಲಿಸಿ ಅವುಗಳ ರಕ್ಷಣೆಯ ಹೆಸರಿನಲ್ಲಿ ಹಣ ಮಾಡುತ್ತಿವೆ. ಈ ಪ್ರವಾಹಕ್ಕೆ ಸಿಲುಕಿದ ಕೆಲವು ಸಮುದಾಯಗಳು ನಡುಗಡ್ಡೆಗಳಾಗಿಯೇ ಉಳಿದಿದ್ದರೂ ತಮ್ಮ ಅನನ್ಯತೆಯನ್ನು ಕಾಪಾಡಿಕೊಳ್ಳುವಲ್ಲಿ ಯಶಸ್ವಿಯಾಗಿವೆ. ತಳಸಮುದಾಯಗಳೆಲ್ಲಾ ಅನಾಗರಿಕರು, ಅವರ ನಂಬಿಕೆ, ಆಚರಣೆಗಳೆಲ್ಲಾ ಮೂಢನಂಬಿಕೆಗಳು, ಅವರು ಕೇವಲ ಜೀವವಿಲ್ಲದ ಅಧ್ಯಯನ ವಸ್ತುಗಳು ಎಂಬ ತಿರಸ್ಕಾರ ಮತ್ತು ಮರುಕ ತುಂಬಿದ ದೃಷ್ಟಿಕೋನ ನಮ್ಮ ರಾಜಕಾರಣಿಗಳು, ಪತ್ರಕರ್ತರು, ಬುದ್ಧಿಜೀವಿಗಳು ಹಾಗೂ ಅಧ್ಯಯನಕಾರರಲ್ಲಿ ತುಂಬಿಕೊಂಡಿದೆ. ಅವರೂ ಮನುಷ್ಯರು, ನಮ್ಮ ಸಂಸ್ಕೃತಿಯ ಬೀಜಗಳು ಅವರಲ್ಲಿವೆ, ನೆಲ, ಜಲ ಇತ್ಯಾದಿಗಳ ಮೇಲೆ ಅವರಿಗೇ ಮೊದಲ ಹಾಗೂ ಹೆಚ್ಚಿನ ಅಧಿಕಾರವಿದೆ ಎಂಬ ದೃಷ್ಟಿಕೋನವನ್ನು ಬೆಳೆಸಿಕೊಂಡು ಸಹಬಾಳ್ವೆ ನಡೆಸುವ ಮಾದರಿ ಬೇಕಿದೆ. ಅನನ್ಯತೆ ಉಳಿಸಿಕೊಳ್ಳುವ ಪ್ರಶ್ನೆ ಬಂದಾಗಲೆಲ್ಲಾ ತಳಸಮುದಾಯಗಳ ಸ್ವಾಯತ್ತತೆ ಅಧಿಕಾರ ಮತ್ತು ಸರ್ಕಾರದ ಸಾರ್ವಭೌಮ ಅಧಿಕಾರಗಳ ತಾಕಲಾಟ ಪ್ರಾರಂಭವಾಗುತ್ತದೆ. ನೆಹರು ತಮ್ಮ ಭಾಷಣದಲ್ಲಿ ಹೇಳಿದಂತೆ ನೀತಿನಿಯಮಗಳನ್ನು ಎಲ್ಲರ ಹಿತಾಸಕ್ತಿಗಳಿಂದ ಮಾಡಲಾಗಿದ್ದು ಅದನ್ನು ಮುರಿದರೆ ಶಾಂತಿ ಸುವ್ಯವಸ್ಥೆ ಹದಗೆಡುತ್ತದೆ. ಹಾಗಾಗಿ ತಳಸಮುದಾಯಗಳ ಅನನ್ಯತೆಯಷ್ಟೆ ಮುಖ್ಯ ರಾಷ್ಟ್ರದ ಕಾನೂನುಗಳು. ಹೀಗಾಗಿ ಬುಡಕಟ್ಟುಗಳು ರಾಷ್ಟ್ರದ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಜನತಾಂತ್ರಿಕ ಬಹುಸಂಸ್ಕೃತಿಯ ಸಮಾಜದಲ್ಲಿ ಬಾಳಬೇಕು. ಹಾಗೆಯೇ ಸಮಾಜ ಹಾಗೂ ಸರ್ಕಾರಗಳು ಅವರ ಅನನ್ಯತೆಗೆ ಧಕ್ಕೆ ಬರದಂತೆ ನಡೆದುಕೊಳ್ಳಬೇಕಾದ ಅಭಿವೃದ್ಧಿ ಮಾದರಿಯ ಅವಶ್ಯಕತೆ ಇಂದು ಅನಿವಾರ್ಯವಾಗಿದೆ. ಜನತಂತ್ರ ಮತ್ತು ಅನನ್ಯತೆಯನ್ನು ಬೆಸೆಯುವ ಮಾದರಿ ಇದೇಯೆ ಎಂದರೆ ಹೌದು ಇದೇ ಎಂದು ಹೇಳಬಹುದು. ನಿರಂತರವಾಗಿ ರೆಡ್ ಇಂಡಿಯನ್ನರನ್ನು ನಿರ್ನಾಮ ಮಾಡಿ, ಜಾಗತೀಕರಣ ಹಾಗೂ ಆಧುನೀಕತೆಯ ಹರಿಕಾರರೆಂದೇ ಹೆಸರಾದ ಅಮೆರಿಕನ್ನರೆ ಆಶ್ಚರ್ಯಕರವಾದ ಇಂತಹದೊಂದು ವ್ಯವಸ್ಥೆಯನ್ನು ಹುಟ್ಟು ಹಾಕಿದ್ದಾರೆ. ತಳಸಮುದಾಯಗಳು ಅಲ್ಲಿ, ಇಲ್ಲಿ ಎಲ್ಲಿಯೂ ಸಲ್ಲದ ತ್ರಿಶಂಕುಗಳಾಗಿರುವ ಪರಿಸ್ಥಿತಿ ಭಾರತದಲ್ಲಿದ್ದರೆ, ಅಮೆರಿಕದಲ್ಲಿ ಇದಕ್ಕೆ ಪೂರ್ಣ ವ್ಯತಿರಿಕ್ತ ಪರಿಸ್ಥಿತಿ ಇದೆ. ಇಲ್ಲಿ ಸಾರ್ವಭೌಮ ಸರ್ಕಾರಕ್ಕೆ ಸಮನಾದ ಅಧಿಕಾರವನ್ನು ಆದಿವಾಸಿಗಳಿಗೆ ನೀಡಲಾಗಿದ್ದು ಅಲ್ಲಿನ ಸಂಪನ್ಮೂಲಗಳ ಬಳಕೆ, ಉಳಿಕೆಗಳಲ್ಲಿ ಅವರ ಧ್ವನಿಗೆ ಮಾನ್ಯತೆ ಇದೆ.

ಒಟ್ಟಾರೆಯಾಗಿ ಹೇಳುವುದಾದರೆ ತಳಸಮುದಾಯಗಳ ಆರ್ಥಿಕತೆ ಮೇಲೆ ಜಾಗತೀಕರಣ ಅತ್ಯಂತ ಕೆಟ್ಟ ಪರಿಣಾಮ ಬೀರಿದೆ ಎಂದು ಹೇಳಬಹುದು. ಜಾಗತೀಕರಣವು ಸೃಷ್ಟಿಸುವ ಹೊಸ ಮಾರುಕಟ್ಟೆ

ವ್ಯವಸ್ಥೆಯಲ್ಲಿ ತಳಸಮುದಾಯಗಳ ಸರಳ ಆರ್ಥಿಕತೆ ಕೊಚ್ಚಿಹೋಗಿದೆ. ದೇಶೀಯವಾಗಿ ತಯಾರಿಸಿದಂತಹ ಕರಕುಶಲ ವಸ್ತುಗಳಿಗೆ ಜಾಗತಿಕ ಮಾರುಕಟ್ಟೆಯಲ್ಲಿ ಬೆಲೆ ಇಲ್ಲದಂತಾಗಿದೆ. ಕಾಡಿನ ಸಣ್ಣ ಪುಟ್ಟ ಸಂಗ್ರಹಣೆಯಲ್ಲಿ ತೊಡಗಿದ್ದ ತಳಸಮುದಾಯಗಳಿಗೆ ಅರಣ್ಯನಾಶ, ಗಣಿಗಾರಿಕೆ, ಅರಣ್ಯ ಕಾಯ್ದೆ ಇವುಗಳು ಜಾಗತೀಕರಣದ ಪರಿಣಾಮಗಳೇ ಆಗಿವೆ.

ಭಾರತ ವೈವಿಧ್ಯತೆಯಲ್ಲಿ ಏಕತೆ ಹೊಂದಿದೆ. ಬಹುತ್ವ ಸಾಂಸ್ಕೃತಿಕ ಹಿರಿಮೆ ಭಾರತವನ್ನು ಜಾಗತಿಕ ಮಟ್ಟದಲ್ಲಿ ವಿಶಿಷ್ಟ ಸ್ಥಾನದಲ್ಲಿ ನಿಲ್ಲಿಸಿದೆ. ಈ ಬಹುತ್ವ ಸಂಸ್ಕೃತಿ ಆಕರ್ಷಣೀಯ ಮತ್ತು ನಿಗೂಢತೆಯ ಸಂಕೇತ. ಜ್ಞಾನದ ಗುಚ್ಛವಾಗಿದ್ದ ಈ ಬಹುತ್ವ ಏಕೀಕೃತ ವ್ಯವಸ್ಥೆಯಾಗಿ ಧ್ರುಳ್ಳಿವೀಕರಣಗೊಳ್ಳತ್ತಿದೆ. ಹಲವಾರು ಭಾಷೆ, ನೆಲೆ, ಸಂಸ್ಕೃತಿ, ಆಹಾರ, ಉಡುಗೆ, ತೊಡುಗೆ ಮತ್ತು ಜೀವನವಿಧಾನ ಹೊಂದಿದ ತಳಸಮುದಾಯಗಳು ಏಕ ಭಾಷೆ ಧರ್ಮ, ಆಹಾರ ಕ್ರಮ ಇತ್ಯಾದಿ ವಿಶಿಷ್ಟ ಲಕ್ಷಣಗಳಲ್ಲಿ ಸಮೀಕರಣಗೊಳ್ಳುತ್ತಿವೆ. ಜಾಗತೀಕರಣವಾಗಿದ್ದ ಸಾಮಾಜಿಕ ಬದುಕು ಸಹ ಇದರ ಪ್ರಭಾವದಿಂದ ತನ್ನತನ/ಸಂಸ್ಕೃತಿಯನ್ನು ಕಳೆದುಕೊಂಡು ಮತ್ತೊಂದು ಸಂಸ್ಕೃತಿ ಶ್ರೇಷ್ಠ ಹಾಗೂ ನಮ್ಮದು ಕನಿಷ್ಠ ಅದನ್ನು ಅನುಸರಿಸಿದರೆ ಐಶಾರಾಮಿ ಬದುಕು ಸಾಗಿಸಬಹುದು ಎಂಬ ಅನುಕರಣೀಯತೆಯನ್ನು ನಾವು ಜಿನೋಟ್ರಿಯಂ ಎಂದು ಹೇಳುತ್ತೇವೆ. ತಳಸಮುದಾಯಗಳಲ್ಲಿನ ಈ ಕೀಳರಿಮೆ ಪ್ರಾದೇಶಿಕ ವೈವಿಧ್ಯತೆ ನಾಶವಾಗಲು ಕಾರಣವಾಗಿದೆ.

ಜಾಗತೀಕರಣ ಸಂದರ್ಭದಲ್ಲಿ ತಳಸಮುದಾಯಗಳು ಪಾಶ್ಚಿಮಾತ್ಯ ಬದುಕಿಗೆ ಹೊಂದಿಕೊಳ್ಳಲು ಅವನತಿ ದೂರದಲ್ಲಿ ನಿಂತು ನೋಡಿದಾಗ ಅವುಗಳಿಗೆ ಸಂಸ್ಕೃತಿ ಶ್ರೀಮಂತಿಕೆಯಲ್ಲಿ ಶ್ರೇಷ್ಠ ಮತ್ತು ಪರಿಶಿಷ್ಟ ಕಲ್ಪನೆಯ ವರ್ಗೀಕರಣವನ್ನು ತಿಳಿಯಲು ವಿಫಲರಾಗಿದ್ದಾರೆ. ಉತ್ಪಾದನಾ ವಲಯವು ಕರಕುಶಲ/ಗುಡಿ ಕೈಗಾರಿಕೆಯಲ್ಲಿ ಶಾಶ್ವತ ಮತ್ತು ಗುಣಮಟ್ಟದ ವಸ್ತುಗಳನ್ನು ತಯಾರಿಸಿ ಜನರ ದಿನನಿತ್ಯದ ಬದುಕಿನಲ್ಲಿ ಅನಿವಾರ್ಯವಾಗಿದ್ದವು. ಕರಕುಶಲ ಕಲೆಯಲ್ಲಿ ಶ್ರೀಮಂತಿಕೆ ಹೊಂದಿದ ತಳಸಮುದಾಯಗಳು ಜಾಗತೀಕರಣಕ್ಕೆ ಒಳಗಾಗಿ ದೇಶದ ಕೃಷಿಕ ಮತ್ತು ಇತರ ವರ್ಗಗಳಿಗೆ ಬೆನ್ನೆಲುಬಾಗಿದ್ದ ಈ ವರ್ಗವು ಅನುವಂಶೀಯವಾಗಿ ಈ ವೃತ್ತಿಗಳನ್ನು ಅನುಸರಿಸಿಕೊಂಡು ಬಂದಿದ್ದವು. ಆದರೆ ಇತ್ತೀಚಿನ ದಿನಗಳಲ್ಲಿ ಕರಕುಶಲ/ವೃತ್ತಿಗಳು ಕಣ್ಮರೆಯಾಗುತ್ತಿವೆ. ಕಾರಣ ಪಾಶ್ಚಿಮಾತ್ಯರ ಬೃಹತ್ ಉತ್ಪಾದನಾ ವಲಯಗಳು ಇತರ ಮನಸ್ಥಿತಿಯನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡು ಜನರು ಸ್ವತಂತ್ರವಾಗಿ ತಮಗೆ ಬೇಕಾದ ವಸ್ತುಗಳನ್ನು ಪಡೆಯಲು ಶಕ್ತರಾಗದೆ ಅವರು ತಯಾರಿಸಿದ ವಸ್ತುಗಳಿಗೆ ಮಾರುಹೋಗಿ ಪಾಶ್ಚಿಮಾತ್ಯ ವಸ್ತುಗಳಿಗೆ ಮಾರುಹೋಗಿ ಪಾಶ್ಚಿಮಾತ್ಯರ ವಸ್ತುಗಳ ಅನುಕರಣೆಯ ನಡುವೆ ತಮ್ಮ ಉತ್ಪಾದನಾ ವಲಯವನ್ನು ನಿರ್ಲಕ್ಷಿಸುತ್ತಿದ್ದಾರೆ. ಇದರಿಂದ ಬೇಡಿಕೆ ಕಳೆದುಕೊಂಡ ಸ್ಥಳೀಯ ಉತ್ಪಾದನಾ ವಲಯದ ಗುಡಿ ಕೈಗಾರಿಕೆಗಳು ಮುಚ್ಚಲ್ಪಡುತ್ತಿವೆ.

ತಳಸಮುದಾಯಗಳಲ್ಲಿ ಬುಡಕಟ್ಟು ಅಲೆಮಾರಿಗಳು ಮತ್ತು ಇತರೆ ಹಿಂದುಳಿದ ವರ್ಗಗಳು ಸೇರಿದ್ದು ಅವರುಗಳೇ ಭಾರತೀಯ ಸಮಾಜದಲ್ಲಿ ಬಹುಸಂಖ್ಯಾತರಾಗಿದ್ದಾರೆ. ಆದರೆ ಇವರ

ರಾಜಕಾರಣದಲ್ಲಿ ಮತ ಬ್ಯಾಂಕುಗಳಾಗಿ ಅಲ್ಪಸಂಖ್ಯಾತರಾದರು. ಆಧುನಿಕ ವರ್ಣವ್ಯವಸ್ಥೆಯ ಮೇಲ್ವರ್ಗದವರ ಜೀವನವಿಧಾನ ಹಾಗೂ ಆರ್ಥಿಕ ಮೂಲವನ್ನು ಪ್ರಶ್ನಾತೀತವಾಗಿ ಅನುಕರಿಸತೊಡಗಿದ್ದಾರೆ. ಇದನ್ನೇ ನಾವು ಸಂಸ್ಕೃತಾನುಕರಣೆ ಎಂದು ಹೇಳುತ್ತೇವೆ. ಇಂತಹ ಸಂಸ್ಕೃತಾನುಕರಣೆಯಲ್ಲಿ ಪ್ರಭುತ್ವ ನೂತನ ರೀತಿಯಲ್ಲಿ ತಳಸಮುದಾಯವನ್ನು ತನ್ನ ಹತೋಟಿಯಲ್ಲಿಟ್ಟುಕೊಂಡು ತನ್ನ ತಾಳಕ್ಕೆ ತಕ್ಕಂತೆ ಕುಣಿಸುತ್ತಿದೆ.

ಜಾಗತೀಕರಣದಿಂದ ಅಲೆಮಾರಿಗಳ ಅಲೆಮಾರಿತನ ಪ್ರದರ್ಶನ ಕಲೆಗಳು ಆಹಾರಪದ್ಧತಿ ಮತ್ತು ವೈದ್ಯ ಪದ್ಧತಿಯ ಲಕ್ಷಣಗಳು ಬೇರೆಯವರ ಸ್ವತ್ತಾಗಿ ಬೃಹತ್ ವೇದಿಕೆಯಲ್ಲಿ ವಿಜೃಂಭಿಸುತ್ತಿದೆ. ಆದರೆ ವಾರಸುದಾರ ಮಾತ್ರ ಬದಲಾಗಿದ್ದಾರೆ. ಅದೇ ತರ ಇವರ ವೈದ್ಯ ಪದ್ಧತಿಯ ಜ್ಞಾನ FDI ಹಾಗೂ SEZ ನಿಂದಾಗಿ ವಿದೇಶಿ ಕಂಪನಿಗಳಿಗೆ ಮತ್ತು ಬಂಡವಾಳಶಾಹಿಗಳಿಗೆ ಪೇಟೆಂಟ್ ಆಗಿವೆ. ಅವುಗಳ ಬಳಕೆಯ ನಿರ್ಬಂಧಗಳಿಂದ ಜನಪದ ವೈದ್ಯ ಪದ್ಧತಿ ನಶಿಸುತ್ತಿದೆ. ತಳಸಮುದಾಯಗಳು ತಮ್ಮ ಪೂರ್ವಿಕರು ಹಾಕಿಕೊಟ್ಟು ಉಳಿಸಿಕೊಂಡು ಬಂದಿದ್ದ ಜ್ಞಾನವನ್ನು ನಿರ್ಲಕ್ಷಿಸಿ ಬಂಡವಾಳಶಾಹಿಗಳ ಕಡೆಗೆ ವಾಲುತ್ತಾ ತಮ್ಮ ಜ್ಞಾನವನ್ನು ಕಳೆದುಕೊಡು ಪರಕೀಯರಂತಾಗುತ್ತಿದ್ದಾರೆ. ತಮ್ಮ ಪಾರಂಪರಿಕ ಜ್ಞಾನದ ಉತ್ಪನ್ನಗಳು ಇಲ್ಲಿಂದಲೇ ಕಂಪನಿಗಳಿಗೆ ಪ್ರವೇಶ ನೀಡಿ ನೂತನ ವಿನ್ಯಾಸಗಳಲ್ಲಿ ಮತ್ತೆ ಅವರೇ ಉಪಯೋಗಿಸಿ ಅವರ ಅಧೀನಕ್ಕೆ ಒಳಗಾಗುವಂತಾಗಿದೆ.

ಋತುಮಾನಕ್ಕೆ ಅನುಗುಣವಾಗಿ ಅಲೆಮಾರಿ ಬದುಕು ನೆಲೆ ನಿಲ್ಲಿಸಿದೆ. ನೆಲೆ ನಿಲ್ಲಿಸಿದ ಅಲೆಮಾರಿತನ ಸಮುದಾಯದವರ ಬದುಕನ್ನು ಸಂಕೀರ್ಣಗೊಳಿಸಿದರೆ, ಪರಿವರ್ತನಾಶೀಲವಾಗಿದ್ದ ಬದುಕು ನಿಶ್ಚಲ ಬದುಕಿನಿಂದ ಜಾಡ್ಯಗೊಳಿಸಿದೆ. ಇದರಿಂದಾಗಿ ತಳಸಮುದಾಯಗಳು ಈ ಜಾಗತೀಕರಣ ಎಂಬ ಪಿಡುಗಿನಿಂದ ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳದೆ ಇತ್ತ ನವೀನ ಸಂಸ್ಕೃತಿಯನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳದೇ ತ್ರಿಶಂಕು ಸ್ಥಿತಿಯಲ್ಲಿ ಬದುಕು ಸಾಗಿಸುತ್ತಿದ್ದಾರೆ. ಇದು ಹೀಗೇಯೆ ಮುಂದುವರಿದರೆ ಮೂಲ ಸಂಸ್ಕೃತಿಯ ಹರಿಕಾರರು ಜ್ಞಾನ ಶ್ರೀಮಂತಿಕೆಯ ವಾರಸುದಾರರ ಪಟ್ಟ ಬಂಡವಾಳಶಾಹಿಗಳ ಕೈವಶವಾಗುವುದರಲ್ಲಿ ಯಾವುದೇ ಅನುಮಾನವಿಲ್ಲ. ಹಾಗಾಗಿಯೇ ಈ ಜಾಗತೀಕರಣದ ನಡುವೆ ತಮ್ಮತನ/ಜ್ಞಾನವನ್ನು ಹೇಗೆ ಉಳಿಸಿಕೊಂಡು ಅಭಿವೃದ್ಧಿಯೆಡೆಗೆ ಸಾಗಬೇಕು ಎಂಬ ಚಿಂತನೆಗಳು ಸಮುದಾಯಗಳ ಒಳಗಿಂದಲೇ ಆಂತರಿಕ ಪ್ರೇರಣೆಗೆ ಬರಬೇಕಾದ ಅನಿವಾರ್ಯತೆ ಪ್ರಸ್ತುತವಾಗಿದೆ.

'ಭಾರತ ದೇಶ ಶೀಘ್ರ ಪ್ರಗತಿ ಸಾಧಿಸಲು ಯೂರೋಪ್ ಮಾದರಿಯ ಅಭಿವೃದ್ಧಿ ನೀತಿ ಬೇಕು. ಆದರೆ ಈ ಬಗೆಯ ನೀತಿಯ ಜೊತೆಗೇ ಬರುವ ಆಧುನಿಕತೆಯಿಂದ ಇಂಡಿಯಾದ ವೈವಿಧ್ಯತೆ ನಾಶವಾಗಬಾರದು. ಆಧುನಿಕತೆಯ ಕಡುಮೋಹಿಯಾಗಿದ್ದ ನೆಹರು ಆದಿವಾಸಿಗಳು ತಮ್ಮ ಹಾಡು, ನೃತ್ಯ ಮತ್ತು ಸಂಸ್ಕೃತಿಗಳನ್ನು ಉಳಿಸಿಕೊಳ್ಳಬೇಕು, ನಗರದಲ್ಲಿರುವ ಆಧುನಿಕತೆಯಿಂದ ವಿಕಾರಗೊಂಡಿರುವ ಸಮುದಾಯಗಳಂತೆ ಆದಿವಾಸಿಗಳು ರೂಪಾಂತರಗೊಳ್ಳಬಾರದು, ಆಧುನೀಕತೆ ಆದಿವಾಸಿಗಳ ಜೀವನ

ಕ್ರಮದ ಮೇಲೆ ಅನೇಕ ಕೆಟ್ಟ ಪರಿಣಾಮಗಳನ್ನು ಉಂಟುಮಾಡುತ್ತದೆ ಎಂದು ನಂಬಿದ್ದರು. ಆದಿವಾಸಿಗಳು ಅಭಿವೃದ್ಧಿ ಹೊಂದಬೇಕು, ಆದರೆ ಸಂಸ್ಕೃತಿ ಮತ್ತು ಪಾರಂಪರಿಕ ಮೌಲ್ಯಗಳು ಉಳಿಯಬೇಕು. ಆದಿವಾಸಿಗಳ ಸಂಸ್ಕೃತಿಯನ್ನು ಕಾಪಾಡುವ ಅವರ ಪಾರಂಪರಿಕ ಉತ್ಪಾದನಾ ಮೂಲಗಳನ್ನು ಗೌರವಿಸುವ ಯಾವ ಆಧುನಿಕ ಆಯಾಮಗಳು ಇವರ ಮೇಲೆ ಅಡ್ಡಪರಿಣಾಮಗಳನ್ನು ಬೀರದಂತೆ ಎಚ್ಚರವಹಿಸುವ ಒಂದು ಬಗೆಯ ರಕ್ಷಣಾತ್ಮಕ ಮನೋಭಾವ ಪಂಚಶೀಲ ತತ್ವಗಳಲ್ಲಿ ಅಡಗಿವೆ. ನೆಹರು ಅತ್ಯಂತ ಮಮಕಾರದಿಂದ ಆದಿವಾಸಿಗಳ ಕುರಿತು ಮಾತನಾಡಿದ್ದಾರೆ. ಈ ಭಾವನಾತ್ಮಕ ನಿಲುವನ್ನು ಯಾರೂ ಪ್ರಶ್ನಿಸುವಂತಿಲ್ಲ. ಆದರೆ ಆದಿವಾಸಿಗಳ ಸಹಜ ಹಕ್ಕು ಬಾಧ್ಯತೆಗಳ ಕುರಿತು ನೆಹರು ಅವರ ರಾಜಕೀಯ ನಿಲುವುಗಳು ಮಾತ್ರ ಪ್ರಶ್ನಾರ್ಹವಾಗಿಯೇ ಇವೆ.[೧೫]

ಒಟ್ಟಾರೆಯಾಗಿ ಜಾಗತೀಕರಣವೆಂಬ ಒಂದು ಹೊಸ ಆಯಾಮವು ಬುಡಕಟ್ಟು ಸಮುದಾಯಗಳ ಪಾರಂಪರಿಕ ಜ್ಞಾನವನ್ನು ಕಸಿದುಕೊಂಡಿವೆ. ಅವರ ಜ್ಞಾನವನ್ನು ನವೀನ ವಿನ್ಯಾಸದೊಂದಿಗೆ ವಸ್ತುಗಳನ್ನು ಉತ್ಪಾದಿಸಿ ಅದಕ್ಕೆ ತನ್ನ ಸ್ವಾಮ್ಯದ ಹಕ್ಕನ್ನು ಪಡೆದುಕೊಂಡಿವೆ. ಅಂತಹ ಉತ್ಪಾದನೆಯಾದ ವಸ್ತುಗಳಿಗೆ ವಿಶ್ವಮಾರುಕಟ್ಟೆಯನ್ನು ಕಂಡುಕೊಂಡಿವೆ. ತಾನು ಉತ್ಪಾದಿಸಿದ ಮೂಲ ಪಾರಂಪರಿಕ ವಸ್ತುವಿನ ನವೀನ ವಿನ್ಯಾಸದಿಂದ ಮೂಲ ತಂತ್ರಜ್ಞಾನ ಪಡೆದಂತಹ ಸಮುದಾಯಗಳಿಗೆ ಆ ವಸ್ತುವನ್ನು ಮಾರಾಟ ಮಾಡಿ ಅದರಿಂದ ಲಾಭದ ಪ್ರಮಾಣವನ್ನು ಹೆಚ್ಚಿಸಿಕೊಳ್ಳವಲ್ಲಿ ಯಶಸ್ಸು ಕಂಡಿವೆ. ಇದರಿಂದ ದುಡಿಯುವ ವರ್ಗ ಕೈ ಕಟ್ಟಿ ನಿಲ್ಲುವಂತಹ ಪರಿಸ್ಥಿತಿ ಎದುರಾಗಿದೆ. ಬುಡಕಟ್ಟುಗಳು ಕಂಡುಕೊಂಡಂತಹ ಉತ್ಪಾದನಾಕ್ರಮವನ್ನು ತನ್ನದಾಗಿಸಿಕೊಂಡಿದೆ. ಜಾಗತೀಕರಣದ ಫಲವಾಗಿ ಯಾವುದೇ ಹೊಸ ಯೋಜನೆಗಳು ಬಂದರೂ ಸಹ ಇದರಿಂದ ಅನುಕೂಲಗಳಿಗಿಂತ ಅನನುಕೂಲಗಳೇ ಹೆಚ್ಚು. ಸರ್ಕಾರ ಅಭಿವೃದ್ಧಿ ಹೆಸರಿನಲ್ಲಿ ಅಭಿವೃದ್ಧಿ ಯೋಜನೆಗಳನ್ನು ಅಳವಡಿಸಿಕೊಂಡರೂ ಅದರಿಂದ ಅಭಿವೃದ್ಧಿಯಾಗುವುದು ನಿಜ, ಆದರೆ ಈ ಅಭಿವೃದ್ಧಿಯ ಫಲಕ್ಕಿಂತ ಅದರಿಂದ ಆಗುವ ದುಷ್ಪರಿಣಾಮಗಳೇ ಹೆಚ್ಚಾಗುತ್ತಿವೆ. ಇಂತಹ ಅಭಿವೃದ್ಧಿಯ ನೆಪದಲ್ಲಿ ನೆಲೆ ಕಂಡುಕೊಳ್ಳುವುದಕ್ಕಿಂತ ಕಳೆದುಕೊಂಡವರೇ ಹೆಚ್ಚಾಗಿದ್ದಾರೆ. ಕಾರಣ ಈ ಅಭಿವೃದ್ಧಿಯ ಹೆಸರಿನಲ್ಲಿ ರಸ್ತೆ, ರೈಲ್ವೆ ಹಳಿಗಳನ್ನು ಹಾಕುವುದು, ಬೃಹತ್ ಕಾರ್ಖಾನೆಗಳ ನಿರ್ಮಾಣ ಹೀಗೆ ಹಲವಾರು ಯೋಜನೆಗಳಿಗೆ ಸರ್ಕಾರ ರೈತರ ಭೂಮಿಯನ್ನು ಮತ್ತು ಕಾಡನ್ನು ಸಾವಿರಾರು ಎಕರೆಗಟ್ಟಲೆ ನಾಶ ಮಾಡಿತು. ಕೃಷಿ ಭೂಮಿ ಹಾಗೂ ಅರಣ್ಯವನ್ನು ನಂಬಿಕೊಂಡಿದ್ದಂತಹ ಬುಡಕಟ್ಟು ಸಮುದಾಯಗಳು ತಮ್ಮ ನೆಲೆ ಕಳೆದುಕೊಂಡು ಬೀದಿಗೆ ಬೀಳುವ ಸನ್ನಿವೇಶ ಎದುರಾಯಿತು. ತಮ್ಮ ಪಾರಂಪರಿಕ ಕಸುಬನ್ನು ಮುಂದುವರಿಸಲಾಗದೇ, ಜಾಗತೀಕರಣದ ಹೊಸ ತಂತ್ರಜ್ಞಾನದ ಸ್ಪರ್ಧೆಗೆ ಹೊಂದಿಕೊಳ್ಳಲಾಗದೆ ತಮ್ಮ ಮೂಲ ಸಾಂಪ್ರದಾಯಿಕ ಉತ್ಪಾದನಾ ವಸ್ತುಗಳಿಗೆ ಬೇಡಿಕೆ ಇಲ್ಲದೆ ಅಂತಹ ವಸ್ತುಗಳ ಉತ್ಪಾದನೆಯನ್ನೇ ನಿಲ್ಲಿಸಿ, ನಗರ ಪ್ರದೇಶಗಳಿಗೆ ವಲಸೆ ಹೋಗುವಂತಹ ಸ್ಥಿತಿ ಬಂದೆರಗಿದೆ.

ಜಾಗತೀಕರಣವು ಬುಡಕಟ್ಟು ಸಮುದಾಯಗಳಿಗೆ ಅಪಾಯ ಮತ್ತು ಅನಿವಾರ್ಯತೆ ಎರಡನ್ನೂ ಒದಗಿಸಿಕೊಟ್ಟಿದೆ. ಏಕೆಂದರೆ ಈ ಹೊಸ ಪ್ರಕ್ರಿಯೆಗೆ ಹೊಂದಿಕೊಂಡರೆ ಅಪಾಯ ಹಾಗೂ

ಹೊಂದಿಕೊಳ್ಳದೇ ಹೋದರೆ ಅದರ ಅನಿವಾರ್ಯತೆ ಹಾಗೂ ಅದರ ತೀವ್ರತೆ ಎಷ್ಟು ಎಂದು ತಿಳಿಯುತ್ತದೆ. ಅನಿವಾರ್ಯವಾಗಿ ಹೊಂದಿಕೊಳ್ಳುವ ಸನ್ನಿವೇಶವನ್ನು ಎಲ್ಲಾ ಹಿಂದುಳಿದ ಮತ್ತು ಮುಂದುವರಿಯುತ್ತಿರುವ ರಾಷ್ಟ್ರಗಳು ಎದುರಿಸುತ್ತಿದ್ದು, ಇಲ್ಲಿ ನೆಲೆಸಿರುವ ಬುಡಕಟ್ಟು ಸಮುದಾಯಗಳಿಗೆ ಇದರಿಂದ ಅತ್ಯಂತ ಕೆಟ್ಟ ಪರಿಣಾಮಗಳನ್ನು ಎದುರಿಸುವ ಸನ್ನಿವೇಶಕ್ಕೆ ಒಳಗಾಗಿವೆ. ಸ್ವದೇಶಿಯ ಯಾವುದೋ ವಸ್ತುವನ್ನು ತನ್ನ ಸ್ವಂತ ತಂತ್ರಜ್ಞಾನದಿಂದ ಉತ್ಪಾದಿಸಬೇಕೆಂದರೂ ಸಹ ಆ ವಸ್ತುವಿನ ಉತ್ಪಾದನೆಯ ಸ್ವಾಮ್ಯದ ಹಕ್ಕನ್ನು ಪಡೆದಿರುವ ಯಾವದೋ ಬಹುರಾಷ್ಟ್ರೀಯ ಕಂಪನಿಯ ಅಪ್ಪಣೆ ಪಡೆಯದೆ ಉತ್ಪಾದಿಸುವಂತಿಲ್ಲ. ಕಾರಣ ಸ್ವದೇಶಿ ಬುಡಕಟ್ಟು ಸಮುದಾಯದ ಪಾರಂಪರಿಕ ಹಿನ್ನೆಲೆಯುಳ್ಳ ತಂತ್ರಜ್ಞಾನಕ್ಕೆ ಯಾವನೋ ಒಬ್ಬ ಅಥವಾ ಯಾವುದೇ ಒಂದು ಸಂಸ್ಥೆ ಆ ವಸ್ತುವಿನ ಉತ್ಪಾದನೆಯ ಸ್ವಾಮ್ಯತೆಯ ಹಕ್ಕನ್ನು ಪಡೆದಿರುತ್ತದೆ.

**ಅಡಿ ಟಿಪ್ಪಣಿಗಳು**

೧. ಆದಿವಾಸಿ ಆಖ್ಯಾನ, ಬಹುಸಂಸ್ಕೃತಿಗಳ ಆರ್ಥಿಕ ಅಭಿವೃದ್ಧಿ, ಅನು. ಪ್ರಭಾಕರ ಎ.ಎಸ್, ಪು.ಸಂಖ್ಯೆ, ೫೧೩, ೨೦೦೬,

೨. Anand Teltumbde, Research article, Published July-೧, ಪು, ೧೫, ೨೦೧೦

೩. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪು, ೨೩. ೨೦೦೦.

೪. ಪ್ರಭಾಕರ ಎ.ಎಸ್. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ವಿದ್ಯಾರಣ್ಯ, ೨೦೦೪,

೫. ಶಂಕರ್‌ರಾವ್ ಚ.ನ. ಸಮಾಜಶಾಸ್ತ್ರ ದರ್ಶನ ಭಾಗ–೧,ಪು.ಸಂ.೧೨೫, ಜೈ ಭಾರತ ಪ್ರಕಾಶನ, ೨೦೧೪.

೬. ಅದೇ, ಪು, ಸಂ, ೧೨೫.

೭. Bhagawati Jagadeesh, In defence of Globalisation, Oxford, New York,Oxford University Press, Page, ೧೫, ೨೦೦೪.

೮. ಶೀಲಾ. ಎಲ್. ಕ್ರೌಚರ್, ಗ್ಲೋಬಲೈಜೇಷನ್ ಆ್ಯಂಡ್ ಬಿಲಾಂಗಿಂಗ್ ದಿ ಪಾಲಿಟಿಕ್ಸ್ ಐಡೆಂಟಿಟಿ ಇನ್ ಎ ಚೇಂಜಿಂಗ್ ವರ್ಲ್ಡ್ ರೋಮನ್ ಆ್ಯಂಡ್ ಲಿಟಲ್ ಫೀಲ್ಡ್, ಪು, ೧೦. ೨೦೦೪.

೯. En.wikipidia.org

೧೦. ಪ್ರಭಾಕರ ಎ.ಎಸ್. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ವಿದ್ಯಾರಣ್ಯ, ಪು, ೪೫, ೨೦೦೪.

೧೧. ಶಂಕರರಾವ್. ಚ.ನ., ಸಮಾಜಶಾಸ್ತ್ರ ದರ್ಶನ, ಭಾಗ–೩, ಜೈ ಭಾರತ್ ಪ್ರಕಾಶನ, ಮಂಗಳೂರು,– ೨೦೧೨, ಪು.೮೨೦.

೧೨. ಪ್ರಭಾಕರ ಎ.ಎಸ್., ಆದಿವಾಸಿ ಆಖ್ಯಾನ, ಅಲೆಮಾರಿಗಳ ಶಾಪಗ್ರಸ್ತ ಪಯಣ, ಪು. ೪೨೫, ೨೦೦೮.

೧೩. ನಾಗೇಶ್ ಹೆಗಡೆ, ಬಡತನ ಆಧುನೀಕರಣ, ಅಭಿವೃದ್ಧಿಯ ಅಂದಯುಗ, ಭೂಮಿ ಬುಕ್ಸ್, ಬೆಂಗಳೂರು, ಪು, ೧೧, ೨೦೧೦.

೧೪. ಅದೇ, ಪು.೧೫.

೧೫. ಆದಿವಾಸಿ ಆಖ್ಯಾನ, ಬುಡಕಟ್ಟು ಅಭಿವೃದ್ಧಿ, ನೆಹರು ಚಿಂತನೆಗಳು, ಅನು. ಪ್ರಭಾಕರ.ಎ.ಎಸ್, ಪು.ಸಂಖ್ಯೆ, ೪೪೭, ೨೦೦೮.

ಅಧ್ಯಾಯ : ಮೂರು

# ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಸಮಾಜ ಮತ್ತು ಸಂಸ್ಕೃತಿ

೩.೧. ಪೀಠಿಕೆ

೩.೨. ಸಂಸ್ಕೃತಿ

೩.೩. ಸೃಷ್ಟಿ ಪುರಾಣಗಳ ಪರಿಚಯ

೩.೪. ಕಾಡುಗೊಲ್ಲರ ಬಗ್ಗೆ ಇರುವ ಐತಿಹ್ಯಗಳು

೩.೫. ಕಾಡುಗೊಲ್ಲರ ಕಥೆ ಮತ್ತು ಕಾವ್ಯಗಳು

೩.೬. ಕಾಡುಗೊಲ್ಲರ ಇತರ ಸಾಹಿತ್ಯ ಪ್ರಕಾರಗಳು, ಭಾಷೆ ಮತ್ತು ಸಾಂಸ್ಕೃತಿಕ ಕಲೆಗಳು

೩.೭. ಕಾಡುಗೊಲ್ಲರ ಸಾಮಾಜಿಕತೆ

೩.೮. ಕಾಡುಗೊಲ್ಲರ ಕಟ್ಟೆಮನೆಗಳು ಮತ್ತು ಗುಡಿಕಟ್ಟುಗಳು

೩.೯. ಕಾಡುಗೊಲ್ಲರ ಸಂಸ್ಕೃತಿ ದೈವ ಮತ್ತು ಆಚರಣೆಗಳು

೩.೧೦. ಕಾಡುಗೊಲ್ಲರ ಹಬ್ಬಗಳು

## ಅಧ್ಯಾಯ : ಮೂರು

# ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಸಮಾಜ ಮತ್ತು ಸಂಸ್ಕೃತಿ

### ೩.೧. ಪೀಠಿಕೆ.

ಮೂಲತಃ ಬುಡಕಟ್ಟು ಸಮುದಾಯವಾದ ಕಾಡುಗೊಲ್ಲರು ಅಪ್ಪಟ ಸಂಪ್ರದಾಯವಾದಿಗಳು. ತಮ್ಮ ಪ್ರಾಣವಾಯುವಿನಷ್ಟೆ ತಮ್ಮ ಆಚರಣೆಗಳು ಹಾಗೂ ತಮ್ಮ ಪಶುಗಳ ಪಾಲನೆಗಾಗಿ ಹುಲ್ಲುಗಾವಲುಗಳ ಸಮೀಪ ತಮ್ಮ ಹಟ್ಟಿಗಳನ್ನು ನಿರ್ಮಿಸಿಕೊಂಡು ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಊರುಗಳನ್ನು ತೊರೆದು ಪ್ರತ್ಯೇಕಿತರಾಗಿ ಊರ ಹೊರವಲಯದ ಬೆಟ್ಟ-ಗುಡ್ಡ, ಕಾಡು-ಕಣಿವೆಗಳಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ನಾಗರಿಕ ಪ್ರಪಂಚವನ್ನೇ ಮರೆತವರು. ಕೃಷಿ ಮತ್ತು ಪಶುಸಂಗೋಪನೆ ವೃತ್ತಿಯಿಂದ ತಮ್ಮ ಜೀವನೋಪಾಯವನ್ನು ಕಂಡುಕೊಂಡಿದ್ದ ಇವರು ಹಗಲೆಲ್ಲ ದುಡಿದು ದಣಿದು ಭೂದೇವಿಯನ್ನು ಹಾಸಿಗೆಯನ್ನಾಗಿ ಮಾಡಿ ಆಕಾಶವನ್ನು ಹೊದ್ದಿಕೆಯನ್ನಾಗಿ ಮಾಡಿ ಕಾಡಿನಲ್ಲೇ ಮಲಗಿ ಎದ್ದ ಕಟ್ಟಾ ಬುಡಕಟ್ಟು ಮೂಲನಿವಾಸಿಗಳು. ಕಾಡಿನಲ್ಲೆ ದೊರೆಯುವ ಹಣ್ಣು ಹಂಪಲುಗಳು, ಗೆಡ್ಡೆ, ಗೆಣಸು, ಹಾಲು ಮೊಸರುಗಳನ್ನು ಒಳಗೊಂಡಂತೆ ರಾಗಿ ಉಂಡು ರೋಗವಿಲ್ಲದಂತೆ ಬಾಳಿದ ಅಪ್ಪಟ್ಟ ದೇಶಿ ಮಕ್ಕಳು. ತುಂಡು ಉಡುಗೆ ಉಟ್ಟು ಜೀವನ ಸಾಗಿಸಿದ ಸರಳಜೀವಿಗಳು. ಇಂತಹ ಜೀವನವಿಧಾನ ಅಳವಡಿಸಿಕೊಂಡಿದ್ದ ಬುಡಕಟ್ಟು ಸಮುದಾಯವಾದ ಕಾಡುಗೊಲ್ಲರ ಸಾಮಾಜಿಕ ಜೀವನದಲ್ಲಿ ಆಧುನಿಕ ಶಿಕ್ಷಣ, ಕೈಗಾರೀಕರಣ, ನಗರೀಕರಣ, ಪಾಶ್ಚಿಮಾತ್ಯಿಕರಣ ಪ್ರಕ್ರಿಯೆಗಳು ಪ್ರವೇಶಗೊಂಡು ಅವರ ಪಾರಂಪರಿಕ ಜೀವನವಿಧಾನದ ಪ್ರತ್ಯೇಕತೆಯನ್ನು ಪ್ರಶ್ನಿಸಲು ಮುಂದಾದ ಸನ್ನಿವೇಶಗಳಲ್ಲಿಯೂ ಸಹ ಅವರ ಸಾಂಪ್ರದಾಯಿಕತೆಗೆ ತೊಂದರೆಯಾದರೂ ಅವರ ಕಾಯಕ ಹಾಗೂ ಆಚಾರ ವಿಚಾರದ ಬದಲಾವಣೆಗಳನ್ನು ಬದಲಾಯಿಸಿಕೊಳ್ಳದೆ ಇನ್ನೊಂದು ಕಡೆ ಆಧುನಿಕತೆಗೆ ಒಗ್ಗಿಕೊಳ್ಳದೆ ಅವರ ತನವನ್ನು ಉಳಿಸಿಕೊಂಡು ತಮ್ಮ ಜೀವನ ನಿರ್ವಹಣೆಯಲ್ಲಿ ತೊಡಗಿದ್ದಾರೆ. ಜಾಗತೀಕರಣ ಮತ್ತು ಆಧುನೀಕರಣ ಎಂಬ ಈ ಎರಡು ಪ್ರಕ್ರಿಯೆಗಳು ಯಾವುದೇ ಒಂದು ಸಮಾಜ ಹಾಗೂ ಸಂಸ್ಕೃತಿಯಲ್ಲಿ ಸೇರಿಕೊಂಡಾಗ ಅದರ ಪ್ರಭಾವಕ್ಕೆ ಸಮುದಾಯಗಳು ಒಗ್ಗಿಕೊಳ್ಳಬೇಕಾದರೆ ಅದು ಅಷ್ಟೊಂದು ಸುಲಭದ ಮಾತಲ್ಲ. ಕಾರಣ ಈ ಆಧುನಿಕತೆ ಮತ್ತು ಜಾಗತೀಕರಣದ ಒಳಸುಳಿಗೆ ಸಿಕ್ಕಿಹಾಕಿಕೊಂಡಿರುವ

ಬುಡಕಟ್ಟು ಸಮುದಾಯ ತಾನು ಕಂಡುಕೊಂಡ ನೆಲೆಯನ್ನು ಕಳೆದುಕೊಂಡಿರುವುದೇ ಹೆಚ್ಚಾಗಿದೆ. ಅಭಿವೃದ್ಧಿಯ ನೆಪದಲ್ಲಿ ಬುಡಕಟ್ಟು ಪಶುಪಾಲಕರು ತಮ್ಮ ಪಶುಗಳ ಅಭಿವೃದ್ಧಿಗಾಗಿ ಅವಲಂಬಿಸಿದ ಹುಲ್ಲುಗಾವಲುಗಳೆಲ್ಲವೂ ಬಂಡವಾಳಶಾಹಿಗಳ ಕಪಿಮುಷ್ಟಿಯಲ್ಲಿ ಸಿಲುಕಿಕೊಂಡಿವೆ.

ಈ ಹಿನ್ನೆಲೆಯಲ್ಲಿ ಕಾಡುಗೊಲ್ಲ ಸಮುದಾಯವೂ ಸಹ ಜಾಗತೀಕರಣದ ಕಪಿಮುಷ್ಟಿಯಲ್ಲಿ ಸಿಲುಕಿಕೊಂಡು ತನ್ನ ಮೂಲ ಕಸುಬು ಪಶುಪಾಲನೆಯನ್ನು ಕಳೆದುಕೊಂಡು ಇನ್ನೊಂದೆಡೆ ಕೃಷಿಗೂ ಹೊಂದಿಕೊಳ್ಳದೇ ಪಶುಪಾಲನೆಯನ್ನು ಮುಂದುವರಿಸದೆ ನೀರಿನಿಂದ ಹೊರ ತೆಗೆದ ಮೀನಿನಂತೆ ಆಗಿದೆ. ಇವರಿಗೆ ಆಧುನಿಕ ಜೀವನಶೈಲಿಯ ಬಗ್ಗೆ ಯಾವುದೇ ಅರಿವಿಲ್ಲದೆ ತಮ್ಮ ಮೂಲ ಪಾರಂಪರಿಕತೆಯನ್ನು ಸ್ವಲ್ಪಮಟ್ಟಿಗೆ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಇಂದಿಗೂ ಸಹ ಕಾಡುಗೊಲ್ಲರ ಕೆಲವು ಹಟ್ಟಿಗಳಿಗೆ ಆಧುನಿಕತೆಯ ಸೊಗಡು ತಲುಪಿಲ್ಲ. ಹಿಂದಿನ ಹಟ್ಟಿಗಳ ಲಕ್ಷಣ ಹೇಗಿತ್ತೋ ಹಾಗೆಯೇ ಇದೆ. ಮೂಲಭೂತ ಸೌಲಭ್ಯಗಳ ಕೊರತೆ ಕಾಡುಗೊಲ್ಲರ ಹಟ್ಟಿಗಳಲ್ಲಿ ಕಾಣುತ್ತಿದ್ದೇವೆ. ಕುಡಿಯುವ ನೀರಿನ ಸೌಲಭ್ಯ, ಶೌಚಾಲಯಗಳು ಇಲ್ಲದೆ ಇರುವುದು, ಪಕ್ಕಾ ಮನೆಗಳ ಕೊರತೆ, ಉತ್ತಮ ರಸ್ತೆಗಳ ಕೊರತೆ ಇಲ್ಲದೆ ಇರುವುದನ್ನು ಇಂತಹ ಜಾಗತೀಕರಣ ಪರಿಸ್ಥಿತಿಯಲ್ಲಿಯೂ ಕಾಡುಗೊಲ್ಲರ ಹಟ್ಟಿಗಳು ಮೂಲಭೂತ ಸೌಲಭ್ಯಗಳ ಕೊರತೆಯನ್ನು ಅನುಭವಿಸುತ್ತಿರುವುದನ್ನು ಕಾಣುತ್ತಿದ್ದೇವೆ. ಬುಡಕಟ್ಟು ಸಮುದಾಯದ ಸಂಸ್ಕೃತಿ, ಆಚಾರ ವಿಚಾರ ಹೆಚ್ಚು ಶ್ರೀಮಂತವಾಗಿದ್ದರೂ ಇವರು ಈ ಆಧುನಿಕತೆ ಹಾಗೂ ಜಾಗತೀಕರಣದಿಂದ ಹೆಚ್ಚು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಬಡತನ, ಅನಕ್ಷರತೆ, ವಸತಿಸೌಕರ್ಯ, ಶೋಷಣೆಗಳು ಮತ್ತು ಸಮಸ್ಯೆಗಳು ಅವರನ್ನು ಹೆಚ್ಚಾಗಿ ತೊಂದರೆಗೀಡುಮಾಡಿವೆ. ಮೂಲ ಕಸುಬನ್ನು ಮುಂದುವರಿಸಲಾಗದೆ ಹೊಸ ಕಸುಬುಗಳಿಗೆ ಹೊಂದಿಕೊಳ್ಳಲಾಗದೆ ಶೋಚನೀಯ ಪರಿಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ಇದಕ್ಕೆ ಕಾಡುಗೊಲ್ಲರು ಸಹ ಹೊರತಾಗಿಲ್ಲ. ಕಾಡುಗೊಲ್ಲರ ಮೂಲ ನೆಲೆಯನ್ನು ಒಕ್ಕಲೆಬ್ಬಿಸುವಲ್ಲಿ ಈ ಜಾಗತೀಕರಣದ ಪಾತ್ರ ತುಂಬಾ ಹಿರಿದಾಗಿದೆ.

ಕಾಡುಗೊಲ್ಲರ ಉಡುಪು, ವೃತ್ತಿ, ಆಹಾರಕ್ಕೆ ಸಂಬಂಧಿಸಿದಂತೆ ಯಾವ ರೀತಿಯಾಗಿದ್ದವು ಎಂಬುದನ್ನು ಈ ಕೆಳಕಂಡಂತೆ ನೋಡಬಹುದು.

**ಉಡುಪು**

ಕಾಡುಗೊಲ್ಲ ಬುಡಕಟ್ಟು ಸಮುದಾಯದ ಉಡುಪು ಸರಳವಾದವುಗಳಾಗಿದ್ದು, ಬುಡಕಟ್ಟಿನ ಎಲ್ಲಾ ಲಕ್ಷಣಗಳನ್ನು ಎತ್ತಿ ತೋರಿಸುತ್ತವೆ. ಇವರ ಉಡುಪುಗಳು ದುಬಾರಿ ಬೆಲೆಯವುಗಳಾಗಿರದೆ ಸಾಮಾನ್ಯರಿಗೆ ನಿಲುಕುವ ಹತ್ತಿ ಬಟ್ಟೆಗಳಾಗಿರುತ್ತವೆ. ನಿಸರ್ಗದ ಮಡಿಲಲ್ಲಿ ಜನಿಸಿದಾಗಿನಿಂದ ಗಾಳಿ, ಮಳೆ, ಚಳಿ, ಬಿಸಿಲೆನ್ನದೆ ಪಶುಸಂಗೋಪನೆ, ಕುರಿಸಾಕಾಣಿಕೆ, ವ್ಯವಸಾಯ ಮುಂತಾದ ದೈಹಿಕ ಶ್ರಮ ಆಧಾರಿತ ವಿಶ್ರಾಂತಿರಹಿತ ದುಡಿಮೆಯಲ್ಲಿ ತೊಡಗಿರುವ ಇವರಿಗೆ ಈ ಉಡುಪುಗಳು ಸ್ವಲ್ಪ ಪ್ರಮಾಣದ ರಕ್ಷಣೆಗೆ ಸಹಾಯಕವಾಗಿರುತ್ತದೆ.

ಈ ಬಗೆಯ ಸಾಂಪ್ರದಾಯಿಕ ಸರಳ ಉಡುಗೆಯನ್ನು ಮೈಗೂಡಿಸಿಕೊಂಡಿರುವ ಇವರು ತಮ್ಮ ಉಡುಗೆ ತೊಡುಗೆಗಳಲ್ಲಿ ವಿಶೇಷತೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಇವರ ಉಡುಪು ಇವರ ಸಂಸ್ಕೃತಿಯನ್ನು ಮತ್ತು ಈ ಸಮಾಜದ ವಿವಿಧ ಕ್ಷೇತ್ರಗಳ ಸ್ಥಾನಮಾನವನ್ನು ಗುರುತಿಸುವ ಸಾಧನದಂತಿದೆ. ಕಾಡುಗೊಲ್ಲರಲ್ಲಿ ಈ ಮೊದಲು ಮೈತುಂಬ ಬಟ್ಟೆ ಹಾಕಿಕೊಳ್ಳುವ ಪರಂಪರೆ ಇರಲಿಲ್ಲ ಎಂಬ ಇವರು ಬುಡಕಟ್ಟು ಜನಾಂಗದವರು ಎಂಬುದನ್ನು ಸೂಚಿಸುತ್ತದೆ. "ಕಾಡುಗೊಲ್ಲರಲ್ಲಿ ಬಹುಪಾಲು ಜನ ಕಪ್ಪು ಬಣ್ಣದವರು, ಕೆಲವರು ಕಂದು ಮಿಶ್ರಿತವಾದ ಕಪ್ಪು ಬಣ್ಣದವರಾಗಿದ್ದಾರೆ. ಸಾಮಾನ್ಯವಾಗಿ ಗಂಡಸರ ಮತ್ತು ಹೆಂಗಸರ ಉಡುಪು ಸರಳವಾಗಿರುತ್ತದೆ. ಮುದುಕರು ಒಂದು ಲಂಗೋಟಿಯನ್ನು ಕಟ್ಟಿ ಕಂಬಳಿಯನ್ನು ಹೊದ್ದಿರುತ್ತಾರೆ. ಕಾಲಿಗೆ ಮಾತ್ರ ಚಪ್ಪಲಿ ಇದ್ದೇ ಇರಬೇಕು. ಕೆಲವರು ಲಂಗೋಟಿ ಕಟ್ಟಿ ಮೇಲೆ ಉದ್ದವಾದ ಅಂಗಿಯನ್ನು ತೊಟ್ಟಿರುತ್ತಾರೆ. ಪಾದದವರೆಗೆ ಕಚ್ಚೆಪಂಚೆ ಉಡುವವರು ಕಡಿಮೆ, ಆದರೆ ಬಹುಪಾಲು ಜನ ಮಂಡಿಯವರೆಗೆ ಕಚ್ಚೆ ಹಾಕುತ್ತಾರೆ".[೧] ಪುರುಷರು ನಿಲುವಂಗಿ ಮೊಣಕಾಲಿನವರೆಗೆ ಇಳಿಬಿದ್ದ ಪಟಾಪಟೆ ನಿಕ್ಕರ್, ತಲೆಗೆ ರುಮಾಲು, ಹೆಗಲ ಮೇಲೊಂದು ಕರಿ ಬಿಳಿ, ಚರ್ಮದ ಪಾದರಕ್ಷೆಗಳನ್ನು ಧರಿಸುತ್ತಿದ್ದರು.

"ಕಾಡುಗೊಲ್ಲ ಮಹಿಳೆಯರು ಬಲಗೈಗೆ ಹಾಕಿಕೊಳ್ಳುವ ಹಿತ್ತಾಳೆಯ ಅಗಲವಾದ ಬಳೆಯನ್ನು ಗೊಲ್ಲಕಡಗವೆಂದು ಕರೆಯಲಾಗುತ್ತದೆ. ಗೊಲ್ಲಕಡಗದಲ್ಲಿ 'ಕುಪ್ಪಿಕಡಗ', 'ಕರಬಾನುಕಡಗ'ವೆಂದು ಎರಡು ಬಗೆಗಳಿವೆ. 'ಕುಪ್ಪಿಕಡಗ'ದಲ್ಲಿ ಮೇಲ್ಭಾಗದಲ್ಲಿ ಒಂದು ಸಣ್ಣ ಗುಂಡಾಕಾರದ ಉಬ್ಬು ಇರುತ್ತದೆ. ಉಳಿದೆಲ್ಲಾ ಬಾಗ ಖಾಲಿ ಇರುತ್ತದೆ. ಇದನ್ನು 'ಜಕಣಿ' ಎಂದು ಕರೆಯಲಾಗುವುದು, ಕರಬಾನು ಕಡಗದಲ್ಲಿ ಮೊಸರಿನ ಬಾನಿ, ಕಡಗೋಲು, ಹಾಲರವಿ ಚಿತ್ರಗಳಿರುತ್ತವೆ. ಗೊಲ್ಲರ ಪಶುಪಾಲನೆ-ಹೈನುಗಾರಿಕೆಗೆ ಹಿಡಿದ ಕೈಗನ್ನಡಿಯಾಗಿ ಈ ಚಿತ್ರಗಳು ಬಿಂಬಿತವಾಗಿವೆ. ಕೋಲಾಟದ ಪದವೊಂದರಲ್ಲಿ ಕಡಗದ ಪ್ರಸ್ತಾಪ ಹೀಗೆ ಬರುತ್ತದೆ.

ಆಲು ಮಾರುತ ಬಂದಾಳಣ್ಣ

ನೀಲಿ ನಾಮದ ಗೊಲ್ಲತಿ

ಆಲು ಮಾರಿದ ಸುಂಕ ಕೇಳಿದರೆ

ಗೊಲ್ಲ ಕಡಗ ತೋರಿದಳು"[೨]

"ಗೊಲ್ಲ ಹೆಂಗಸರು ಬಲಗೈಗೆ 'ಗೊಲ್ಲಕಡಗ'ವನ್ನು ಹಾಕುತ್ತಾರೆ. ಅಗಲವಾದ ಹಿತ್ತಾಳೆಯ ತಗಡಿನ ಬಳೆ ಇದಾಗಿದ್ದು ಇದನ್ನು 'ಕೃಷ್ಣ ಕಡಗ' ಎಂದೂ ಕರೆಯುತ್ತಾರೆ. ಈ ಕಡಗದ ಮೇಲೆ ಮೂಡಿರುವ ಚಿತ್ರ ಗೊಲ್ಲಸಂಸ್ಕೃತಿಯನ್ನು ಪೂರ್ಣವಾಗಿ ಬಿಂಬಿಸುವಂತಿದೆ. ಕಡಗದ ಮುಂಬಾಗದಲ್ಲಿ ಹಾಲು ಅರಿವೆಗಳ ಹಾಲುಹೊರುವ ಕಾವಡಿಯನ್ನು ಸಂಕೇತಿಸುವ ಚಿತ್ರಗಳನ್ನು ಬಿಡಿಸಲಾಗಿದೆ. ಮುಂಬಾಗದಲ್ಲಿ ಕಡೆಗೋಲಿನಿಂದ ಮೊಸರನ್ನು ಕಡೆಯುವ ಚಿತ್ರವಿದ್ದರೆ ಹಿಂಬಾಗದಲ್ಲಿ ಹಾಲು ಅರಿವೆಯನ್ನು ಹೊತ್ತು ತರುವ ಹಾಲುಕಂಬಿಯ ಚಿತ್ರವಿದೆ. ಇದು ಗೊಲ್ಲಸಂಸ್ಕೃತಿಯನ್ನು ಸಾರುವ ಚಿತ್ರದಂತಿದೆ."[೩] ಸಂಪ್ರದಾಯಸ್ಥ

ಮಹಿಳೆಯರು ಕುಪ್ಪಸ ಧರಿಸುತ್ತಿರಲಿಲ್ಲ. ಇವರ ಉಡುಪುಗಳು ಸರಳವಾದವುಗಳಾಗಿದ್ದು ಪಟ್ಟೆ ಸೀರೆ, ಲಂಗ, ದಾವಣಿ ಧರಿಸುತ್ತಿದ್ದರು. ಆದರೆ ಪ್ರಸ್ತುತ ದಿನಗಳಲ್ಲಿ ಕಾಡುಗೊಲ್ಲರ ಸ್ತ್ರೀ-ಪುರುಷರ ಉಡುಪುಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದು ನಾಗರಿಕ ಮತ್ತು ಪಾಶ್ಚಿಮಾತ್ಯ ಉಡುಪುಗಳ ಬಗ್ಗೆ (ಕಡೆಗೆ) ಒಲವುಳ್ಳವರಾಗಿದ್ದಾರೆ. ಇತ್ತೀಚಿನ ದಿನಗಳಲ್ಲಿ ಆಧುನಿಕತೆಯ ಪ್ರಭಾವದಿಂದಾಗಿ ಕಾಡುಗೊಲ್ಲ ಯುವಕರು ನಗರದ ಜೀವನಶೈಲಿಯಂತೆ ಪ್ಯಾಂಟು, ಶರ್ಟ್, ಟೀ-ಶರ್ಟ್‌ಗಳನ್ನೂ, ಯುವತಿಯರು ಸೀರೆ, ರವಿಕೆ, ಮಿಡಿ, ಚೂಡಿದಾರದಂತಹ ಉಡುಪುಗಳನ್ನು ಧರಿಸುತ್ತಿರುವುದು ವ್ಯಾಪಕವಾಗಿ ಕಂಡುಬರುತ್ತಿದೆ. ಆದರೂ ಗ್ರಾಮೀಣ ಪ್ರದೇಶಗಳಲ್ಲಿ ಕಾಡುಗೊಲ್ಲರ ಸಾಂಪ್ರದಾಯಿಕ ಉಡುಪುಗಳು ಇನ್ನೂ ಜೀವಂತವಾಗಿವೆ.

## ವೃತ್ತಿ

ಸರಳ ಜೀವನವಿಧಾನವನ್ನು ಅನುಸರಿಸಿಕೊಂಡು ಬಂದಿದ್ದ ಬುಡಕಟ್ಟು ಲಕ್ಷಣಗಳನ್ನು ಹೊಂದಿರುವ ಸಮುದಾಯವಾದ ಕಾಡುಗೊಲ್ಲರು ತಮ್ಮ ಜೀವನಾವಶ್ಯಕ ವೃತ್ತಿಯಾಗಿ ಪಶುಪಾಲನೆ, ಕುರಿಸಾಕಾಣಿಕೆ, ವ್ಯವಸಾಯವನ್ನು ಅವಲಂಬಿಸಿದ್ದಾರೆ. "ಹುಲ್ಲುಗಾವಲು ಹೆಚ್ಚಾಗಿದ್ದ ಕಾಲದಲ್ಲಿ ಇವರು ನೂರಾರು ದನಗಳನ್ನು ಸಾಕಿ ಅವುಗಳ ಹಾಲು, ಮೊಸರು, ತುಪ್ಪವನ್ನು ಮಾರಿ ಜೀವನ ಮಾಡುತ್ತಿದ್ದರು. ಇವರ ಪುರಾಣಗಳಲ್ಲಿ ಪಶುಪಾಲನೆಗೆ ಸಂಬಂಧಿಸಿದ ವಿವರಗಳೇ ಹೆಚ್ಚಾಗಿವೆ. ಇವರ ಪುರಾಣಗಳಲ್ಲಿ ಬರುವ ಸಾಂಸ್ಕೃತಿಕ ವೀರರಾದ ಎತ್ತಪ್ಪ ಮತ್ತು ಜುಂಜಪ್ಪ ಗೋಪಾಲಕರು. ಏಳು ಗೂಡಿನ ಎತ್ತುಗಳನ್ನು, ಏಳು ಗೂಡಿನ ಹಸುಗಳನ್ನು ಕಾದವರು. ಈ ಪಶುಪಾಲನೆಯಲ್ಲಿ ವಿಶೇಷವಾಗಿ ಕಷ್ಟಪಟ್ಟವರು, ವಿರೋಧಿಗಳು ಮಾಡಿಸಿದ ಮಂತ್ರ ಮಾಟಗಳನ್ನು ಎಚ್ಚರಿಕೆಯಿಂದ ಎದುರಿಸಿ ಧೈರ್ಯವಾಗಿ ಮುನ್ನುಗ್ಗಿದವರು."[೬] ಒಟ್ಟಾರೆ ಪಶುಪಾಲನೆ ಇವರ ಜೀವನಾವಶ್ಯಕ ವೃತ್ತಿಯಾಗಿ ಇವರ ಅರೆಬರೆ ಹೊಟ್ಟೆಯನ್ನು ತುಂಬಿಸುತ್ತಿದ್ದಾರೆ ವಿನಾಃ ಸಾಮಾಜಿಕ ಉನ್ನತ ಸ್ಥಾನಮಾನವನ್ನಾಗಲಿ, ಘನತೆ ಗೌರವವನ್ನಾಗಲಿ ತಂದುಕೊಟ್ಟಿರಲಿಲ್ಲ.

ಪಶುಪಾಲನಾ ವೃತ್ತಿಯಲ್ಲಿ ತೊಡಗಿದ್ದ ಇವರು ತಮ್ಮ ಪಶುಗಳನ್ನು ತುಂಬಾ ಪ್ರೀತಿಸುತ್ತಾರೆ. ಬೇರೆ ಜನಾಂಗದವರು ಇವರನ್ನು ಪ್ರೀತಿಸಿದ್ದಕ್ಕಿಂತ ಇವರು ಬೇರೆಯವರನ್ನು ನಂಬಿ ನೆಚ್ಚಿಕೊಂಡಿದ್ದಕ್ಕಿಂತಲೂ ಇವರು ತಮ್ಮ ಮಕ್ಕಳಿಗಿಂತಲೂ ಹೆಚ್ಚಾಗಿ ಪಶುಗಳನ್ನು ಪ್ರೀತಿಸಿದ್ದೇ ಹೆಚ್ಚು. ಈ ಕಾರಣದಿಂದ ಮೇಲಿನ ಮಾತು ಸಮಂಜಸವೆನಿಸುತ್ತದೆ. ಇನ್ನು ಕುರಿ ಸಾಕಾಣಿಕೆಯನ್ನು ತಮ್ಮ ಜೀವನಾಧಾರ ವೃತ್ತಿಯನ್ನಾಗಿಸಿಕೊಂಡಿದ್ದ ಇವರು ಕುರಿಯನ್ನು ಸಹ ತುಂಬಾ ಪ್ರೀತಿಸುತ್ತಾರೆ. ಕುರಿ ಕಾಯವುದನ್ನೇ ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿದ್ದ ಇವರು ಹಗಲೆಲ್ಲ ಕುರಿಯ ಹಿಂದೆ ಕಳ್ಳೆ ಬೇಲಿ ಬೇಲಿಗಳನ್ನು ಸುತ್ತುತ್ತಿದ್ದು ಸಂಜೆ ಸಮಯದಲ್ಲಿ ಜಾಲಿ, ಕಾರೆ, ಬಾರೆ ಕಳ್ಳೆಯಿಂದ ನಿರ್ಮಿಸಿದ ಕೊಟ್ಟಿಗೆಗಳಲ್ಲಿ ಕುರಿಗಳನ್ನು ಕೂಡಿಹಾಕಿ ಅವುಗಳೊಂದಿಗೆ ರಾತ್ರಿ ಕಳೆಯುವ ಮೂಲಕ ತಮ್ಮ ಉಜ್ವಲ ಭವಿಷ್ಯವನ್ನು ಈ ಕಾಯಕದಲ್ಲೇ ಕಟ್ಟಿಕೊಂಡಿದ್ದಾರೆ. ಇನ್ನು ವ್ಯವಸಾಯವನ್ನು ಜೀವನಾವಶ್ಯಕವಾದ

ಪ್ರಧಾನ ವೃತ್ತಿಯಾಗಿ ಅವಲಂಬಿಸಿದ್ದ ಇವರು ತಮ್ಮ ಬದುಕಿನಲ್ಲಿ ಆಟವಾಡುವ ಮಳೆಯನ್ನೇ ನಂಬಿಕೊಂಡು ಹೊಟ್ಟೆ ತುಂಬ ಅನ್ನವಿಲ್ಲದೆ ಹಲ್ಲಿಯಂತೆ ಹಲ್ಲುಕಚ್ಚಿದ್ದರೂ. ಬೇಸಾಯವನ್ನು ತಮ್ಮ ವೃತ್ತಿಯನ್ನಾಗಿ ಬೇಡಿಬಯಸಿದ್ದು. ಇವರು ಯಾರಿಗೂ ಬೇಡವಾಗಿದ್ದರು 'ಬೇಸಾಯ ನೀ ಸಾಯ, ನಿಮಪ್ಪ ಸಾಯ ಮನೆಮಕ್ಕಳೆಲ್ಲ ಸಾಯ' ಎಂಬ ಗ್ರಾಮೀಣ ಗಾದೆ ಮಾತಿನಂತೆ ಅಕ್ಷರಶಃ ಬದುಕಿದ್ದೂ ಸತ್ತವರಂತೆ ಜೀವಿಸಿದ್ದರು. ಪಶುಸಂಗೋಪನೆ, ಕುರಿಸಾಕಾಣಿಕೆ ಲಾಭದಾಯಕವಾಗಿರುವುದು ನಿಜವಾದರೂ ಬಹಳ ಶ್ರಮದಾಯಕ ಮತ್ತು ಸಮಾಜದ ಪ್ರತಿಷ್ಠೆಯ ದೃಷ್ಟಿಯಿಂದ ಕೆಳಮಟ್ಟದ ಉದ್ಯೋಗಗಳಾಗಿವೆ. ಇದನ್ನರಿತ ಕಾಡುಗೊಲ್ಲ ವಿದ್ಯಾವಂತ ವರ್ಗವು ಕುರಿಸಾಕಾಣಿಕೆ ಮತ್ತು ಪಶುಸಂಗೋಪನೆ ವೃತ್ತಿಗೆ ತಿಲಾಂಜಲಿ ಹೇಳಿ ಮಾನಸಿಕ ಶ್ರಮ ಆಧಾರಿತ ವೃತ್ತಿಗಳತ್ತ ತಮ್ಮ ಮನಸ್ಸುಗಳನ್ನು ಬದಲಾಯಿಸಿಕೊಂಡಿದ್ದಾರೆ.

ಪ್ರಸ್ತುತ ದಿನಗಳಲ್ಲಿ ಶಿಕ್ಷಣಕ್ಷೇತ್ರ ಸೃಷ್ಟಿಸಿರುವ ಹೊಸ ಹೊಸ ಉದ್ಯೋಗಗಳನ್ನು ಹರಸಿ ಗೊಲ್ಲ ವಿದ್ಯಾವಂತ ಜನತೆ ನಗರಗಳತ್ತ ಧಾವಿಸುತ್ತಿವೆ. ಕೈಗಾರೀಕರಣ, ನಗರೀಕರಣ, ಸರ್ಕಾರದ ಮೀಸಲಾತಿಗಳು ದೊರಕಿಸಿ ಕೊಡುತ್ತಿರುವ ಶಿಕ್ಷಣ ಆಧಾರಿತ ವಿವಿಧ ದರ್ಜೆಯ ಉದ್ಯೋಗಗಳನ್ನು ಪಡೆಯಲು ಪ್ರಯತ್ನಿಸುತ್ತಿರುವ ಮೂಲಕ ತಮ್ಮ ಮೂಲ ವೃತ್ತಿಯಿಂದ ಮುಕ್ತಿ ಹೊಂದಲು ಬೇರೆ ಉದ್ಯೋಗ ಪಡೆಯುವಲ್ಲಿ ಸಫಲರಾಗುತ್ತಿರುವುದು ತೀರ ಕಡಿಮೆ. ಸರ್ಕಾರಿ ಉದ್ಯೋಗವನ್ನು ಕೇವಲ ಬೆರಳೆಣಿಕೆಯಷ್ಟು ಜನ ಮಾತ್ರ ದೊರಕಿಸಿಕೊಳ್ಳುವ ಮೂಲಕ ಕಾಡುಗೊಲ್ಲ ಜನಾಂಗವು ಪ್ರಸ್ತುತ ದಿನಗಳಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಮಹತ್ತರ ಬದಲಾವಣೆಗೆ ಒಳಗಾಗುವಲ್ಲಿ ಈ ಸಮುದಾಯದ ಪ್ರಯತ್ನ ನಡೆಯುತ್ತಲೇ ಇದೆ. ತಮ್ಮ ಸಮುದಾವಚನ್ನು ಸಮಾಜದ ಮುಖ್ಯವಾಹಿನಿಗೆ ತರುವಲ್ಲಿ ಭಾಗಶಃ ಸಫಲವಾಗಿದೆ.

ಆದರೂ ಗೊಲ್ಲ ಸಮುದಾಯದವರಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ಎಂಬಂತೆ ಸರ್ಕಾರಿ ಉದ್ಯೋಗ (ವೃತ್ತಿಗಳನ್ನು) ಪಡೆದವರಿದ್ದು, ಇದರಲ್ಲಿ ಎ.ಬಿ.ಸಿ. ದರ್ಜೆಯ ಉದ್ಯೋಗದಲ್ಲಿ ೦.೬%ರಷ್ಟು ಉದ್ಯೋಗಗಳನ್ನು ಪಡೆದವರಿದ್ದು 'ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಗೊಲ್ಲ ಜನಾಂಗದ ಜನಸಂಖ್ಯೆ ೧.೩%ರಷ್ಟು ಜನರು ಸರ್ಕಾರಿ ಉದ್ಯೋಗಿಗಳಾಗಿದ್ದಾರೆ ಎಂಬುದು ಹೆಮ್ಮೆಯ ಸಂಗತಿಯೇನಲ್ಲ. ಇದನ್ನು ಮನಗಂಡು ಸರ್ಕಾರವು ಕಾಡುಗೊಲ್ಲರ ಜನಾಂಗವನ್ನು ಹಿಂದುಳಿದ ಬುಡಕಟ್ಟು ಜನಾಂಗವೆಂದು ಪರಿಗಣಿಸಿ ಸರ್ಕಾರಿ ಉದ್ಯೋಗಾವಕಾಶಕ್ಕೆ ಸಂಬಂಧಿಸಿದಂತೆ ಕಾಡುಗೊಲ್ಲರಿಗೆ ನಿಗದಿಪಡಿಸುವ ಮೀಸಲಾತಿ ಸೌಲಭ್ಯವನ್ನು ವಿಸ್ತರಿಸಬೇಕಾದ ಅವಶ್ಯಕತೆಯನ್ನು ಮನಗಾಣಬೇಕಿದೆ.'[೫]

**ಆಹಾರ**

ಪ್ರಕೃತಿಯ ಮಕ್ಕಳಾದ ಕಾಡುಗೊಲ್ಲರು ಕಾಡಲ್ಲೆ ಉಂಡು ಎದ್ದವರು. ಕಾಡಿನಲ್ಲಿ ದೊರೆಯುವ ಗೆಡ್ಡೆ-ಗೆಣಸು, ಸೊಪ್ಪು-ಸದೆ ತಿನ್ನುತ್ತ ಜೀವಿಸಿದ್ದ ಇವರು ಸರಳ ಆಹಾರಕ್ರಮದ ಜೀವನವಿಧಾನವನ್ನು ಅಳವಡಿಸಿಕೊಂಡಿದ್ದರು. ಪಶುಸಂಗೋಪನೆಯಲ್ಲಿ ತೊಡಗಿದ್ದ ಇವರು ತಮ್ಮ ಆಹಾರಕ್ಕಾಗಿ ಹಾಲು,

ಮೊಸರು, ತುಪ್ಪವನ್ನು ಯಥೇಚ್ಛವಾಗಿ ಬಳಸುತ್ತಿದ್ದರು. ಕುರಿಸಾಕಾಣಿಕೆ ವೃತ್ತಿಯನ್ನು ಅನುಸರಿಸಿದ್ದ ಇವರು ಸಸ್ಯ ಆಹಾರದ ಜೊತೆಗೆ ಮಾಂಸ ಆಹಾರವನ್ನೂ ಸೇವಿಸುತ್ತಿದ್ದರು. ಮಾಂಸ ಆಹಾರ ಸೇವನೆ ಇವರಿಗೆ ಕಷ್ಟದಾಯಕವೇನೂ ಆಗಿರಲಿಲ್ಲ. ತಮ್ಮ ಜೀವನೋಪಾಯಕ್ಕಾಗಿ ವ್ಯವಸಾಯವನ್ನು ನಂಬಿ ನೆಚ್ಚಿಕೊಂಡಿದ್ದ ಇವರಿಗೆ ರಾಗಿ ಪ್ರಿಯವಾದ ಆಹಾರ ಪದಾರ್ಥವಾಗಿತ್ತು. ರಾಗಿ ಮುದ್ದೆ, ರಾಗಿ ರೊಟ್ಟಿ, ಕಡ್ಲೆಕಾಯಿ ಚಟ್ನಿ, ಬದನೆಕಾಯಿ ಬಜ್ಜಿ, ಒಳಗೊಂಡಂತೆ, ಆಲೆ ಸೊಪ್ಪು, ಅರಿವೆ ಸೊಪ್ಪು, ಸಜ್ಜೆ, ನವಣೆ ಹಾರಕ, ಜೋಳಗಳು ಇವರ ಆಹಾರದ ಪ್ರಧಾನ ಭಾಗಗಳಾಗಿದ್ದವು. ದೈಹಿಕ ಶ್ರಮ ಆಧಾರಿತ ವೃತ್ತಿಯಲ್ಲಿ ತೊಡಗಿದ್ದ ಈ ಜನಾಂಗದವರು ಗಟ್ಟಿ ಆಹಾರ ಪದಾರ್ಥಗಳನ್ನು ತಮ್ಮ ಆಹಾರಪದ್ಧತಿಯಲ್ಲಿ ಬಳಸುತ್ತಿದ್ದು, ಈ ಬಗೆಯ ಆಹಾರದಲ್ಲಿ ನಯ ನಾಜೂಕು ಇಲ್ಲದೆ ಆಹಾರದ ಮೇಲೆ ಅಹಂಕಾರವೆನ್ನುವುದು ಇರಲಿಲ್ಲ. ಆದರೆ ಪ್ರಸ್ತುತ ದಿನದಲ್ಲಿ ಕಾಡುಗೊಲ್ಲ ಜನಾಂಗದ ಆಹಾರಪದ್ಧತಿಯಲ್ಲಿ ಬದಲಾವಣೆಗಳು ಗೋಚರಿಸುತ್ತಿದ್ದು ಹಳ್ಳಿಯ ವಿದ್ಯಾವಂತ ಮತ್ತು ನಗರದ ಪ್ರಜ್ಞಾವಂತ ಕಾಡುಗೊಲ್ಲರು ಆಹಾರ ಪದ್ಧತಿಯಲ್ಲಿ ನಾಗರಿಕ ಸಮಾಜದ ಆಹಾರ ಪದಾರ್ಥಗಳು ಲಗ್ಗೆ ಹಾಕಿದ್ದು ನಯ ನಾಜೂಕುತನಗಳು ಕಾಣಿಸಿಕೊಂಡಿವೆ. ಗೊಲ್ಲ ಜನಾಂಗದ ಸುಶಿಕ್ಷಿತರಲ್ಲಿ ಪೌಷ್ಟಿಕ ಮತ್ತು ಸಮತೋಲನ ಆಹಾರದ ಅರಿವು ಮೂಡಿದ್ದು ವಿವಿಧ ಬಗೆಯ ಕಾಳಿನ ಪದಾರ್ಥಗಳು, ತರಕಾರಿಗಳು, ಮೊಟ್ಟೆ, ಮೀನು, ಕೋಳಿಗಳನ್ನೂ ಒಳಗೊಂಡಂತೆ ರಾಗಿ ಮುದ್ದೆ ಇವರ ಪ್ರಿಯವಾದ ಆಹಾರ ಪದಾರ್ಥಗಳಾಗಿವೆ. 

**೩.೨. ಸಂಸ್ಕೃತಿ:** ಸಂಸ್ಕೃತಿ ಎಂದರೆ ಮನುಷ್ಯನ ಬದುಕಿನ ಜೀವನವಿಧಾನವೆಂದು ಹೇಳಬಹುದು. ಹೇಗೆಂದರೆ ಸಂಸ್ಕೃತಿಯಲ್ಲಿ ಅವನ ಜೀವಿತದ ಎಲ್ಲಾ ಆಚಾರ ವಿಚಾರಗಳು ಗೊತ್ತುಗುರಿ ಮಡಿ ಮೈಲಿಗೆ ಎಲ್ಲವು ಸಮ್ಮಿಳಿತವಾಗಿರುತ್ತವೆ. ಆದುದರಿಂದ ಸಂಸ್ಕೃತಿ ಎಂಬ ಪದಕ್ಕೆ ನಿರ್ದಿಷ್ಟವಾದ ವ್ಯಾಖ್ಯೆಯನ್ನು ಕೊಡುವುದು ಯಾವ ವಿದ್ವಾಂಸರಿಂದಲೂ ಸಾಧ್ಯವಾಗಿಲ್ಲ.

ಸಾಮಾನ್ಯವಾಗಿ ಸಂಸ್ಕೃತಿ ಎಂದರೆ ನಮ್ಮ ನಡತೆ ನೈತಿಕತೆ, ರೂಢಿ, ಸಂಪ್ರದಾಯ, ನಂಬಿಕೆ ಆಚರಣೆ, ಮೌಲ್ಯದರ್ಶನ, ಧಾರ್ಮಿಕತೆ, ರಾಜಕೀಯ, ಆರ್ಥಿಕ ವ್ಯವಸ್ಥೆಯ ಚಟುವಟಿಕೆಗಳನ್ನು ಒಳಗೊಂಡಿದೆ.

ಎಸ್.ಎಸ್ ನ್ಯಾಡೆಲ್ ಅವರು "ಸಮೂಹ ಮತ್ತು ಸಂಬಂಧಗಳ ಆಯಾಮದಲ್ಲಿ ಪ್ರಕಟಗೊಳ್ಳುವ ಸಾಮಾಜಿಕ ಸತ್ವಗಳ ಮೊತ್ತವೇ ಸಮಾಜ, ಇದೇ ಮೊತ್ತದ ಕ್ರಿಯೆಯ ಆಯಾಮವೇ ಸಂಸ್ಕೃತಿ" ಎಂದು ವ್ಯಾಖ್ಯಾನಿಸಿದ್ದಾರೆ.[೬] "ಸಂಸ್ಕೃತಿ ಎಂಬ ಪದಕ್ಕೆ ತತ್ಸಮಾನವಾಗಿ ಆಂಗ್ಲಭಾಷೆಯ "ಕಲ್ಚರ್" (Culture) ಎಂದು ಕರೆಯಲಾಗಿದೆ. ಈ ಪದವು ಲ್ಯಾಟಿನ್ ಭಾಷೆಯ "ಕೊಲೆರ್"(Colere) ನಿಂದ ನಿಷ್ಪತ್ತಿಯಾಗಿದೆ. ಸಂಸ್ಕೃತಿ ಎಂಬುದು ಬೆಳೆಸು, "ಕೃಷಿ ಮಾಡು" ಎಂಬ ಅರ್ಥವನ್ನು ನೀಡುತ್ತದೆ. ಸಂಸ್ಕೃತಿಯು ಸಮೂಹವೊಂದರ ನಂಬಿಕೆಗಳು, ಮೌಲ್ಯಗಳು ಹಾಗು ಅಭಿವ್ಯಕ್ತಾತ್ಮಕ ಸಂಕೇತಗಳನ್ನು ಸೂಚಿಸುತ್ತದೆ."[೭] ಕರ್ನಾಟಕ ಸಂಸ್ಕೃತಿ ಎಂದರೆ ಕರ್ನಾಟಕದಲ್ಲಿ ಬದುಕಿದ ಮತ್ತು ಬದುಕುತ್ತಿರುವ

ಎಲ್ಲ ಜನರ ಆಲೋಚನಾ ವಿಧಾನ ಮತ್ತು ಬಾಳಿನ ರೀತಿ ಎಂದು ಭಾವಿಸಬಹುದು. ಆದರೆ ಕರ್ನಾಟಕದ ಸಂಸ್ಕೃತಿ ಎಂದೊಡನೆ ಇದು ನಮ್ಮ ಹೆಮ್ಮೆ ಎಂದು ಮಾತಾಡುವುವರಿಂದ ಹಿಡಿದು ರಾಜ್ಯೋತ್ಸವ ದಿನಗಳಲ್ಲಿ ಎಚ್ಚರಗೊಂಡು ಕುಣಿಸಿದ ಉತ್ಸಾಹಿ ಕಾರ್ಯಕರ್ತರ ತನಕ ಜನರ ಮನಸ್ಸಿನಲ್ಲಿ ತಕ್ಷಣ ಮೂಡುವ ಚಿತ್ರ ಯಾವುದು ಮತ್ತು ಮೂಡದ ಚಿತ್ರಗಳು ಯಾವುದು ಎಂಬ ಪ್ರಶ್ನೆಗಳು ತುಂಬಾ ಕಾಡುತ್ತಿವೆ.[೮]

ಮನುಷ್ಯನು ವಂಶಾನುಗತವಾದ ಕೆಲವು ಲಕ್ಷಣಗಳೊಡನೆ ಶಕ್ತಿಗಳೊಡನೆ ಹುಟ್ಟುತ್ತಾನೆ. ಇವುಗಳನ್ನು ಯಾರೂ ಅವನಿಗೆ ಕಲಿಸಿಕೊಡಬೇಕಿಲ್ಲ. ಆದರೆ ಇನ್ನೂ ಕೆಲವನ್ನು ಅವನಿಗೆ ಕಲಿಸಿಕೊಡಬೇಕಾಗುತ್ತದೆ ಅಥವಾ ತನ್ನ ಪರಿಸರದಿಂದ ಅವನೇ ಕಲಿತುಕೊಳ್ಳುತ್ತಾನೆ. ಉದಾ: ವಸ್ತ್ರಗಳ ಉಪಯೋಗ, ವ್ಯವಸಾಯ ಇತ್ಯಾದಿಗಳು. ಕಾಡುಗೊಲ್ಲರು ತಲಾತಲಾಂತರದಿಂದ ಮುಂದುವರಿದುಕೊಂಡು ಬಂದಿರುವ ಸಂಸ್ಕೃತಿಯು ಜಾಗತೀಕರಣದಿಂದಾಗಿ ಕಾಡುಗೊಲ್ಲರ ಹಟ್ಟಿಗಳು ಬದಲಾಗಿವೆ ಎಂದು ಹೇಳಬಹುದು.

### ೩.೩. ಸೃಷ್ಟಿಪುರಾಣಗಳ ಪರಿಚಯ

ಎಲ್ಲಾ ಸಮುದಾಯಗಳಲ್ಲಿ ಸೃಷ್ಟಿಪುರಾಣಗಳು ಕಂಡುಬರುವಂತೆ ಕಾಡುಗೊಲ್ಲರಲ್ಲಿಯೂ ಸೃಷ್ಟಿಪುರಾಣಗಳಿರುವುದು ಕಂಡುಬರುತ್ತದೆ. ಶಿಷ್ಟ ಸಮುದಾಯದವರು ಸೃಷ್ಟಿ ಮಾಡಿಕೊಂಡಂತೆ ಕಾಡುಗೊಲ್ಲರು ತಮ್ಮ ಸಮುದಾಯದ ಹುಟ್ಟಿನ ಬಗೆಗೆ ತಮ್ಮದೇ ಆದ ರೀತಿಯಲ್ಲಿ ಸೃಷ್ಟಿಪುರಾಣಗಳನ್ನು ಸೃಷ್ಟಿ ಮಾಡಿಕೊಂಡಿದ್ದಾರೆ. ಕಾಡುಗೊಲ್ಲರ ಸೃಷ್ಟಿ ಪುರಾಣಗಳು ಮೌಖಿಕ ಪರಂಪರೆಗೆ ಸೇರಿದವುಗಳಾಗಿವೆ. ಅಷ್ಟೇ ಅಲ್ಲ, ಅವು ಪ್ರಾದೇಶಿಕವಾಗಿ ಭಿನ್ನತೆಯನ್ನು ಕೂಡ ಪಡೆದುಕೊಂಡಿವೆ. ಕಾಡುಗೊಲ್ಲರ ಮೇಲೆ ಕೈಗಾರಿಕೀಕರಣ, ನಗರೀಕರಣ ಹಾಗೂ ಜಾಗತೀಕರಣದ ಪ್ರಭಾವದಿಂದಾಗಿ ಸೃಷ್ಟಿಪುರಾಣಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡಿವೆ ಎಂದು ಹೇಳಬಹುದು. ಹಿಂದೆ ಕಾಡುಗೊಲ್ಲರು ತಮ್ಮ ದೇವರುಗಳ ಮೇಲೆ ಅತಿಯಾದ ನಂಬಿಕೆ ಇಟ್ಟುಕೊಂಡಿದ್ದರು. ಆದರೆ ಇಂದು ಆ ನಂಬಿಕೆ ಅತ್ಯಲ್ಪ ಕಡಿಮೆಯಾಗಿದೆ. ಜಾಗತೀಕರಣವನ್ನು ನಿರಾಕರಣೆ ಮಾಡುತ್ತಿದ್ದ ಕಾಡುಗೊಲ್ಲರು, ತಮಗರಿವಿಲ್ಲದೇ ಜಾಗತೀಕರಣಕ್ಕೆ ಒಳಗಾಗಿದ್ದಾರೆ. ಈ ಸೃಷ್ಟಿಪುರಾಣಗಳು ಕಾಡುಗೊಲ್ಲರ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಮನುಷ್ಯನನ್ನು ಒಳಗೊಂಡು ಚರಾಚರ ವಸ್ತುಗಳು ಯಾವ ರೀತಿ ಸೃಷ್ಟಿಯಾಗಿವೆ, ಅಷ್ಟೇ ಅಲ್ಲ, ಅವು ಮನುಷ್ಯನ ಬದುಕಿಗೆ ಯಾವ ರೀತಿ ಪೂರಕವಾಗಿವೆ ಎಂಬುದನ್ನು ತಿಳಿಯಲು ಸಹಾಯವಾಗಿವೆ. ಕಾಡುಗೊಲ್ಲರ ಪ್ರತಿಯೊಬ್ಬ ಸಾಂಸ್ಕೃತಿಕ ನಾಯಕನಿಗೂ ಒಂದೊಂದು ಸೃಷ್ಟಿಪುರಾಣಗಳಿವೆ. ಉದಾ: ವೀರಜುಂಜಪ್ಪ, ವೀರಎತ್ತಪ್ಪ, ಕಾಟಯ್ಯ, ಚಿತ್ತಯ್ಯ, ವೀರಯರ್ರಣ್ಣ, ವೀರಕಾಟಮ್ಮ, ವೀರ ಮಲ್ಲಜ್ಜ ಹೀಗೆ ಅನೇಕ ಸಾಂಸ್ಕೃತಿಕ ನಾಯಕರ ಸೃಷ್ಟಿಪುರಾಣಗಳು ಸೃಷ್ಟಿಗೊಂಡಿವೆ. ಆ ಸೃಷ್ಟಿಪುರಾಣಗಳ ಪ್ರಕಾರ ಕಾಡುಗೊಲ್ಲರು ತಮ್ಮ ಬದುಕನ್ನು ರೂಪಿಸಿಕೊಳ್ಳುತ್ತಿದ್ದರು. ಇವರ ಸಾಂಸ್ಕೃತಿಕ ನಾಯಕರಿಗೆ ಸಾವಿಲ್ಲ. ಇವರು ಪವಾಡಪುರುಷರಾಗಿರುತ್ತಾರೆ ಮತ್ತು ಯಾವಾಗಲೂ ಪೂಜೆಗೆ ಒಳಗಾಗುತ್ತಾರೆ. 'ಪುರಾಣಗಳೆಂದರೆ ಅವು ಕಟ್ಟು ಕಥೆಗಳಲ್ಲ ಅಥವಾ ವಿಜ್ಞಾನ ಪೂರ್ವ

ಯುಗದ ಪ್ರಾಗೈತಿಹಾಸಿಕ ಕಾಲದ ಅನಕ್ಷರಸ್ಥ ಜನಸಮುದಾಯಗಳ ಕಾಲ್ಪನಿಕ ಸೃಷ್ಟಿಯೂ ಅಲ್ಲ ವೆಂದು ಸಮುದಾಯದ ಸಂದೇಶ, ಘಟನೆ, ಇತಿಹಾಸ ಎಂಬುದಾಗಿ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ'.[೯] ಪ್ರತಿಯೊಂದು ಸಮುದಾಯವೂ ತನ್ನದೇ ಆದಂತಹ ಸೃಷ್ಟಿ ಪುರಾಣಗಳನ್ನು ಸೃಷ್ಟಿಸಿಕೊಂಡಿರುವುದು ಕಂಡುಬರುತ್ತದೆ. ಉದಾ: ಜೇನುಕುರುಬ, ಬೆಟ್ಟಕುರುಬರು, ಮೇದರು ಮ್ಯಾಸಬೇಡರು ಮುಂತಾದ ಅನೇಕ ಕಾಡುಗೊಲ್ಲ ಸಮುದಾಯಗಳು ತಮ್ಮ ಸಮುದಾಯದ ಮೂಲಪುರುಷರ ಹುಟ್ಟಿನ ಬಗೆಗೆ ಸೃಷ್ಟಿಪುರಾಣಗಳನ್ನು ಸೃಷ್ಟಿ ಮಾಡಿಕೊಂಡಿರುವುದರ ಬಗೆಗೆ ತಿಳಿದು ಬರುತ್ತದೆ. ಈ ಸೃಷ್ಟಿಪುರಾಣದ ನಾಯಕರು ಬೇರೆ ಯಾರೂ ಆಗಿರುವುದಿಲ್ಲ, ಅವರು ತಮ್ಮ ಸಮುದಾಯದ ಮೂಲಪುರುಷರೇ ಆಗಿರುತ್ತಾರೆ. ಈ ಪ್ರಪಂಚದ ಸೃಷ್ಟಿಗೆ ಮರ, ಗಿಡ ನೀರು, ಬೆಳಕು ಪ್ರಾಣಿ ಸಂಕುಲ ಇವುಗಳ ಸೃಷ್ಟಿಗೆ ಕಾರಣಗಳನ್ನು ಕಂಡುಕೊಂಡಿರುವ ಜನರು ಅದರಲ್ಲಿ ತಮ್ಮ ಸಮುದಾಯಗಳನ್ನು ಗುರುತಿಸಿಕೊಳ್ಳಲು ಪ್ರತೇಕವಾದ ಸೃಷ್ಟಿಪುರಾಣಗಳನ್ನು ಸೃಷ್ಟಿ ಮಾಡಿಕೊಂಡಿರುವುದು ಕಂಡುಬರುತ್ತದೆ. ಅದು ಹಳೆಯ ವ್ಯಕ್ತಿಗಳು ಪ್ರಸ್ತುತ ಕಾಲಘಟ್ಟದಲ್ಲಿ ವೀರರಾಗಿಯೇ ದಾಖಲಾಗುತ್ತಾರೆ. ಇತರೆ ಸಮುದಾಯಗಳಲ್ಲಿರುವಂತೆ ಕಾಡುಗೊಲ್ಲರಲ್ಲಿಯೂ ಅನೇಕ ಸೃಷ್ಟಿಪುರಾಣಗಳು ಇರುವುದನ್ನು ಕಾಣಬಹುದು. ಕಾಡುಗೊಲ್ಲರು ನೀರು, ಮಳೆ, ಭೂಮಿ, ಚಂದ್ರ, ಸೂರ್ಯ, ಆಕಾಶ, ನಕ್ಷತ್ರ, ಕುರಿ, ಮೇಕೆ ಮತ್ತು ಹಸು ಇವುಗಳ ಕುರಿತು ಅನೇಕ ಸೃಷ್ಟಿಪುರಾಣಗಳಿರುವುದು ಕಂಡುಬರುತ್ತದೆ. ಕಾಡುಗೊಲ್ಲರ ಸೃಷ್ಟಿಪುರಾಣಗಳು ಪ್ರಾರಂಭವಾಗುವುದು ಕಲ್ಯಾಣದುರ್ಗ ತಾಲ್ಲೂಕಿನ ಬೆಸ್ತರಹಳ್ಳಿಯಲ್ಲಿ. ಈ ಸೃಷ್ಟಿಪುರಾಣದ ಬಗ್ಗೆ ಅವರಲ್ಲಿ ಮೌಖಿಕ ಅಕರಗಳೇ ದಾಖಲೆಗಳು. ಇವುಗಳನ್ನು ಬಿಟ್ಟರೆ ಅವರುಗಳು ವಾಸವಾಗಿದ್ದರು ಎಂಬುದಕ್ಕೆ ವಾಸವಾಗಿರುವ ನೆಲೆಗಳಲ್ಲಿ ಅವರು ಬಳಸುತ್ತಿದ್ದ ಅನೇಕ ಐತಿಹ್ಯಗಳು ಅವರ ಬದುಕಿನ ಬಗೆಗೆ ಪುಷ್ಟೀಕರಿಸುತ್ತವೆ. ಇವುಗಳನ್ನು ಆಧಾರವಾಗಿಟ್ಟುಕೊಂಡು ಕಾಡುಗೊಲ್ಲರ ಮೂಲಪುರುಷರಾದ ಕಾಟಯ್ಯ, ಚಿತ್ತಯ್ಯ ಮತ್ತು ಓಬಳಪತಿಯ ಸೃಷ್ಟಿಪುರಾಣಗಳನ್ನು ಕಾಣುತ್ತೇವೆ. ಕಾಡುಗೊಲ್ಲರ ಸೃಷ್ಟಿಪುರಾಣ ಕಟ್ಟುಕತೆಯಂತೆ ನಿರೂಪಿತಗೊಂಡಿದೆ. ಕಾಡುಗೊಲ್ಲರು ಆಂಧ್ರಪ್ರದೇಶದಲ್ಲಿ ವಾಸವಾಗಿದ್ದರು ಎಂಬುದಕ್ಕೆ ಕಲ್ಯಾಣದುರ್ಗದ ಕಂದುರುಪೆಯ ಹತ್ತಿರ ೭ ಕಿಲೋಮೀಟರ್ ದೂರದಲ್ಲಿ ಬೆಸ್ತರಹಳ್ಳಿ ಎಂಬ ಊರು ಇದೆ. ಆ ಊರಿನ ಸಮೀಪದಲ್ಲಿ ಒಂದು ಕುರುಚಲು ಕಾಡಿದೆ. ಆ ಕಾಡಿನಲ್ಲಿ ತುಗ್ಗಲಿ ಮರ, ಹೊಂಗೆ ಮರ, ಬೇವಿನ ಮರ, ಲಂಟಾನು, ಸೀಮೇಜಾಲಿ ಗಿಡಗಳು, ಜಾಲಿಯ ಮರ ಮತ್ತು ಟಂಗಟೆ ಗಿಡ ಮುಂತಾದ ಅನೇಕ ರೀತಿಯ ಮರ ಗಿಡಗಳು ಬೆಳೆದಿದ್ದು ಇಂತಹ ಕಾಡಲ್ಲಿ ಕಾಡುಗೊಲ್ಲರ ಮೂಲಪುರುಷರ ಸೃಷ್ಟಿಯಾಗಿದೆ. ಆದ್ದರಿಂದ ಈ ಕಾರಣಕ್ಕಾಗಿ ಇವರನ್ನು ಕಾಡುಗೊಲ್ಲರೆಂದು ಕರೆದಿರಬಹುದು. ಜೊತೆಗೆ ಇವರ ವಾಸವು ಪ್ರಸ್ತುತ ದಿನಗಳಲ್ಲಿಯೂ ಸಹ ಊರಿನಿಂದ ದೂರ ಎಂದರೆ ಕನಿಷ್ಠ ಒಂದು ಮೈಲಿಯಾದರೂ ಅಂತರವನ್ನಿಟ್ಟುಕೊಂಡ ಈ ಬೆಸ್ತರಹಳ್ಳಿಯ ವಿವರವು ಚಿತ್ರದೇವರ ಕಾವ್ಯದಲ್ಲಿ ಬರುತ್ತದೆ. ಕಾಡುಗೊಲ್ಲರು ಕಾಡನ್ನು ತಮ್ಮ ಪ್ರಾದೇಶಿಕ ಭಾಷೆಯಲ್ಲಿ ಕಾವಲು ಎಂದು ಕರೆದಿರುವುದು ಕಂಡುಬಂದಿದೆ. ಈ ಕಾವಲು ತಂಬಾ ವಿಸ್ತಾರವಾಗಿತ್ತು ಎಂಬುದಕ್ಕೆ ಅವರು ಕೊಡುವ ಕಾರಣ ಈ ಮುಂದಿನಂತಿದೆ.

ಹನ್ನೆರಡು ಮತ್ತು ಹನ್ನೆರಡು ಒಟ್ಟು ಇಪ್ಪತ್ತನಾಲ್ಕು ಮೈಲಿ ಸುತ್ತಳತೆಯ ವ್ಯಾಪ್ತಿಯನ್ನು ಹೊಂದಿರುವಂತಹ ದಟ್ಟವಾದ ಕುರುಚಲು ಕಾಡು. ಸಾಮಾನ್ಯವಾಗಿ ಕಾಡುಗೊಲ್ಲರು ವಾಸಿಸುವುದು ಬಯಲು ಪ್ರದೇಶದ ಕುರುಚಲು ಕಾಡಿನಲ್ಲಿ. ಏಕೆಂದರೆ ಇವರು ಪಶುಪಾಲಕರು ಮತ್ತು ಅಲೆಮಾರಿಗಳು. ಹಾಗಾಗಿ ಅಲೆಮಾರಿಗಳನ್ನು ಸಂಶಯದ ದೃಷ್ಟಿಯಿಂದ ನೋಡುವ ಈ ಸಮಾಜ ಅವರು ಅರಣ್ಯದಲ್ಲಿ ವಾಸಿಸುವಂತೆ ಮಾಡಿದೆ.

ಇವರಲ್ಲಿ ದೈವಶ್ರದ್ದೆ, ಧಾರ್ಮಿಕ ಶ್ರದ್ಧೆ ಹೆಚ್ಚು. ವಿಧಿ ನಿಷೇಧಗಳು ಹೇರಳ. ತಮ್ಮ ಹಟ್ಟಿಯ ಸುತ್ತಲೂ ಬಲವಾದ ಕಳ್ಳೆಯ ಬೇಲಿಯನ್ನು ಹಾಕಿ, ನಡುವೆ ದೇವರ ಗುಬ್ಬ ಕಟ್ಟಿಕೊಂಡು ವಾಸಿಸುವ ಇವರು ಹೊರಗಿನವರಿಗೆ ನಿರ್ಬಂಧಗಳನ್ನು ಹೇರುತ್ತಾರೆ.[೧೦]

### ೩.೪. ಕಾಡುಗೊಲ್ಲರ ಬಗ್ಗೆ ಇರುವ ಐತಿಹ್ಯಗಳು

ಕಾಡುಗೊಲ್ಲರ ಸಂಸ್ಕೃತಿಯನ್ನು ಅರಿಯಲು ಐತಿಹ್ಯಗಳು ಸಹಾಯಕವಾಗಿವೆ. ಕಾಡುಗೊಲ್ಲರ ಬಗ್ಗೆ ಮಾಹಿತಿ ತಿಳಿಯಲು ಅನೇಕ ಐತಿಹ್ಯಗಳನ್ನು ಅವಲಂಬಿಸಬೇಕಾಗುತ್ತದೆ. ಈ ಐತಿಹ್ಯಗಳು ಪ್ರಾದೇಶಿಕ ಭಿನ್ನತೆಯನ್ನು ಒಳಗೊಂಡಿವೆ. ಕಾಡುಗೊಲ್ಲರ ಮೂಲವನ್ನು ಹೇಳುವಲ್ಲಿ ಐತಿಹ್ಯಗಳು ಪ್ರಮುಖ ಪಾತ್ರ ವಹಿಸುತ್ತವೆ. ಕಾಡುಗೊಲ್ಲರು ಮೂಲತಃ ದೆಹಲಿ ಕಡೆಯಿಂದ ಬಂದವರೆಂದು ಕ್ಷೇತ್ರಕಾರ್ಯ ಮಾಡಿದಂತಹ ಸಮಯದಲ್ಲಿ ತಿಳಿದುಬಂದರೆ. ಕೆಲವು ಪ್ರದೇಶದಲ್ಲಿ ಕಾಡುಗೊಲ್ಲರು ವಿಜಯನಗರ ಅರಸರ ಆಳ್ವಿಕೆಯ ನಂತರ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ವಾಸವಾದರು ಎಂದು ಕೆಲವು ತಿಳುವಳಿಕೆದಾರರು ಹೇಳುತ್ತಾರೆ. ಕೆಲವು ತಿಳುವಳಿಕೆದಾರರು ಹೇಳುವ ಪ್ರಕಾರ ಮೈಸೂರು ಹೈದರಾಲಿಯ ಆಳ್ವಿಕೆಯ ಸಂದರ್ಭದಲ್ಲಿ ಬಯಲು ಪ್ರದೇಶಗಳ ಕಡೆಗೆ ವಲಸೆ ಬಂದರೆಂದು ಹೇಳುತ್ತಾರೆ. ಇನ್ನು ಕೆಲವು ತಿಳುವಳಿಕೆದಾರರು ಹೇಳುವ ಪ್ರಕಾರ ಕಾಡುಗೊಲ್ಲರ ಪ್ರಾರಂಭದ ಕಟ್ಟೇಮನೆಗಳು ಆಂಧ್ರಪ್ರದೇಶದಲ್ಲಿ ಕಂಡುಬರುವುದರಿಂದ ಆಂಧ್ರದಿಂದ ಕರ್ನಾಟಕಕ್ಕೆ ವಲಸೆ ಬಂದಿರಬಹುದೆಂದು ಹೇಳುತ್ತಾರೆ.

### ಪೌರಾಣಿಕ ಹಿನ್ನೆಲೆ

"ದ್ವಾಪರಯುಗದ ಅಂತ್ಯದಲ್ಲಿ ಕಾಮಧೇನುವಿನ ಬಲದ ಕವಚದಲ್ಲಿ ಹುಟ್ಟಿದ ತಕ್ಷಣವೇ ರಾಮಚಂದ್ರಮುತ್ತಿಯು ಈತನು ಚಂದ್ರವಂಶಜನೂ, ಗಿರಿಜಾವಲ್ಲಭನ ಸೇವಕನೂ, ಈತನ ವಂಶದವನೇ ಕಲಿಯುಗದಲ್ಲಿ ಚಂದಮುತ್ತಿಯೆಂಬ ಹೆಸರಿನಿಂದ ರಾಜ್ಯಭಾರ ಮಾಡಿರುತ್ತಾನೆ. ಎಡದ ಕವಚದಲ್ಲಿ ಜನಿಸಿದವನು ಯುಗದ ಮುಕ್ತಿಯ ಈತನೇ ಸೂರ್ಯವಂಶದವನು. ಈತನು ಹರಿಭಕ್ತನಾಗಿರಲು ಈತನ ವಂಶದವನೇ ಕಲಿಯುಗದಲ್ಲಿ ಚಿತ್ತಮುತ್ತಿಯೆಂಬ ಹೆಸರಿನಿಂದ ರಾಜ್ಯಭಾರ ಮಾಡಿರುತ್ತಾನೆ"[೧೧]

ಜಗದಾಂಬೆ ಆದ ಶ್ರೀದೇವಿಯು ತ್ರಿಮೂರ್ತಿಗಳನ್ನು ಸೃಷ್ಟಿಸಿ ಆ ಮೂಲಕ ಜಗತ್ತಿನ ಸೃಷ್ಟಿಗೆ ಕಾರಣೀಭೂತಳಾಗಿದ್ದಾಳೆ. ತಾನು ಸೃಷ್ಟಿಸಿದ ತ್ರಿಮೂರ್ತಿಗಳಿಗೆ ಈಶ್ವರ, ಬ್ರಹ್ಮ, ವಿಷ್ಣು ಎಂದು ಕ್ರಮವಾಗಿ

ನಾಮಕರಣ ಮಾಡಿ ಇವರಿಗೆ ಕ್ರಮವಾಗಿ ಸೃಷ್ಟಿ, ಪೋಷಣೆ, ಪ್ರಳಯದ ಕಾರ್ಯಗಳನ್ನು ಒಪ್ಪಿಸಿ ಧರ್ಮವನ್ನು ಚಾಚೂ ತಪ್ಪದಂತೆ ಪಾಲಿಸಬೇಕೆಂದೂ ನಿಮ್ಮ ಕಾರ್ಯಗಳಿಗೆ ಏನಾದರೂ ಅಡ್ಡಿ ಆತಂಕಗಳು, ವಿಪತ್ತುಗಳು ಉಂಟಾದಲ್ಲಿ ನನ್ನನ್ನು ಸ್ಮರಿಸಿ ಆ ಸಂದರ್ಭದಲ್ಲಿ ನಾನು ಪ್ರತ್ಯಕ್ಷಳಾಗಿ ನಿಮ್ಮ ಕಷ್ಟಗಳನ್ನು ಪರಿಹರಿಸುತ್ತೇನೆಂದು ಹೇಳಿ ಶ್ರೀ ದೇವಿಯು ಅದೃಶ್ಯಳಾದಳು. ಕಾಲ ಕಳೆದಂತೆ ತ್ರಿಮೂರ್ತಿಗಳಲ್ಲಿ ಒಬ್ಬನಾದ ಜಗತ್ತಿನ ಸಕಲ ಪ್ರಾಣಿಗಳ ಪೊಷಣೆ ಕೆಲಸ ನಿರ್ವಹಿಸುವ ವಿಷ್ಣುವಿಗೆ ಬ್ರಹ್ಮನ ಅನುಗ್ರಹದಿಂದ ಕಶ್ಯಪ, ನಾರದ, ಪ್ರಜೇಶ್ವರ ಎಂಬ ಮಕ್ಕಳೂ ಪ್ರಜೇಶ್ವರನಿಗೆ ಅತ್ರಿಮಹನೀಯ, ಆಹ್ಲಾದಕರ, ಶಶಿ, ಸೋಮ, ಬುಧ, ಪುರೂರವ(ಊರ್ವಶಿಯಾದಳು) ಆಯಕುಮಾರ, ನಹುಷ, ಯಯಾತಿ ಎಂಬ ಮಕ್ಕಳೂ ಯಯಾತಿಗೆ ಯಧು, ಕುರು ಎಂಬ ಮಕ್ಕಳು, ಯಧುವಿಗೆ ಯಧು, ಯಾದವ, ಪರೂರವ ಎಂಬ ಮಕ್ಕಳು ಮತ್ತೆ ಯದುವಿನ ಮಗನಿಗೆ ಕ್ಷತ್ರಿಯ ರಾಜರು ಜನಿಸಿದರು. ಯಾದವನಿಗೆ ಸೂರ್ಯ, ಚಂದ್ರ ಎಂಬ ಮಕ್ಕಳು, ಸೂರ್ಯನಿಗೆ ಚಿತ್ತಮುತ್ತಿ ಎಂಬ ಮಗನೂ, ಚಂದ್ರನಿಗೆ ಸಂದ ಮುತ್ತಿ ಎಂಬ ಮಗನೂ ಜನಿಸಿದರು. ಯಾದವನ ಮಕ್ಕಳಾದ ಸೂರ್ಯ, ಚಂದ್ರರು ಹೆಚ್ಚು ಕಾಲ ಜೀವಿಸಿದ್ದ ಬಗ್ಗೆ ಅಷ್ಟಾಗಿ ಮಾಹಿತಿ ಲಭ್ಯವಾಗಿಲ್ಲ ಮತ್ತು ಹೆಚ್ಚು ಪ್ರಸಿದ್ಧಿ ಪಡೆದಿಲ್ಲ ಎಂದು ಊಹಿಸಬಹುದು. ಆದರೂ ಇವರು ಯಾದವನ ಮಕ್ಕಳಾಗಿ ಜನಿಸಿ ಯಾದವ ವಂಶ ಅಥವಾ ಗೊಲ್ಲ ಸಮುದಾಯ ಮುಂದುವರಿಕೆಗೆ ಕಾರಣರಾದರು ಎಂದು ಪುರಾಣದಿಂದ ತಿಳಿದುಬರುತ್ತದೆ. ಇದಕ್ಕೆ ಕುರುಹಾಗಿ ಕಾಡುಗೊಲ್ಲ ಜನಾಂಗದಲ್ಲಿ ಈಗಲೂ ಸೂರ್ಯವಂಶ ಮತ್ತು ಚಂದ್ರವಂಶ ಎಂಬ ಗೋತ್ರದ ಸಂತತಿಗಳ ವಾಡಿಕೆ ಉಳಿದಿರುವುದನ್ನು ನಾವು ಇವರ ಕುರುಹಾಗಿ ಎಂದು ಊಹಿಸಬಹುದು. ಈ ಸೂರ್ಯ ಚಂದ್ರರು ಪಶುಪಾಲಕರಾಗಿದ್ದರು ಎಂದು ಪುರಾಣವಿದ್ದು, ಇವರಿಂದಲೇ ಕಾಡುಗೊಲ್ಲ ಸಂತತಿ ಮುಂದುವರಿಯಿತು ಎಂದು ಹೇಳಲಾಗಿದೆ.

**ಕೈಫಿಯತ್ತುಗಳು**

ಮೌಖಿಕ ಇತಿಹಾಸದ ಮೂಲಕ ಮೂಲ ಇತಿಹಾಸ ರಚನೆಗೆ ಸಹಾಯಕವಾಗುವಲ್ಲಿ ಕೈಫಿಯತ್ತುಗಳು ಮಹತ್ವದ ಪಾತ್ರ ವಹಿಸಿವೆ. ಇವು ಜನಸಾಮಾನ್ಯರ ವಾಸ್ತವ ಬದುಕಿನ ಚಿತ್ರಣಗಳನ್ನು ಜನರಿಂದ ಕೇಳಿ ದಾಖಲಿಸಿದ ಜೀವನದ ವಿವರಗಳನ್ನು ಒಳಗೊಂಡಿದ್ದು ನಿಜ ಜೀವನದಲ್ಲಿ ಮರೆತುಹೋದ ಅನೇಕ ಮುಖಗಳನ್ನು ಎತ್ತಿ ತೋರಿಸುತ್ತವೆ. ಕರ್ನಾಟಕದಲ್ಲಿ ಲಭ್ಯವಿರುವ 'ಕರ್ನಾಟಕದ ಕೈಫಿಯತ್ತುಗಳು' ಸಂಪುಟದಲ್ಲಿ ಗೊಲ್ಲ ಸಮುದಾಯದ ಜೀವನವಿಧಾನಕ್ಕೆ ಸಂಬಂಧಿಸಿದ ಅನೇಕ ಮಾಹಿತಿಗಳು ಸಿಗುತ್ತವೆ.

"ದರೋಜಿ ಕೈಫಿಯತ್ತಿ'ನಲ್ಲಿ ಗ್ರಾಮದಿಂದ ಗ್ರಾಮಕ್ಕೆ ವಲಸೆ ಹೋಗುವ ಸಮಯದಲ್ಲಿ ಗೊಲ್ಲ ಜನಾಂಗದ ಕಲ್ಯಾಣ ಪಟ್ಟಣದ ಸಿಂಧು ಬಲ್ಲಾಳರಾಯನು ಕಂಪಲಿ ಬಳಿ ಸೋಮೇಶ್ವರ ದೇವರಿಗೆ ತನ್ನ ಭಕ್ತಿಯ ಕುರುಹಾಗಿ ಗುಡಿಯನ್ನು ಕಟ್ಟಿಸಿ ಕೊಟ್ಟ ವಿಷಯ ತಿಳಿದುಬರುತ್ತದೆ."[೧೨]

"ಹಳೇ ಕುರುಗೋಡಿನ(ಬಳ್ಳಾರಿ ಜಿಲ್ಲೆ) ಪೂರ್ವ ದಿಕ್ಕಿನಲ್ಲಿ ಇರುವ ಅಲ್ಲಿಯ ಜನರಿಗೆ ಆರಾಧ್ಯ ದೈವನಾಗಿರುವ ಆಂಜನೇಯ ದೇವರ ಗುಡಿಯ ಬಳಿ ಶಾಲಿವಾಹನ ಶಕ ೧೪೫೦ರಲ್ಲಿ ಗೊಲ್ಲರ

ಯಲ್ಲಪ್ಪ ಎಂಬುವವನು ನಾಲ್ಕು ಬುರುಜಿನ ಕಿಲ್ಲೆ ಕಟ್ಟಿಸಿ, ಆಳ್ವಿಕೆಯಲ್ಲಿದ್ದ ಸಮಯದಲ್ಲಿ ಮೊಗಲ್ ದೊರೆಗಳ ಅಧಿಕಾರದ ಅಧೀನಕ್ಕೆ ಒಳಪಟ್ಟಿದ್ದನು ಎಂದು ಕುರುಗೋಡು ಕೈಫಿಯತ್ತು (ತಿಳಿಸುತ್ತದೆ.) ವಿವರಿಸುತ್ತದೆ."[೧೩]

"ದೇವರಾಯ ಪಟ್ಟಣದ ಹೊರವಲಯದಲ್ಲಿ ಬ್ರಹ್ಮ ಎಂಬ ಹಳ್ಳಿಯನ್ನು ನಿರ್ಮಿಸಿ ತ್ರಿಕೂಟಾಚಲ ಎಂಬ ದೇವರಿಗೆ ಪೂಜಾ ಕಾರ್ಯಗಳನ್ನು ಸಮರ್ಥವಾಗಿ ನಿಭಾಯಿಸಿಕೊಂಡು ಹೋಗಲು 'ಚಲಿಕೆರೆ ಗೊಲ್ಲರಹಳ್ಳಿ'ಯನ್ನು ವಿಜಯನಗರದ ಹರಿಹರ ಸೋಮೇಶ್ವರ ರಾಯನು ತನ್ನ ಆಡಳಿತ ಅವಧಿಯಲ್ಲಿ ದಾನವಾಗಿ ಕೊಟ್ಟ ಮಾಹಿತಿಯು 'ಹಾರ್ನಹಳ್ಳಿ ಕೈಫಿಯತ್'ನಿಂದ ದೊರೆಯುತ್ತದೆ".[೧೪] 'ಗೊಲ್ಲ' ಮತ್ತು 'ಪಾಳೇಗಾರ' ಬುಡಕಟ್ಟುಗಳು ಪ್ರಾಚೀನದಲ್ಲಿ ಒಂದೇ ಪಂಗಡ ಆಗಿದ್ದವು ಎಂಬುದಕ್ಕೆ "ಗೊಲ್ಲ ಜನಾಂಗದ ಒಳಗೆ 'ಜೆಂಕಲವರು' ಎಂಬ ಪಂಗಡದ ಪಾಳೇಗಾರರು ಇದ್ದರು. ಇವರು ಕುರುಗೋಡಿನ ಉತ್ತರ ದಿಕ್ಕಿನಲ್ಲಿ ಇರುವ ಜೆಂಕಲಹರವಿನ ಗುಡ್ಡ ಎಂಬ ಪ್ರದೇಶದಲ್ಲಿ ವಾಸವಾಗಿದ್ದರು. ಅದಕ್ಕಾಗಿಯೇ ಈ ಪ್ರದೇಶಕ್ಕೆ ಜೆಂಕಲಹರವಿನ ಗುಡ್ಡ ಎಂಬ ಹೆಸರು ಬಂದಿತು"[೧೫] ಎಂಬುದಾಗಿ ಕುರುಗೋಡು ಕೈಫಿಯತ್ತು ತಿಳಿಸುತ್ತದೆ.

"ಪಾವಗಡ ವಾಸಸ್ಥಳದ ಮೂಲ ನಿವಾಸಿಯಾದ ಸೋಮಣ್ಣ ಎಂಬ ಗೊಲ್ಲ ಜನಾಂಗದ ಪಾಳೇಗಾರ ಒಬ್ಬನು ತನಗೆ ಅಂಟಿಕೊಂಡಿದ್ದ ಅಂದಿನ ವಾಸಿಯಾಗದ ಭಯಂಕರ ಕಾಯಿಲೆಗಳಲ್ಲಿ ಒಂದಾದ ತೊನ್ನು ರೋಗದ ಉಪಶಮನಕ್ಕಾಗಿ ಸೋಮೇಶ್ವರ ದೇವರ ಮೊರೆ ಹೊಕ್ಕು ಈ ದೇವರ ದಯೆಯಿಂದ ಮನಸಾನಹಳ್ಳಿ, ಹತ್ತಿಬೆಳಗಲ್ಲಿ, ಆದವಾನಿ ಮೊದಲಾದ ಪ್ರದೇಶಗಳಲ್ಲಿ ಸೋಮೇಶ್ವರ ದೇವರಿಗೆ ಗುಡಿಗಳನ್ನು ಕಟ್ಟಿಸಿದ. ಅಲ್ಲದೆ ಚೋಳರಾಜ ಇವನು ಯಾರು ಎಂಬುದು ಸ್ಪಷ್ಟವಾಗಿ ತಿಳಿದು ಬಂದಿಲ್ಲವಾದರೂ ಅವನ ಅಪ್ಪಣೆ ಮೇರೆಗೆ ನಾಲ್ಕು ನೂರು ಗ್ರಾಮಗಳನ್ನು ನಿರ್ಮಿಸಿದ ಎಂಬ ಮಾಹಿತಿ ತಿಳಿದು ಕೊಲೆ, ಸುಲಿಗೆ, ಹತ್ಯೆ, ರಕ್ತ ಪಾತಗಳಿಂದ ಕೂಡಿದ ರಾಜ್ಯಾಧಿಪತ್ಯವನ್ನು ತ್ಯಜಿಸಿ ಪಶುಸಂಗೋಪನೆಯ ಅಭಿವೃದ್ಧಿ ಮತ್ತು ಅವುಗಳ ರಕ್ಷಣೆಯ ಕಡೆಗೆ ತನ್ನ ಗಮನ ಹರಿಸಿದ ಸಂಗತಿ ವಿಶೇಷ ಎನಿಸುತ್ತದೆಯಾದರೂ ಕುತೂಹಲ ಮೂಡಿಸುತ್ತದೆ.[೧೬] ಎಂದು ಹತ್ತಿಬೆಳಗಲ್ಲು ಕೈಫಿಯತ್ತು ವಿವರಿಸುತ್ತದೆ.

### ೩.೫. ಕಾಡುಗೊಲ್ಲರ ಕಥೆ, ಕಾವ್ಯಗಳು

ಕಾಡುಗೊಲ್ಲರಲ್ಲಿ ಕಥಾಪರಂಪರೆಯು ತುಂಬಾ ವಿಸ್ತೃತವಾಗಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಜಾಗತೀಕರಣದ ವಿಷ ವರ್ತುಲಕ್ಕೆ ಒಳಗಾದ ಅವರ ಸಂಸ್ಕೃತಿಯು ಕಥೆ ಹೇಳುವ, ಕಥೆ ಕೇಳುವ ಪರಂಪರೆಯನ್ನು ಮರೆಯುವಂತೆ ಮಾಡಿದೆ. ಸಮೂಹ ಮಾಧ್ಯಮಗಳು ಅವರ ಸೃಜನಶೀಲ ಸಾಹಿತ್ಯವನ್ನು ನಾಶ ಮಾಡಿವೆ ಎಂದರೆ ತಪ್ಪಾಗಲಾರದು. ಕಾಡುಗೊಲ್ಲರು ಹೇಳುವ ಕಥೆಗಳು ಅವರ ಇತಿಹಾಸ, ಆರ್ಥಿಕತೆ ಮತ್ತು ಸಮಾಜ ಸಂಸ್ಕೃತಿಯನ್ನು ಅರಿಯುವಲ್ಲಿ ಸಹಾಯಕವಾಗಿವೆ. ಕಾಡುಗೊಲ್ಲರಲ್ಲಿ ಕಥೆಗಳಿಗಿಂತ ಕಾವ್ಯಗಳು ಹೆಚ್ಚು ಪ್ರಸಿದ್ಧಿಯನ್ನು ಪಡೆದಿವೆ

ಎಂದು ಹೇಳಿದರೆ ತಪ್ಪಾಗಲಾರದು. ಕಾಡುಗೊಲ್ಲರ ಕಥಾಪರಂಪರೆ ಪ್ರಾರಂಭವಾಗುವುದೇ ಕಾಡುಗೊಲ್ಲರ ಮೂಲಪುರುಷರಾದ ಕಾಟಯ್ಯ, ಚಿತ್ತಯ್ಯ ಮತ್ತು ಓಬಳಪತಿ ಕಥೆಗಳ ಮೂಲಕ. ಕಾಡುಗೊಲ್ಲರು ಕಾವ್ಯವನ್ನು ಎಲ್ಲರೂ ಹಾಡುವುದಿಲ್ಲ. ಆದರೆ ಕಥೆಯನ್ನು ಮಾತ್ರ ಎಲ್ಲರೂ ಹೇಳುತ್ತಾರೆ. ಕಾವ್ಯ ಹೇಳದವರು ಕಥೆಗಳ ಮೂಲಕ ಅವರ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡುತ್ತಾರೆ. ಎಲ್ಲಾ ಸಾಂಸ್ಕೃತಿಕ ನಾಯಕರ ಬಗ್ಗೆ ಕಥೆಗಳಿವೆ. ಈ ಕಥೆಗಳು ಸಹ ಪ್ರಾದೇಶಿಕವಾಗಿ ಪ್ರಭಾವಕ್ಕೆ ಅನುಗುಣವಾಗಿ ಭಿನ್ನತೆಯನ್ನು ಹೊಂದಿವೆ. ಎತ್ತಪ್ಪನ ಕಥೆ, ಜುಂಜಪ್ಪನದು ಮೂರು ತಲೆಮಾರಿನ ಕಥೆ. ಮೊದಲನೇ ತಲೆಮಾರಿನಲ್ಲಿ ದೇವರ ದಯಮಾರ ಬಂದರೆ, ಎರಡನೇ ತಲೆಮಾರಿನಲ್ಲಿ ಕೆಂಗುರಿ ಮಲೆಗೌಡ ಬರುತ್ತಾನೆ. ಮೂರನೇ ತಲೆಮಾರಿನಲ್ಲಿ ಜುಂಜಪ್ಪ ಬರುತ್ತಾನೇ ಕೆಲವು ಮಾಹಿತಿದಾರರ ಪ್ರಕಾರ ಎತ್ತಪ್ಪನ ಕಥೆಯ ಮುಂದುವರಿದ ಭಾಗವೇ ಜುಂಜಪ್ಪನ ಕಥೆ ಎಂದು ಖ್ಯಾತ ಜಾನಪದ ವಿದ್ವಾಂಸರಾದ ಮೀರಸಾಬಿಹಳ್ಳಿ ಶಿವಣ್ಣನವರು ಅಭಿಪ್ರಾಯಪಡುತ್ತಾರೆ. ಕಾಡುಗೊಲ್ಲರದು ಬಹುದೊಡ್ಡ ಕಥಾ ಪರಂಪರೆ ಇದೆ. ಉದಾ: ಚಿತ್ತಯ್ಯ ಕಾಟಯ್ಯರ ಕಥೆ, ವೀರಸಾತಣ್ಣನ ಕಥೆ, ವೀರಯರ್‍ರಣ್ಣನ ಕಥೆ, ಗೊಲ್ಲಳಮ್ಮನ ಕಥೆ, ವೀರಮಿಂಚಣ್ಣನ ಕಥೆ, ವೀರಸಿಂಪಣ್ಣನ ಕಥೆ, ವೀರಕಾಟಮ್ಮ, ಕರಡಿ ಬುಳ್ಳಪ್ಪನ ಕಥೆ, ಪಾತೇಲಿಂಗನ ಕಥೆ, ನಿಂಗಣ್ಣನ ಕಥೆ, ಕ್ಯಾತಪ್ಪನ ಕಥೆ ಇತ್ಯಾದಿ. ಹೀಗೆ ಪಟ್ಟಿ ಮಾಡುತ್ತಾ ಹೋದರೆ ಸಾವಿರಾರು ಕಥೆಗಳು ದೊರೆಯುತ್ತವೆ. ಈ ಎಲ್ಲಾ ಕಥೆಗಳು ಕಾಡುಗೊಲ್ಲರ ಅನನ್ಯತೆಯನ್ನು ಅವರ ಸಂಸ್ಕೃತಿಯನ್ನು ಹೇಳುತ್ತವೆ. ಆದರೆ ಜಗತ್ತು ಇಷ್ಟು ಮುಂದುವರಿದರೂ ಅವರ ಸಾಹಿತ್ಯ ಮಾತ್ರ ಜಗತ್ತಿಗೆ ಪರಿಚಯವೇ ಆಗಿಲ್ಲ ಎಂದರೆ ವಿಷಾದದ ಸಂಗತಿ.

**ಕಾವ್ಯಗಳು:** ನನ್ನ ಅಧ್ಯಯನದ ದೃಷ್ಟಿಯಿಂದ ಹೇಳುವುದಾದರೆ ಕಾಡುಗೊಲ್ಲರಲ್ಲಿ ಅಥವಾ ಅವರ ಮೌಖಿಕ ಪರಂಪರೆಯಲ್ಲಿ ಇರುವಷ್ಟು ಕಾವ್ಯ ಪರಂಪರೆಯು ಬೇರೆ ಯಾವ ಸಮುದಾಯದಲ್ಲಿಯೂ ಕಂಡು ಬಾರದಿರುವುದು ಆಶ್ಚರ್ಯದ ಸಂಗತಿಯಾಗಿದೆ. ಏಕೆಂದರೆ ಕಾಡುಗೊಲ್ಲರು ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಹಿಂದುಳಿದಿದ್ದರೂ ಸಹ ಅವರ ಕಾವ್ಯ ಶ್ರೀಮಂತಿಕೆಯನ್ನು ಹೊಂದಿದವರಾಗಿದ್ದಾರೆ. ಇದು ಅವರ ಸಾಂಸ್ಕೃತಿಕ ಶ್ರೀಮಂತಿಕೆಗೆ ಕೈಗನ್ನಡಿಯಾಗಿದೆ. ಕಾಡುಗೊಲ್ಲರ ಎಲ್ಲಾ ಸಾಂಸ್ಕೃತಿಕ ನಾಯಕರ ಮೇಲೆಯೂ ಕಾವ್ಯಗಳು ಸೃಷ್ಟಿಯಾಗಿವೆ. ಕಾಡುಗೊಲ್ಲರು ಮುಖ್ಯವಾಗಿ ಪಶುಪಾಲಕರಾಗಿರುವ ಕಾರಣ ಅವರಿಗೆ ವಲಸೆ ಅನಿವಾರ್ಯವಾಗಿದೆ. ಇದರ ಜೊತೆಗೆ ಕಾಡುಗೊಲ್ಲರು ಪ್ರಕೃತಿ ಆರಾಧಕರು. ಕಾಡುಗೊಲ್ಲರ ಎಲ್ಲಾ ಸಾಂಸ್ಕೃತಿಕ ನಾಯಕರ ಸೃಷ್ಟಿಯು ಪಶುಪತಿಯಿಂದ ನಡೆದಿರುವಂತಹದ್ದು. ಕಾಡುಗೊಲ್ಲರ ಸಾಂಸ್ಕೃತಿಕ ನಾಯಕರು ವೀರ ಮರಣವನ್ನು ಹೊಂದಿರುವುದರ ಬಗ್ಗೆ ಮಾಹಿತಿಯನ್ನು ಕಾವ್ಯಗಳು ನೀಡುತ್ತವೆ. ಅವರ ಕಾವ್ಯ ಪ್ರಕಾರಗಳೆಂದರೆ ಕಗ್ಗದ ಪದ, ಸೋಬಾನೆ ಪದಗಳು, ಸರಳ ರಗಳೆ, ತ್ರಿಪದಿ, ಷಟ್ಪದಿಗಳು ಹಾಗು ಸಾಂಗತ್ಯ ರೂಪದಲ್ಲಿರುತ್ತವೆ. ಭೂಮಿಯನ್ನು ನೆನೆಯುವ ಪದಗಳು, ಸೂರ್ಯ ಚಂದ್ರಾದಿಯರನ್ನು ನೆನೆಯುವ ಪದಗಳು, ಸುಗ್ಗಿಯ ಪದಗಳು ಹೀಗೆ ಅನೇಕ ರೀತಿಯ ಸಾಹಿತ್ಯದ ಸಂಭ್ರಮವೇ ಅವರಲ್ಲಿದೆ. ಯುದ್ಧದಲ್ಲಿ ಅದು ಮನುಷ್ಯರ ಜೊತೆ ಹೋರಾಟ ಮಾಡಿ ಮಡಿದವರನ್ನು ವೀರಗಾರರೆಂದು ಕರೆದು ಅವರ ನೆನಪಿಗಾಗಿ ಅವರು ಬಳಸುತ್ತಿದ್ದ

ಆಯುಧವನ್ನು ದೇವರೆಂದು ಪರಿಗಣಿಸುವ ಪ್ರವೃತ್ತಿಯು ಕಾಡುಗೊಲ್ಲರಲ್ಲಿದೆ. ಪ್ರತಿಯೊಬ್ಬ ನಾಯಕನಿಗೂ ಒಂದೊಂದು ಕಾವ್ಯವನ್ನು ಕಟ್ಟಿರುವುದು ಕಾಡುಗೊಲ್ಲರ ವಿಶೇಷ. ಜುಂಜಪ್ಪ ಮತ್ತು ಎತ್ತಪ್ಪನಂತಹ ಇನ್ನೂ ಅನೇಕ ಕಾವ್ಯಗಳು ಕಾಡುಗೊಲ್ಲರಲ್ಲಿವೆ. ಚಿತ್ತಯ್ಯನ ಕಾವ್ಯ, ಕಾಟಯ್ಯನ ಕಾವ್ಯ, ಕರಡಿ ಬುಳ್ಳಪ್ಪನ ಕಾವ್ಯ, ವೀರ ತಿಪ್ಪಣ್ಣನ ಕಾವ್ಯ, ಕೊಂಡದ ಕಾಟಮ್ಮನ ಕಾವ್ಯ ಒಟ್ಟಾರೆಯಾಗಿ ಹೇಳುವುದಾದರೆ ಪ್ರತಿಯೊಂದು ಬೆಡಗಿಗೂ ವೀರಗಾರರಿದ್ದಾರೆ. ಪ್ರತಿಯೊಂದು ಹಟ್ಟಿಯಲ್ಲಿಯೂ ಒಂದೊಂದು ಈ ವಿಷಯದಲ್ಲಿ ಕಾವ್ಯವಿರುತ್ತದೆ. ಸಂಶೋಧಕರ ಮೇಲೆ ಬಹುದೊಡ್ಡ ಜವಾಬ್ದಾರಿ ಇದೆ. ಅಷ್ಟೇ ಅಲ್ಲ ಅಷ್ಟೂ ಕಾವ್ಯಗಳು ಸಂಗ್ರಹಿಸದೇ ನಶಿಸಿಹೋಗಿವೆ. ಕಾವ್ಯ ಹಾಡುವ ಪರಂಪರೆ ಕಡಿಮೆಯಾಗಿದೆ. ಸಿನಿಮಾ ಮಾಧ್ಯಮ ಅವರ ಮೌಖಿಕ ಪರಂಪರೆಯನ್ನು ಮರೆಯುವಂತೆ ಮಾಡಿದೆ.

**೩.೬. ಕಾಡುಗೊಲ್ಲರ ಇತರೆ ಸಾಹಿತ್ಯ ಪ್ರಕಾರಗಳು ಮತ್ತು ಭಾಷೆ**

ಕನ್ನಡ ವಿಶ್ವವಿದ್ಯಾಲಯದಿಂದ ನಾಡೋಜ ಪ್ರಶಸ್ತಿ ಪಡೆದುಕೊಂಡ ಸಿರಿಯಜ್ಜಿಯಂತಹ ಹಲವಾರು ಕಲಾವಿದರು ಕಾಡುಗೊಲ್ಲರು ಹಟ್ಟಿಗಳಲ್ಲಿದ್ದಾರೆ. ಆದರೆ ಸಿರಿಯಜ್ಜಿಯ ದಾಖಲೆಯನ್ನು ಯಾರಿಂದಲೂ ಮುರಿಯಲು ಸಾಧ್ಯವಿಲ್ಲವೆಂದು ಹೇಳಬಹುದು. ಆಡು ಮುಟ್ಟದ ಸೊಪ್ಪಿಲ್ಲ ಸಿರಿಯಜ್ಜಿ ಹೇಳದ ಪದವಿಲ್ಲ ಎನ್ನುವಂತೆ ಒಂದು ತಿಂಗಳ ಕಾಲ ಸತತವಾಗಿ ಪದ ಆಡಿದರೂ ಮುಗಿಯದಷ್ಟು ಪದಗಳನ್ನು ಸಿರಿಯಜ್ಜಿ ಹೇಳುತ್ತಿದ್ದಳು ಎಂದು ಹಲವಾರು ವಿದ್ವಾಂಸರು ಹೇಳುತ್ತಾರೆ.

"ಸಿರಿಯಜ್ಜಿಯ ನೆನಪಿನಲ್ಲಿರುವ ಜನಪದ ಕಥನಗೀತೆಗಳಲ್ಲಿ ಗಿರಿಜಾಕಲ್ಯಾಣ, ಅರ್ಜುನ ದ್ರೌಪದಿ, ಎತ್ತಪ್ಪ ಮತ್ತು ಕರಡಿ ಬುಳ್ಳಪ್ಪ ಈ ಹಾಡುಗಳು ಇವೆ. ಇವು ಒಂದೊಂದು ನೂರಕ್ಕೂ ಮಿಕ್ಕೂ ತ್ರಿಪದಿ, ದ್ವಿಪದಿಗಳಲ್ಲಿವೆ. ಸಾಮಾನ್ಯವಾಗಿ ಎಲ್ಲ ಜನಪದ ಹಾಡುಗಳಲ್ಲಿ ಶಿವ ಅಥವಾ ಗಣನಾಯಕನ ಪ್ರಾರ್ಥನೆಯೇ ಹೆಚ್ಚು".[೧೭]

ಸಿರಿಯಜ್ಜಿಯವರಂತೆ ಇನ್ನೂ ಅನೇಕ ಜನ ಪದಗಾರರು ಪದಗಾರ್ತಿಯರು ಗೊಲ್ಲರ ಹಟ್ಟಿಗಳಲ್ಲಿ ಕಂಡುಬರುತ್ತಾರೆ. ಸಿರಾ ತಾಲ್ಲೂಕಿನ ಲಕ್ಕವ್ವನಹಳ್ಳಿ ದೊಡ್ಡ ಗೊಲ್ಲರಹಟ್ಟಿಯಲ್ಲಿ ಚಿಕ್ಕಣ್ಣನವರು ಚಿತ್ರದೇವರ ಕಾವ್ಯವನ್ನು ಪ್ರಾರಂಭದಿಂದ ಕೊನೆವರೆಗೆ ಎಂಟು ದಿನಗಳ ಕಾಲ ಹಾಡುತ್ತಾರೆ. ಅದರಂತೆ ಗೊಲ್ಲಳಮ್ಮನ ಕಾವ್ಯವನ್ನು ಪುಟ್ಟಮ್ಮ ಎಂಬ ದಲಿತ ಮಹಿಳೆ ತನ್ನ ಸಂಗಡಿಗರೊಂದಿಗೆ ಹಾಡುತ್ತಾರೆ. ವೀರ ಕೆಂಪಣ್ಣ ಮತ್ತು ವೀರ ಮಿಂಚಣ್ಣನ ಕಾವ್ಯವನ್ನು ಸಿರಾ ತಾಲ್ಲೂಕಿನ ಎ. ದಾಸಪ್ಪನವರು ಹಾಡುತ್ತಿದ್ದರು. ವೀರ ತಿಮ್ಮಣ್ಣನ ಕಾವ್ಯವನ್ನು ಬಾಲೆನಹಳ್ಳಿ ತಿಮ್ಮಕ್ಕ ಹಾಡುತ್ತಾರೆ. ಕಾವಲಮ್ಮನ ಕಾವ್ಯವನ್ನು ಆಂಧ್ರಪ್ರದೇಶ ಅನಂತಪುರ ಜಿಲ್ಲೆಯ ಮಡಕಶಿರಾ ತಾಲ್ಲೂಕಿನ ಯಶೋಧಮ್ಮ, ತಿಪ್ಪಮ್ಮ ಮತ್ತು ಸಂಗಡಿಗರು ಹಾಡುತ್ತಾರೆ. ಇನ್ನೂ ಸಾಕಷ್ಟು ದೇವರ ಕಾವ್ಯಗಳು ಸಂಗ್ರಹವಾಗಿಲ್ಲ. ಅವುಗಳನ್ನು ಸಂಗ್ರಹ ಮಾಡುವ ಅನಿವಾರ್ಯತೆ ಇದೆ. ಏಕೆಂದರೆ ಮಾಹಿತಿದಾರರು ಸಾಕಷ್ಟು ವಯಸ್ಸಾದವರು. ಕಾಲನ ಕರೆ ಬಂದಾಗ ಅವರು ಹೋಗಬೇಕಾಗುತ್ತದೆ. ಅದೇ ರೀತಿಯಾಗಿ ಅವರ ಹಿಂದೆ ಅವರು ಕಲಿತಿರುವ ಕಾವ್ಯಗಳು ಮಣ್ಣುಪಾಲು ಆಗುತ್ತವೆ. ಹಾಗಾಗಿ ಕಾಡುಗೊಲ್ಲರ ಸಾಹಿತ್ಯವನ್ನು ಸಂಗ್ರಹಿಸಿರುವುದು ಕಡಿಮೆ.

ಸಂಗ್ರಹಿಸಬೇಕಾಗಿರುವುದು ಸಾಕಷ್ಟು ಇದೆ. ಆ ಕಾರಣದಿಂದ ಕಾಡುಗೊಲ್ಲರ ಸಂಸ್ಕೃತಿಯು ಶ್ರೀಮಂತವಾಗಿದೆ.

**ಭಾಷೆ:** ಕಾಡುಗೊಲ್ಲರದು ಕನ್ನಡದ ಉಪಭಾಷೆಯೆಂದು ಹೇಳಬಹುದು. ಕರ್ನಾಟಕ ಹಾಗೂ ಆಂಧ್ರವನ್ನೊಳಗೊಂಡಂತೆ ವಾಸವಾಗಿರುವ ಕಾಡುಗೊಲ್ಲರು ಮಾತೃ ಭಾಷೆಯಾಗಿ ಕನ್ನಡವನ್ನು ಮಾತನಾಡುತ್ತಾರೆ. ಆಂಧ್ರದಲ್ಲಿ ವಾಸಿಸಿರುವ ಕಾಡುಗೊಲ್ಲರು ಆಡಳಿತಾತ್ಮಕವಾಗಿ ತೆಲುಗು ಮಾತನಾಡಿದರೆ ತಮ್ಮ ಮನೆಗಳಲ್ಲಿ ಅಥವಾ ಹಟ್ಟಿಗಳಲ್ಲಿ ಕನ್ನಡ ಮಾತನಾಡುತ್ತಿರುವುದು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದುಬಂದಿದೆ. ಕೆಲವು ಗಡಿಭಾಗಗಳಲ್ಲಿ ಬೇರೆ ಭಾಷೆಗಳ ಪ್ರಭಾವ ಕಾಡುಗೊಲ್ಲರ ಮೇಲೆ ಆಗಿದ್ದರೂ ಕನ್ನಡ ಮಾತನಾಡುವುದು ಕಂಡುಬಂದಿದೆ. ಕಾಡುಗೊಲ್ಲರದೇ ಆದ ಪ್ರತ್ಯೇಕ ಪದಕೋಶ ಮಾಡುವುದಕ್ಕೆ ಅವಕಾಶವಿದೆ. ಇವರು ಹಾಡುವ ಭಾಷೆಯ ಆಧಾರದ ಮೇಲೆ ಕಾಡುಗೊಲ್ಲರು ಮೂಲನಿವಾಸಿಗಳು ವಲಸೆ ಬಂದವರಲ್ಲ ಎಂದು ಹೇಳಬಹುದು.

**ಜನಪದ ನೃತ್ಯಗಳು:** ಕಾಡುಗೊಲ್ಲರಲ್ಲಿ ಅನೇಕ ನೃತ್ಯಗಳಿವೆ. ಅವುಗಳನ್ನು ಆ ಸಮುದಾಯ ಬಿಟ್ಟರೆ ಇತರೇ ಯಾವ ಸಮುದಾಯದಲ್ಲಿ ಕಂಡುಬಾರದ ಜನಪದ ನೃತ್ಯಗಳಿವೆ. ಕಾಡುಗೊಲ್ಲರು ಶೈಕ್ಷಣಿಕವಾಗಿ ಹಿಂದುಳಿದಿರುವುದರಿಂದ ಜೊತೆಗೆ ವಲಸೆ ಪ್ರವೃತ್ತಿ ಇನ್ನೂ ಮುಂದುವರಿದಿರುವುದರಿಂದ ಅವರ ಜನಪದ ನೃತ್ಯಗಳು ಅನಕ್ಷರಸ್ಥರಲ್ಲಿ ಹೆಚ್ಚಾಗಿ ಉಳಿದುಕೊಂಡಿವೆ ಎಂದರೆ ತಪ್ಪಾಗಲಾರದು. ಆಧುನಿಕತೆಯ ಪ್ರಭಾವ, ಜಾಗತೀಕರಣದ ಪ್ರಭಾವ, ಕೈಗಾರಿಕೀಕರಣದ ಪ್ರಭಾವ ಅವರ ದೇವರುಗಳ ನೃತ್ಯಗಳ ಮೇಲೆ ಬೀರಿರುವುದು ಕಂಡುಬಂದಿಲ್ಲ. ಇವರ ಜಾನಪದ ಕಲೆ ಶ್ರೀಮಂತವಾಗಿದೆ. ಎಷ್ಟೋ ಜನ ಕುರಿಗಾಹಿಗಳು ಹಾಗೂ ದನಗಾಹಿಗಳು ಆಧುನಿಕ ಸಂಗೀತಕ್ಕಿಂತ ತಮ್ಮ ಸಮುದಾಯಗಳಲ್ಲಿ ಹಾಡುವ ಸಾಂಸ್ಕೃತಿಕ ನಾಯಕರುಗಳ ಕಾವ್ಯಗಳನ್ನು ತಮ್ಮ ಮೊಬೈಲ್‌ಗಳಲ್ಲಿ ರೆಕಾರ್ಡ್ ಮಾಡಿಕೊಂಡು ಕೇಳುತ್ತಿರುತ್ತಾರೆ. ಆದರೆ ಮಾಧ್ಯಮಗಳಿಂದ ದೂರ ಉಳಿದಂತಹ ಕಾಲದಲ್ಲಿ ದೇವರ ಕಾವ್ಯಗಳ ಮೇಲೆ ಅತಿಯಾದ ನಂಬಿಕೆಯನ್ನು ಇಟ್ಟುಕೊಂಡಿದ್ದರು. ಕಾವ್ಯವನ್ನು ಸಮೂಹಗಳಲ್ಲಿ ಕೇಳುವುದರ ಮೂಲಕ ಕಲಿತುಕೊಳ್ಳುತ್ತಿದ್ದರು. ಇವತ್ತು ಮೊಬೈಲ್ ಮೂಲಕ ಕೇಳಿಸಿಕೊಂಡು ಆನಂದಪಡುತ್ತಾರೆ ಅಷ್ಟೆ.

**ಕೋಲಾಟ:** ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಕೋಲು ಹೊಯ್ಯುವುದರಲ್ಲಿ ನಿಸ್ಸೀಮರು ಎಂದು ಹೇಳಬಹುದು. ಪ್ರತಿಯೊಂದು ಹಟ್ಟಿಯಲ್ಲಿಯೂ ಕೋಲಾಟಗಾರರನ್ನು ಗುರುತಿಸಬಹುದು. ಎಷ್ಟೇ ದಣಿದಿದ್ದರೂ ಕೂಡ ಕೋಲೊಯ್ಯುವುದು ಮಾತ್ರ ನಿರಂತರವಾಗಿ ಮುಂದುವರಿದುಕೊಂಡು ಬಂದಿದೆ. ದಿನವಿಡಿ ಕುರಿ ಕಾಯುವವರು ಕುರಿ ಕಾಯುತ್ತಾರೆ, ದನ ಕಾಯುವವರು ದನ ಕಾಯುತ್ತಾರೆ. ರೈತ ಕೆಲಸ ಮಾಡುವವರು ಹೊಲಗಳಲ್ಲಿ ದುಡಿಯುತ್ತಾರೆ. ಕಾಡುಗೊಲ್ಲರ ಒಂದು ವಿಶೇಷವೆಂದರೆ ಕಾಡುಗೊಲ್ಲರು ಸಂಜೆ ೭ ಗಂಟೆಯ ಒಳಗೆ ಊಟ ಮಾಡಿ ಎಲೆ ಅಡಿಕೆ ಹಾಕಿಕೊಳ್ಳುತ್ತಾರೆ. ಅನಂತರ ಮನಸ್ಸಂತೋಷವಾಗಿ ಕೋಲಾಟವಾಡುತ್ತಾರೆ. ಕೋಲಾಟ ಕಲಿಸುವ ವ್ಯಕ್ತಿಯು ಕೋಲಾಟ ಕಲೆಯಲ್ಲಿ ಪ್ರವೀಣನಾಗಿರುತ್ತಾನೆ. ಆ ಕಲೆಯು ಕಾಡುಗೊಲ್ಲರಿಗೆ ಮಾತ್ರ ಸಿದ್ಧಿಸಿದಂತೆ ಬೇರೆಯವರಿಗೆ

ಬಹುಬೇಗ ಸಿದ್ಧಿಸುವುದಿಲ್ಲ. ಅಷ್ಟಲ್ಲದೇ ಇವರ್‍ಯಾರು ವೃತ್ತಿಗಾಯಕರಾಗಿರುವುದಿಲ್ಲ. ಹವ್ಯಾಸಿ ಕಲಾವಿದರಾಗಿರುತ್ತಾರೆ. ಕೋಲಾಟವನ್ನು ಪ್ರಾರ್ಥನೆ ಗೀತೆಯನ್ನು ಹಾಡುವುದರ ಮೂಲಕ ಪ್ರಾರಂಭ ಮಾಡುತ್ತಾರೆ.

ಎದ್ದು ಬಾರೆ ಸರಸ್ವತಿ ಹೆಜ್ಜೆಗೊಂದು
ನೆಯ್ಸೇವು ಕೋಲನ್ನ ಕೋಲೆ
ಗೆಜ್ಜೆ ಪೂಜೆಗೆ ನಾ ಬರುತೀವಿಕೋಲನ್ನ ಕೋಲೆ
ಆರು ಜೊತೆ ಕೋಲಾಟ ಆನೆ ಮೇಲೆ
ಏರಿಕೊಂಡು ಕೋಲನ್ನ ಕೋಲೆ
ಆರಾಳು ನಾವು ಏ ಬರುತೀವಿಕೋಲನ್ನ ಕೋಲೆ
ಏಂಟು ಜತೆ ಕೋಲಾಟ ಒಂಟೆ ಮ್ಯಾಲೆ
ಏರಿಕೊಂಡು ಕೋಲನ್ನ ಕೋಲೆ
ಎಂಟಾಳು ನಾವು ಏ ಬರುತೀವಿಕೋಲನ್ನ ಕೋಲೆ
ಹತ್ತು ಜೊತೆ ಕೋಲಾಟ ಎತ್ತಿನ ಮ್ಯಾಲೆ
ಏರಿಕೊಂಡು ಕೋಲನ್ನ ಕೋಲೆ
ಹತ್ತಾಳು ನಾವು ಏ ಬರುತೀವಿ ಕೋಲನ್ನ ಕೋಲೆ

ಈ ರೀತಿಯಾಗಿ ಪ್ರಾರ್ಥನೆ ಗೀತೆಯನ್ನು ಹಾಡುವುದರ ಮೂಲಕ ಕೋಲಾಟವನ್ನು ಪ್ರಾರಂಭಿಸುತ್ತಾರೆ. ಅದೇ ರೀತಿ ಮುಕ್ತಾಯದ ಸಂದರ್ಭದಲ್ಲಿಯೂ ಕೂಡ ಮಂಗಳ ಗೀತೆಯೊಂದಿಗೆ ಮುಕ್ತಾಯ ಮಾಡುತ್ತಾರೆ. ಪ್ರತಿದಿನ ಕೋಲು ಹೊಯ್ಯುವಾಗ ಸಾಧಾರಣ ಉಡುಪಿನೊಂದಿಗಿರುತ್ತಾರೆ. ಆದರೆ ಜಾತ್ರೆ ದೇವರು ಹಬ್ಬ ಮುಂತಾದ ಸಮಯಗಳಲ್ಲಿ ಕೋಲು ಹೊಯ್ಯುವವರು. ಕಾಲಿಗೆ ಗೆಜ್ಜೆ ಕಟ್ಟಿಕೊಳ್ಳುತ್ತಾರೆ. ತಲೆಗೆ ಟವೆಲ್ ಸುತ್ತುತ್ತಾರೆ. ಹಣೆಗೆ ವಿಭೂತಿ ಧರಿಸುತ್ತಾರೆ. ನಿಕ್ಕರ್ ಮತ್ತು ಬಾಡಿಯನ್ನು ತೊಟ್ಟಿರುತ್ತಾರೆ. ಜಡೆಕೋಲು, ತಿಪದಿ, ಸಾದ ಈ ರೀತಿಯಾಗಿ ಅನೇಕ ಬಗೆಯ ಕೋಲಾಟಗಳನ್ನು ಹಾಡುತ್ತಾರೆ. ಕೋಲಾಟವಾಡಲು ಕೋಲುಗಳನ್ನು ಕಾರೆ ಗಿಡದಿಂದ ಇಲ್ಲವೇ ಒನಕೆಯ ಗಿಡದಿಂದ ತಯಾರಿಸುತ್ತಾರೆ. ಅವುಗಳಿಗೆ ಗೆಜ್ಜೆಯನ್ನು ಹಾಕಿರುತ್ತಾರೆ. ಕೋಲಾಟದಲ್ಲಿ ಕೋಲಾಟಗಾರರು ಸಮಸಂಖ್ಯೆಯಲ್ಲಿರಬೇಕಾಗುತ್ತದೆ. ಮುಮ್ಮೇಳದಲ್ಲಿ ಮೊದಲು ಹಾಡು ಪ್ರಾರಂಭವಾದರೆ ಅದನ್ನು ಹಿಮ್ಮೇಳದವರು ಮುಂದುವರಿಸುತ್ತಾರೆ. ಕೋಲಾಟವು ನೋಡುಗರಿಗೆ ಮತ್ತು ಆಡುಗರಿಗೆ ತುಂಬಾ ಉತ್ಸಾಹಭರಿತವಾಗಿರುತ್ತದೆ. ಗುರುವು ಹೇಳಿಕೊಟ್ಟ ರೀತಿಯಲ್ಲಿ ಜುಂಜಪ್ಪನ ಪದಗಳು ಮಾರಮ್ಮನ ಪದಗಳು, ಎತ್ತಪ್ಪನ ಪದಗಳನ್ನು ಹಾಡುತ್ತಾರೆ. ಕೋಲಾಟದ ಕುಣಿತಕ್ಕೆ ಒಂದು ಲಯವಿದೆ. ಆ ಲಯ ತಪ್ಪಿದರೆ ಕೋಲಾಟ ಅಸಹ್ಯವೆನಿಸುತ್ತದೆ. ಇತ್ತೀಚೆಗೆ ಆಧುನಿಕತೆಯ ಸಂದರ್ಭದಲ್ಲಿ ಟಿವಿ

ಬಂದು ಕಾಡುಗೊಲ್ಲರು ಹೆಚ್ಚು ಸಮಯವನ್ನು ಟಿವಿ ಮುಂದೆ ಕಳೆಯುವಂತೆ ಮಾಡಿದೆ. ಹಿಂದೆ ಪ್ರತಿ ರಾತ್ರಿ ನಡೆಯುತ್ತಿದ್ದ ಕೋಲಾಟ, ಪ್ರಸ್ತುತ ದಿನಮಾನಗಳಲ್ಲಿ ಕೇವಲ ಹಬ್ಬ ದೇವರು ಜಾತ್ರೆಗಳಿಗೆ ಮಾತ್ರ ಸೀಮಿತವಾಗಿದೆ. ಇತ್ತೀಚಿನ ದಿನಗಳಲ್ಲಿ ಕೋಲಾಟ ಅವನತಿಯ ಹಾದಿಯನ್ನು ಹಿಡಿದಿದೆ ಎಂದು ಹೇಳಬಹುದು.

**ಗಣೆ ವಾದ್ಯ:** ಇದು ಕಾಡುಗೊಲ್ಲರ ಅನನ್ಯತೆಯ ಪ್ರತೀಕವಾಗಿದೆ. ಕಾಡುಗೊಲ್ಲರ ಕಲಾವಾದ್ಯ ಯಾವುದೆಂದರೆ ಗಣೆ ಎಂದು ಹೇಳಬಹುದು. ಗಣೆಯ ಮೂಲಕವೇ ಕಾಡುಗೊಲ್ಲರನ್ನು ಗುರುತಿಸುತ್ತಾರೆ. ಈ ಗಣೆಯು ಆರು ಅಡಿಯಿಂದ ಎಂಟು ಅಡಿಯವರೆಗೆ ಉದ್ದವಿರುತ್ತದೆ. ಅದನ್ನು ಉತ್ತಮ ಬಿದಿರಿನಿಂದ ತಯಾರು ಮಾಡುತ್ತಾರೆ. ಏಳು ಕಣ್ಣುಗಳಿರುತ್ತವೆ. ಊದುವುದಕ್ಕೆ ಒಂದು ಕಣ್ಣು, ಉಳಿದ ಆರು ಕಣ್ಣುಗಳ ನಾದ ಹೊರಹೊಮ್ಮಲು ಸಹಾಯಕವಾಗುತ್ತದೆ. ಕಾಡುಗೊಲ್ಲರ ಗಣೆಯನ್ನು ದೇವರೆಂದು ಭಾವಿಸುತ್ತಾರೆ. ಗಣೆ ಊದುವುದರ ಮೂಲಕ ದೇವರು ಮೈಮೇಲೆ ಬರುತ್ತದೆ. ಈ ಗಣೆಯು ಹಾಳಾಗದಂತೆ ತಾಮ್ರದ ತಗಡನ್ನು ಕಟ್ಟುತ್ತಾರೆ. ಎಲ್ಲಾ ದೇವರುಗಳ ಕಾವ್ಯಗಳಲ್ಲಿ ಗಣೆ ಊದುವುದರ ಮೂಲಕ ಹಾಡುವುದು ಕಂಡುಬರುತ್ತದೆ. ಕೆಲವೊಂದು ಗೊಲ್ಲರ ಹಟ್ಟಿಯ ದೇವರ ಗುಡಿಯಲ್ಲಿ ಗಣೆಗಳಿರುವುದನ್ನು ಗಮನಿಸಬಹುದು. ಹಿರಿಯೂರು ತಾಲ್ಲೂಕಿನ ಇಕ್ಕನೂರಿನಲ್ಲಿ ಕಾಮದೇವರ ಗುಡಿಯಲ್ಲಿ ೮ ಅಡಿಯ ಎರಡು ಗಣೆಗಳಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಕಾಮದೇವರ ಪೂಜಾರಿ ಕರಿಯಣ್ಣ ಎಂಬುವವರು ಗಣೆ ಊದುವುದರ ಮೂಲಕ ಕಾಟಮದೇವರ ಪವಾಡಗಳನ್ನು ಮೆರೆಯುತ್ತಾರೆ.

ಗಣೆ ಊದದೆ ಹಾಡುವ ಕಾವ್ಯ ನೀರಸವೆನಿಸುತ್ತದೆ. ಗಣೆ ಊದುವುದರಿಂದ ಹಾಡುಗಾರನಿಗೂ ಸ್ವಲ್ಪ ಸಮಯ ವಿಶ್ರಾಂತಿ ದೊರೆಯುತ್ತದೆ ಮತ್ತು ಉತ್ಸಾಹ ಇಮ್ಮಡಿ ಆಗುತ್ತದೆ. ಹಟ್ಟಿಯಲ್ಲಿ ಯಾರೊಬ್ಬರ ಮನೆಯಲ್ಲಿ ಗಣೆ ಊದುತ್ತಾರೆ ಎಂದರೆ ಅಲ್ಲಿ ಜನ ಕಿಕ್ಕಿರಿದಿರುತ್ತಾರೆ. ಅಷ್ಟೊಂದು ಪ್ರಭಾವಿತವಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಗಣೆ ಊದುವವರು ಸಿಗುವುದು ಕಷ್ಟವಾಗಿದೆ. ಕಾವ್ಯ ಹಾಡುವವರು ದೊರೆತರೂ ಗಣೆ ಊದುವವರನ್ನು ಹುಡುಕುವುದು ಕಷ್ಟವೆಂದು ಹೇಳಬಹುದು. ಗಣೆಯನ್ನು ಎಲ್ಲರಿಂದಲೂ ಊದಲು ಸಾಧ್ಯವಿಲ್ಲ. ಅದಕ್ಕೆ ಸಾಕಷ್ಟು ಅಭ್ಯಾಸದ ಅವಶ್ಯಕತೆ ಇರುತ್ತದೆ. ಸಾಕಷ್ಟು ಉಸಿರನ್ನು ಬಿಗಿ ಹಿಡಿದು ಊದಬೇಕಾಗುತ್ತದೆ. ಇತ್ತೀಚಿನ ಜನಸಂಖ್ಯೆಯಲ್ಲಿ ಗಣೆ ಊದುವವರು ಇಲ್ಲವೇ ಇಲ್ಲವೆನ್ನಬಹುದು.

**ಡೋಲು:** ಕಾಡುಗೊಲ್ಲರ ಹುರಿಮೆ ಮತ್ತು ಡೋಲುಗಳಿಗೆ ಪ್ರಮುಖವಾದ ಸ್ಥಾನವನ್ನು ನೀಡಿರುವುದು ಕಂಡುಬರುತ್ತದೆ. ಹುರಿಮೆ ಮತ್ತು ಡೋಲು ಇಲ್ಲದಿದ್ದರೆ ಅವರ ದೇವರುಗಳು ಗುಡಿಯಿಂದ ಹೊರಬರುವುದಿಲ್ಲ. ಹುರಿಮೆಯನ್ನು ಛಲವಾದಿ ಜನಾಂಗದವರು ತಯಾರು ಮಾಡಿಕೊಂಡಿರುತ್ತಾರೆ. ಆದರೆ ಡೋಲನ್ನು ಕಾಡುಗೊಲ್ಲರೇ ತಯಾರು ಮಾಡುತ್ತಾರೆ. ಡೋಲು ಎರಡು ಹುರಿಮೆಗೆ ಸಮವಾಗಿರುತ್ತದೆ. ಡೋಲು ತಯಾರಿಸಲು ದಪ್ಪವಾಗಿರುವ ಕಬ್ಬಿಣದ ಬಳೆಯನ್ನು ವೃತ್ತಾಕಾರವಾಗಿ ಸುತ್ತುತಾರೆ. ಹೆಚ್ಚು ಕಮ್ಮಿ ಡ್ರಮ್ಮಿನೋಪಾದಿಯಲ್ಲಿರುತ್ತದೆ. ಎರಡು ಕಡೆ ತೆರೆದುಕೊಂಡಿರುತ್ತದೆ. ತೆರೆದ

ಭಾಗವನ್ನು ಮುಚ್ಚಲು ಮೇಕೆ ಅಥವಾ ಹೋತದ ಚರ್ಮವನ್ನು ಬಳಸುತ್ತಾರೆ. ಮೇಕೆ ಹೋತಕ್ಕೆ ಸುಮಾರು ಮೂರು ವರ್ಷವಾದರೂ ಆಗಿರಬೇಕು. ಮೇಕೆ ಹೋತ ಹೆಚ್ಚು ಕೊಬ್ಬಿದ್ದರೆ ಅದರ ಚರ್ಮ ಚೆನ್ನಾಗಿರುತ್ತದೆಂದು ಭಾವಿಸುತ್ತಾರೆ. ಸಾಮಾನ್ಯವಾಗಿ ದೇವರಿಗೆ ಬಿಟ್ಟಿರುವ ಮೇಕೆ ಹೋತದ ಚರ್ಮವನ್ನು ಹದ ಮಾಡಿ ಡೋಲಿನ ಎರಡು ಕಡೆಯ ಬಾಯನ್ನು ಮುಚ್ಚಿ ಎರಡು ಕಡೆಗೆ ಅಂದರೆ ಎರಡು ಹೋತಗಳ ಚರ್ಮ ಬೇಕಾಗುತ್ತದೆ. ಎರಡು ಕಡೆಯಿಂದಲು ದಪ್ಪ ದಾರದಿಂದ ಬಿಗಿ ಮಾಡುತ್ತಾರೆ. ಸ್ವಲ್ಪ ದಿನ ಚೆನ್ನಾಗಿ ಒಣಗಿಸಿ ದೇವರುಗಳನ್ನು ಮಾಡುವಂತಹ ಸಮಯದಲ್ಲಿ ಹುರಿಮೆಯ ಜೊತೆಗೆ ಡೋಲನ್ನು ಬಳಸುತ್ತಾರೆ. ಡೋಲು ಬಡಿಯುವವರು ಕೂಡ ಕಾಡುಗೊಲ್ಲರೇ ಆಗಿರುತ್ತಾರೆ. ಹುರಿಮೆಯ ಲಯಕ್ಕೂ ಡೋಲಿನ ಲಯಕ್ಕೂ ಹೊಂದಿಕೆಯಾಗುತ್ತದೆ.

**ಸೋಬಾನೆ ಪದಗಳು**

ಹಾಲು ಹಸೆಯ ಬರೆದು

ಕೋಗಿಲೆ ಸೋಬಾನೆ ಪಾಡಿ

ನಾಗ ಕಾಳಿಂಗನ ಕಥೆ ಹೇಳಿ

ಸೋ ಎನ್ನಿರೆ ಸೋಬಾನ ಬನ್ನಿರೆ

ಸಾಕಷ್ಟು ಸೋಬಾನೆ ಪದಗಳು ಕಾಡುಗೊಲ್ಲರಲ್ಲಿ ಕಂಡುಬರುತ್ತವೆ. ಇಂದಿಗೂ ಸಹ ಕಾಡುಗೊಲ್ಲರು ತಮ್ಮ ಹಟ್ಟಿಗಳಲ್ಲಿ ಮದುವೆ ಮಾಡಿದರೆ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಶಾಸ್ತ್ರ ಸಂಪ್ರದಾಯಗಳನ್ನು ಚಾಚೂ ತಪ್ಪದೇ ಪಾಲಿಸುತ್ತಾರೆ. ಸೋಬಾನೆ ಪದಗಳನ್ನು ಹೆಚ್ಚಾಗಿ ಸ್ತ್ರೀಯರು ಹಾಡುತ್ತಾರೆ. ಈ ಸೋಬಾನೆ ಪದಗಳನ್ನು ಮದುವೆಗಳಲ್ಲಿ ಹೆಚ್ಚಾಗಿ ಹಾಡುತ್ತಾರೆ. ಏಕೆಂದರೆ ಮದುವೆಗಳಲ್ಲಿ ಅನೇಕ ಶಾಸ್ತ್ರಗಳಿರುವ ಕಾರಣ ರಾತ್ರಿಯಲ್ಲಿ ಪ್ರಾರಂಭವಾದ ಸೋಬಾನೆ ಪದಗಳು ಬೆಳಕು ಹರಿಯುವ ತನಕ ಮುಗಿಯುವುದಿಲ್ಲ. ಈ ಸೋಬಾನೆ ಪದಗಳು ಇಡೀ ಬದುಕಿನ ನೋವು ನಲಿವುಗಳನ್ನು ಹೇಳುತ್ತವೆ. ಕಾಡುಗೊಲ್ಲರಲ್ಲಿ ದೇವರುಗಳಿಗೂ ಮದುವೆ ಮಾಡುವ ಪದ್ಧತಿಗಳಿರುವುದು ಚಿತ್ರದೇವರ ಕಾವ್ಯದಿಂದ ತಿಳಿದುಬಂದಿದೆ. ಈ ಸೋಬಾನೆ ಪದಗಳು ತಲೆಮಾರಿನಿಂದ ತಲೆಮಾರಿಗೆ ನಿರಂತರವಾಗಿ ಮುಂದುವರಿದುಕೊಂಡು ಬಂದಿರುವುದನ್ನು ಕಾಣಬಹುದು. ಕೆಲವು ಸಾರಿ ಹೊಲಗಳಲ್ಲಿ ಕೆಲಸ ಮಾಡುವ ಸಮಯದಲ್ಲಿಯೂ ಸೋಬಾನೆಯ ಪದಗಳನ್ನು ಹಾಡುತ್ತಾರೆ. ಕಾಡುಗೊಲ್ಲರಲ್ಲಿರುವ ಸೋಬಾನೆ ಪದಗಳನ್ನು ಸಂಗ್ರಹಿಸಿದರೆ ಒಂದು ಸಾಹಿತ್ಯ ಚರಿತ್ರೆಯಷ್ಟು ದೊಡ್ಡದಾದ ಪುಸ್ತಕವಾಗಬಹುದು. ಆದರೆ ಅವುಗಳನ್ನು ಸಂಗ್ರಹಿಸುವ ಕಾರ್ಯ ತಂತ್ರ ಇನ್ನೂ ಕೈಗೂಡಿಲ್ಲ. ಇತ್ತೀಚಿನ ದಿನಗಳಲ್ಲಿ ಟಿವಿ ಮಾಧ್ಯಮ ಅವರ ಹಟ್ಟಿಯಲ್ಲಿ ಪ್ರವೇಶ ಮಾಡಿರುವುದರಿಂದ ಅವರಿಗೆ ಸೋಬಾನೆ ಪದಗಳ ಬಗ್ಗೆ ಕೀಳರಿಮೆ ಉಂಟಾಗಿದೆ. ಹಾಗಾಗಿ ಸೋಬಾನದ ಪದ ಕಲಿಯುವಲ್ಲಿ ಯಾರೂ ಆಸಕ್ತಿಯನ್ನು ತೋರಿಸುತ್ತಿಲ್ಲ.

**ರಂಗಭೂಮಿ:** ಕಾಡುಗೊಲ್ಲರ ಹಟ್ಟಿಗಳನ್ನು ಸಾಂಸ್ಕೃತಿಕ ಕೇಂದ್ರಗಳ ತವರೂರು ಎಂದು ಕರೆಯಬಹುದು. ಚಿತ್ರದುರ್ಗ ಜಿಲ್ಲೆಯನ್ನು ಬುಡಕಟ್ಟು ಸಮುದಾಯಗಳ ತವರೂರು ಎಂದು ಕರೆಯುತ್ತಾರೆ. ಏಕೆಂದರೆ ಕರ್ನಾಟಕದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ವಾಸವಾಗಿರುವಷ್ಟು ಬುಡಕಟ್ಟು ಸಮುದಾಯಗಳು ಬೇರೆ ಯಾವ ಜಿಲ್ಲೆಯಲ್ಲಿಯೂ ಕಂಡುಬರುವುದಿಲ್ಲ. ಕಾಡುಗೊಲ್ಲರು ಮ್ಯಾಸಬೇಡರು, ಹಕ್ಕಿಪಿಕ್ಕಿಯರು ಹಾಗೂ ಲಂಬಾಣಿಗರು ಹೆಚ್ಚು ಪ್ರಮಾಣದಲ್ಲಿ ಕಂಡುಬರುತ್ತಾರೆ. ಇವರೆಲ್ಲರೂ ಶೈಕ್ಷಣಿಕವಾಗಿ ಹಿಂದುಳಿದವರು. ಗ್ರಾಮಗಳಿಂದ ದೂರದಲ್ಲಿ ಅಡವಿಗಳಲ್ಲಿ ವಾಸವಾಗಿರುವವರು. ಇವರ ಹಟ್ಟಿಗಳಿಗೆ ಸಮೂಹ ತಡವಾಗಿ ಪ್ರವೇಶ ಮಾಡಿದ ಕಾರಣದಿಂದ ಚಿತ್ರದುರ್ಗ ಜಿಲ್ಲೆಯು ಹಿಂದುಳಿದ ಜಿಲ್ಲೆಯಾಗಿ ಗೋಚರವಾಗಿದೆ. ಹಾಗಾಗಿ ಅಲ್ಲಿ ಅನೇಕ ಕಲಾಪ್ರಕಾರಗಳು ಇನ್ನೂ ಉಳಿದುಕೊಂಡು ಬಂದಿವೆ. ಸಾಕಷ್ಟು ಜನರು ಅನಕ್ಷರತೆಯಿಂದ ಕೂಡಿದ್ದರೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಶ್ರೀಮಂತರಾಗಿದ್ದರು ಎಂಬುದು ಅವರ ಕಲಾಪ್ರಕಾರಗಳನ್ನು ಗಮನಿಸಿದರೆ ತಿಳಿಯುತ್ತದೆ. ಇವರು ಬುಡಕಟ್ಟು ಸಮುದಾಯವಾಗಿರುವುದರಿಂದ ಗಟ್ಟಿ ದೇಹವನ್ನು ಹೊಂದಿದವರಾಗಿದ್ದಾರೆ. ರಾತ್ರಿಯಿಂದ ಬೆಳಗಿನ ಸಮಯದ ತನಕ ಕುಣಿಯುವ ಸಾಮರ್ಥ್ಯವನ್ನು ಹೊಂದಿದ್ದಾರೆ. ಕುಮಾರವ್ಯಾಸನ ಕರ್ಣಾಟ ಭಾರತ ಕಥಾ ಮಂಜರಿ ಪ್ರಸಂಗದ ಅನೇಕ ಭಾಗಗಳನ್ನು ಬಯಲಾಟ ಆಡುವುದಲ್ಲಿ ಬಳಕೆ ಮಾಡಿಕೊಂಡಿರುವುದು ಕಂಡುಬರುತ್ತದೆ. ವೀರ ಅಭಿಮನ್ಯು ಕಾಳಗ, ಕರಿಬಂಟನ ಕಾಳಗ, ವಿರಾಟಪರ್ವ, ಶ್ರೀಕೃಷ್ಣಗಾರುಡಿ, ಹೇಮರೆಡ್ಡಿ ಮಲ್ಲಮ್ಮನ ಕಥೆ, ಶನಿದೇವರ ಮಹಾತ್ಮೆ, ನುಂಕಿಮಲೆ ಸಿದ್ದೇಶ್ವರ, ರಕ್ತರಾತ್ರಿ, ದಾನಶೂರ ಕರ್ಣ, ಸತ್ಯ ಹರಿಶ್ಚಂದ್ರ ಮುಂತಾದ ನಾಟಕಗಳನ್ನು ಹಟ್ಟಿಗಳಲ್ಲಿ ಆಡುತ್ತಿದ್ದರು. ಹಿಂದೆ ಎಷ್ಟೋ ಜನ ನಾಟಕ ಆಡುವ ಸಲುವಾಗಿ ಮನೆ ಮಠಗಳನ್ನು ಕಳೆದುಕೊಂಡ ಸಾಕಷ್ಟು ಉದಾಹರಣೆಗಳು ಸಿಗುತ್ತವೆ.

ಪ್ರಸ್ತುತ ದಿನಗಳಲ್ಲಿಯೂ ಕಾಡುಗೊಲ್ಲರ ಹಟ್ಟಿಗಳು ನಾಟಕ ಪರಂಪರೆಯನ್ನು ಉಳಿಸಿಕೊಂಡು ಬಂದಿವೆ. ಆದರೆ ಸಣ್ಣಾಟ, ದೊಡ್ಡಾಟ, ಬಯಲಾಟ, ಪೌರಾಣಿಕ ನಾಟಕಗಳಲ್ಲಿ ಜಾಗತೀಕರಣದಿಂದ ಪ್ರಪಂಚದ ಜ್ಞಾನವನ್ನು ಟಿ.ವಿ. ರೇಡಿಯೋ ಹಾಗೂ ಅಂತರ್ಜಾಲದ ಮಾಹಿತಿಗಳಿಂದಾಗಿ ಅವರು ಬದುಕುಗಳು ಬದಲಾಗಿವೆ. ಹಾಗಾಗಿ ಯುವಕರು ಹಟ್ಟಿಗಳನ್ನು ತ್ಯಜಿಸಿ ಪಟ್ಟಣಗಳಲ್ಲಿ ದುಡಿಯುವುದರಿಂದ ಹೊಸ ಸಂವೇದನೆಗಳು ಸೃಷ್ಟಿಯಾಗಿವೆ. ಇದರಿಂದಾಗಿ ಕಾಡುಗೊಲ್ಲರ ಹಟ್ಟಿಗಳಲ್ಲಿ ಸಾಮಾಜಿಕ ನಾಟಕಗಳನ್ನು ಆಡುವ ಪ್ರವೃತ್ತಿಯನ್ನು ರೂಪಿಸಿಕೊಂಡಿದ್ದಾರೆ. ಸಿನಿಮಾ ಮಾದರಿಗೆ ಕಾಡುಗೊಲ್ಲರ ಬದುಕು ಹೊಂದಿಕೊಳ್ಳಲು ಪ್ರಯತ್ನಿಸುತ್ತಿದೆ. ಹಿಂದೆ ಪೌರಾಣಿಕ ನಾಟಕಗಳಲ್ಲಿ ಮಹಿಳೆಯ ಪಾತ್ರಗಳನ್ನು ಪುರುಷರೇ ಮಾಡುತ್ತಿದ್ದರು. ಆದರೆ ಈಗ ನಾಟಕದ ಮಹಿಳೆಯರಿಗೆ ದುಡ್ಡು ಸುರಿದು ಕರೆತರುತ್ತಾರೆ. ಇದು ಆರ್ಥಿಕವಾಗಿ ನಷ್ಟವೇ ವಿನಾಃ ಕಾಡುಗೊಲ್ಲರ ಅಭಿವೃದ್ಧಿ ಎಂದು ಹೇಳಲಾಗದು.

ಇತ್ತೀಚೆಗೆ ಹೊಸ ತಲೆಮಾರಿನ ಸಂಶೋಧಕರು ಹಳೆ ಸಂಸ್ಕೃತಿಯನ್ನು ಪುನಃ ಮುಖ್ಯ ವೇದಿಕೆಗೆ ತರಲು ಪ್ರಯತ್ನಿಸುತ್ತಿದ್ದಾರೆ. ಜುಂಜಪ್ಪನ ಕುರಿತಾಗಿ ನಾಟಕಗಳನ್ನು, ವೀರ ಜಂಪಣ್ಣನ ಕುರಿತಾಗಿ ಕಾದಂಬರಿಯನ್ನು, ಹಾಯೇ ಪಾಥೇದೇವರನ್ನು ಕುರಿತಾಗಿ ಸಾಂಗತ್ಯ ಕಾವ್ಯಗಳನ್ನು ಬರೆದಿರುವ

ಉದಾಹರಣೆಗಳು ಸಹ ನಮ್ಮ ಮುಂದಿವೆ. ಈ ಕಾವ್ಯಗಳ ಉದ್ದೇಶ ಕಾಡುಗೊಲ್ಲರ ಸಂಸ್ಕೃತಿಯ ಬಗ್ಗೆ ಪ್ರಜ್ಞೆ ಮೂಡಿಸುವುದಾಗಿದೆ. ಕಾಡುಗೊಲ್ಲರು ಇತ್ತೀಚೆಗೆ ಊರುಗೊಲ್ಲರಿಂದ ದೂರ ಉಳಿಯಲು ಪ್ರಯತ್ನಿಸುತ್ತಿದ್ದಾರೆ. ಕಾಡುಗೊಲ್ಲರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಬೇಕೆಂದು ಹಲವಾರು ಹೋರಾಟಗಳು ಸಹ ನಡೆಯುತ್ತಿವೆ.

**ಜನಪದ ಕ್ರೀಡೆಗಳು:** ಕಾಡುಗೊಲ್ಲರ ಹಟ್ಟಿಗಳಲ್ಲಿ ಅನೇಕ ಮನೋರಂಜನೆಯ ಆಟಗಳಿವೆ. ಕಬಡ್ಡಿ, ಕಣ್ಣಾಮುಚ್ಚಾಲೆ, ಕಳ್ಳಪೊಲೀಸು, ಬುಗರಿ, ಚಿನ್ನಿದಂಡ, ಲಗೋರಿ, ಮರಕೋತಿ, ಗೋಲಿ, ಚಿಕ್ಕಿ, ಪಗಡೆ ಆಟ, ಚೌಕಾಬಾರ ಮುಂತಾದ ಆಟಗಳನ್ನು ಆಡುತ್ತಾರೆ. ಇತ್ತೀಚೆಗೆ ಕ್ರಿಕೆಟ್, ಕುಸ್ತಿ ಸ್ಪರ್ಧೆ, ಕೇರಂಬೋರ್ಡ್, ಚೆಸ್ ಆಟಗಳನ್ನು ಯುವ ಜನತೆಯು ಆಡುತ್ತಿರುವುದು ಕಂಡುಬಂದಿದೆ. ಕಾಡುಗೊಲ್ಲರಲ್ಲಿಯೂ ಹೊಸ ಕ್ರೀಡೆಗಳು ಪ್ರಭಾವ ಬೀರಿವೆ.

### ೧.೭. ಕಾಡುಗೊಲ್ಲರ ಸಾಮಾಜಿಕತೆ

ಸಾಮಾಜೀಕರಣವು ಎಲ್ಲಾ ಮಾನುಷ್ಯರ ಮತ್ತು ಸಮಾಜದ ಬದಲಾವಣೆಗಳನ್ನು ತಿಳಿಸುವಲ್ಲಿ ಮಹತ್ತರವಾದ ಪಾತ್ರವನ್ನು ನಿರ್ವಹಿಸುತ್ತದೆ. ವ್ಯಕ್ತಿ ಮತ್ತು ಸಮಾಜ ಇವು ಪರಸ್ಪರ ಬೇರ್ಪಡಿಸಲಾಗದ ಸಂಬಂಧವನ್ನು ಹೊಂದಿದೆ. ಪ್ರತಿಯೊಬ್ಬ ವ್ಯಕ್ತಿಗೂ ಬದುಕುವ ಮತ್ತು ಬೆಳೆಯುವ ಅವಕಾಶಗಳನ್ನು ಕಲ್ಪಿಸುವ ಸಮಾಜವು ಆತನ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುವುದು ಹಾಗೂ ಯಾವ ರೀತಿ ಬದಲಾವಣೆಗಳು ಸಂಭವಿಸುತ್ತವೆ ಎಂದು ತಿಳಿಸುವಲ್ಲಿ ಅತ್ಯಂತ ನಿರ್ಣಾಯಕವಾಗಿರುತ್ತದೆ. ಸಮಾಜದಲ್ಲಿ ಆಗುವ ಉತ್ತಮ ಬದಲಾವಣೆಗಳನ್ನು ಅಳವಡಿಸಿಕೊಳ್ಳುವಲ್ಲಿ ಸಮಾಜವು ಸಮುದಾಯಕ್ಕೆ ದಿಕ್ಸೂಚಿಯಾಗಿರುತ್ತದೆ. ಮಾನವೀಯ ಗುಣಗಳನ್ನು ಅಳವಡಿಸಿಕೊಳ್ಳುವಲ್ಲಿ ಸಮಾಜವು ಸಮುದಾಯಕ್ಕೆ ದಾರಿದೀಪವಾಗಿರುತ್ತದೆ. ಸಮಾಜದ ನಿರೀಕ್ಷೆಗಳೊಂದಿಗೆ ವ್ಯಕ್ತಿ ಮತ್ತು ಸಮುದಾಯಗಳು ಬದಲಾವಣೆಗಳನ್ನು ಬಯಸುತ್ತವೆ. ಸಮಾಜದಲ್ಲಿ ಕೆಟ್ಟ ಮತ್ತು ಉತ್ತಮ ಬದಲಾವಣೆಗಳನ್ನು ನಾವು ಕಾಣುತ್ತೇವೆ. ಅದರಂತೆ ಉತ್ತಮ ಬದಲಾವಣೆಗಳನ್ನು ಅಳವಡಿಸಿಕೊಳ್ಳುವಲ್ಲಿ ಸಮಾಜವು ವ್ಯಕ್ತಿ ಮತ್ತು ಸಮುದಾಯಗಳಿಗೆ ನಿರ್ದೇಶಿಸುತ್ತದೆ. ಇದರಂತೆ ಕಾಡುಗೊಲ್ಲ ಸಮುದಾಯವೂ ಸಹ ಸಮಾಜದ ಬದಲಾವಣೆಗಳಿಗೆ ತಕ್ಕಂತೆ ತಮ್ಮ ಆಚಾರ ವಿಚಾರಗಳ ಬದಲಾವಣೆ ಹಾಗೂ ಈಗಾಗಲೇ ಅಸ್ತಿತ್ವದಲ್ಲಿರುವ ಉತ್ತಮ ಆಚಾರ ವಿಚಾರಗಳನ್ನೇ ಮುಂದುವರಿಸಿಕೊಂಡು ಬಂದಿರುವುದನ್ನು ನೋಡುತ್ತೇವೆ. ಸಮಾಜದ ನಿರೀಕ್ಷೆಗಳೊಂದಿಗೆ ಕೆಲವೊಂದು ಬದಲಾವಣೆಗಳನ್ನು ಮಾಡಿಕೊಂಡಿರುವು ಕಂಡುಬಂದಿರುತ್ತದೆ. ಅದರಂತೆ ಕಾಡುಗೊಲ್ಲ ಸಮುದಾಯದ ಸಮಾಜೀಕರಣದಲ್ಲಿ ಇವರ ಕುಟುಂಬ ರಚನೆ ಮತ್ತು ಒಡೆತನ, ವಿವಾಹ, ಸಂಗಾತಿಯ ಆಯ್ಕೆ, ಕೆಲವು ವಿವಾಹ ಶಾಸ್ತ್ರಗಳನ್ನು ಈ ಮುಂದಿನಂತೆ ನೋಡಬಹುದು.

**ಕುಟುಂಬದ ರಚನೆ ಮತ್ತು ಒಡೆತನ:** ಭಾರತೀಯ ಸಮಾಜದಲ್ಲಿ ಕುಟುಂಬದ ಪಾತ್ರವು ಪ್ರಧಾನವಾದ ಪಾತ್ರ ವಹಿಸುತ್ತದೆ. ಏಕೆಂದರೆ ಮನುಷ್ಯನಿಗೆ ಮೊದಲನೆಯ ಪಾಠಶಾಲೆಯು ಕುಟುಂಬ ಎಂದು

ಹೇಳಿದರೆ ತಪ್ಪಾಗಲಾರದು. ಒಂದು ಕುಟುಂಬದಲ್ಲಿ ಅಪ್ಪ, ಅಮ್ಮ, ಅಜ್ಜ, ಅಜ್ಜಿ, ಚಿಕ್ಕಪ್ಪ, ಚಿಕ್ಕಮ್ಮ, ದೊಡ್ಡಪ್ಪ, ದೊಡ್ಡಮ್ಮ, ಅಣ್ಣ, ತಮ್ಮ, ಅಕ್ಕ, ತಂಗಿ ಮುಂತಾದವರು ಇರುವುದರಿಂದ ಉತ್ತಮ ಸಂಸ್ಕೃತಿಯ ಪ್ರತೀಕವು ಕಂಡುಬರುತ್ತದೆ. ಸಾಮಾಜಿಕ ಸಂಘಟನೆಯಲ್ಲಿ ಮೊದಲ ಸ್ಥಾನವೇ ಕುಟುಂಬದ್ದು. ಹಾಗಾಗಿ ಹಿಂದೆ ಕಾಡುಗೊಲ್ಲರಲ್ಲಿ ಮಾತೃಪ್ರಧಾನವಾದ ಕುಟುಂಬಗಳು ಅಸ್ತಿತ್ವದಲ್ಲಿರುವುದು ಸಂಶೋಧನೆಯ ಮೂಲಕ ತಿಳಿದುಬಂದಿದೆ ಕಾಡುಗೊಲ್ಲರು ಮಾತೃದೇವತಾ ಆರಾಧಕರಾಗಿದ್ದರು. ಇದಕ್ಕೆ ಪುಷ್ಟಿಯಾಗಿ ಅವರು ಆರಾಧನೆ ಮಾಡುತ್ತಿರುವ ಮಾತೃದೇವತೆಗಳಾದ ಗೌರಸಮುದ್ರದ ಮಾರಮ್ಮ, ಗೂಲ್ಲಾಳಮ್ಮ, ಬೇವಿಹಳ್ಳಿ ಕರಿಯಮ್ಮ, ಹೀರೆಗುಂಟನೂರು ದ್ಯಾಮವ್ವ ಅಷ್ಟೇ ಅಲ್ಲ, ಪ್ರತಿಯೊಂದು ಗೊಲ್ಲರ ಹಟ್ಟಿಯ ಹೊರಗೆ ಮಾರಮ್ಮನ ಗುಡಿ ಇರುವುದು ಕಂಡು ಬರುತ್ತದೆ. ಜಾಗತೀಕರಣ, ಕೈಗಾರೀಕರಣ, ಯಾಂತ್ರೀಕರಣ ನಗರೀಕರಣಗಳ, ಪ್ರಭಾವದಿಂದಾಗಿ ಕಾಡುಗೊಲ್ಲರಲ್ಲಿ ಮಾತೃದೇವತೆಗಳ ಬದಲಾಗಿ ಪಿತೃದೇವತೆಗಳ ಆರಾಧನೆ ಪ್ರಾರಂಭವಾಯಿತು. ಅನಂತರ ಮಾತೃಪ್ರಧಾನ ಕುಟುಂಬಗಳು ಪಿತೃಪ್ರಧಾನ ಕುಟುಂಬಗಳಾಗಿ ಬದಲಾಗಿರುವುದು ಕಂಡು ಬರುತ್ತದೆ.

ದಕ್ಷಿಣ ಭಾರತದ ಕೆಲವು ಬುಡಕಟ್ಟುಗಳನ್ನು ಹೊರತುಪಡಿಸಿದರೆ ಮತ್ತು ಕೇರಳದ ನಾಯರ್ ಗಳಲ್ಲಿ ಬಿಟ್ಟರೆ ಎಲ್ಲಾ ಕಡೆ ಪಿತೃಪ್ರಧಾನ, ಪಿತೃವಂಶಿ ಮತ್ತು ಪಿತೃಸ್ಥಾನೀಯ ಕುಟುಂಬಗಳನ್ನು ನೋಡಬಹುದಾಗಿದೆ. ಅದರಂತೆಯೇ ದಕ್ಷಿಣ ಭಾರತದವರಾದ ಕಾಡುಗೊಲ್ಲರು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಪಾಲಿಸಿಕೊಂಡು ಬಂದಿದ್ದಾರೆ.[೧೮]

ಎಂ. ಗುರುಲಿಂಗಯ್ಯನವರು ಹೇಳುವ ಪ್ರಕಾರ ಕಾಡುಗೊಲ್ಲರು ಮೂಲತಃ ಪಿತೃಪ್ರಧಾನ ಕುಟುಂಬವನ್ನು ಹೊಂದಿದ್ದರು ಎಂದು ಹೇಳುತ್ತಾರೆ. ಆದರೆ ಭಾರತದ ಎಲ್ಲಾ ಬುಡಕಟ್ಟುಗಳು ಮಾತೃಪ್ರಧಾನ ಸಂಸ್ಕೃತಿಯನ್ನು ಹೊಂದಿದ್ದವು. ಆನಂತರ ಇತರೆ ಸಂಸ್ಕೃತಿಗಳ ಪ್ರಭಾವದಿಂದಾಗಿ ಕುಟುಂಬಗಳು ಪಿತೃಪ್ರಧಾನವಾಗಿ ಪರಿವರ್ತನೆ ಹೊಂದಿರುವುದು. ವಾಸ್ತವ್ಯ ಸತ್ಯ ಇಂದಿಗೂ ಕೂಡ ಬುಡಕಟ್ಟು ಸಮುದಾಯದವರು ಮಾತೃದೇವತೆಗಳನ್ನು ಆರಾಧನೆ ಮಾಡುತ್ತಿದ್ದರು.[೧೯] ಮನೆಯ ಒಳಗಡೆ ಇದ್ದುಕೊಂಡು ಹೆಣ್ಣಾದವಳು ಪುರುಷನಿಗಿಂತ ಹೆಚ್ಚಿನ ಆದಾಯವನ್ನು ಗಳಿಸುವವಳಾಗಿದ್ದಾಳೆ. ಇದರಿಂದಾಗಿ ಇಡೀ ಕುಟುಂಬ ಸ್ತ್ರೀಯರ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ. ಸ್ತ್ರೀಯಿಂದಲೆ ಕೃಷಿ ವಿಕಾಸ ಹೊಂದಿದೆ ಎಂಬುದನ್ನು ನಾವು ಮರೆಯಬಾರದು. ಮಹಿಳೆಯರಿಗೆ ಪುರುಷರಿಗಿಂತ ಜವಾಬ್ದಾರಿಗಳು ಹೆಚ್ಚು, ಕೃಷಿಯ ಜೊತೆಗೆ ಪಶುಪಾಲನೆಯನ್ನು ಮುಂದುವರಿಸಿಕೊಂಡು ಬರುತ್ತಿರುವವರು ಮಹಿಳೆಯರೆ. ಮಕ್ಕಳ್ಳನ್ನು ಪೋಷಿಸುವಂತೆ ಕಾಡುಗೊಲ್ಲರು ಪಶುಗಳ ಪಾಲನೆ ಪೋಷಣೆ ಮಾಡುವುದರಿಂದ ಅವರ ಆರ್ಥಿಕ ಸ್ಥಿತಿಗೆ ನೆರವಾಗುತ್ತಿದ್ದಾರೆ.

ಕಾಡುಗೊಲ್ಲರಲ್ಲಿ ಹಿಂದೆ ಅವಿಭಕ್ತ ಕುಟುಂಬಗಳು ಅಸ್ತಿತ್ವದಲ್ಲಿ ಇದ್ದ ಕಾಲದಲ್ಲಿ ಇಡೀ ಕುಟುಂಬದ ನಿರ್ವಹಣೆಯನ್ನು ಪುರುಷರ ಬದಲಾಗಿ ಮಹಿಳೆಯರೆ ನಿರ್ವಹಿಸುತ್ತಿದ್ದರು. ಹಿಂದೆ ಕಾಡುಗೊಲ್ಲರು

ಅವಿಭಕ್ತ ಕುಂಟುಂಬಗಳಿಗೆ ತುಂಬಾ ಪ್ರಾಮುಖ್ಯತೆಯನ್ನು ಕೊಟ್ಟಿದ್ದರು. ಇನ್ನೂ ಅನೇಕ ಹಟ್ಟಿಗಳಲ್ಲಿ ಅವಿಭಕ್ತ ಕುಟುಂಬಗಳಿರುವುದು ಸಂಶೋಧನೆಯಿಂದ ತಿಳಿದುಬಂದಿದೆ. ಇವರು ಪಶುಪಾಲಕರಾದ ಕಾರಣ ಅವಿಭಕ್ತ ಕುಟುಂಬವು ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಏಕೆಂದರೆ ದನ ಕಾಯಲು, ಕುರಿ ಕಾಯಲು ಹಾಗೂ ಕೃಷಿ ಮಾಡಲು ಜನರ ಅವಶ್ಯಕವಿರುತ್ತದೆ. ಮೂರು ತಲೆ ಮಾರಿನ ಜನರು ಒಂದೇ ಕುಟುಂಬದಲ್ಲಿ ವಾಸ ಮಾಡುತ್ತಿರುವುದು ಸಂಶೋಧನೆಯಿಂದ ದೃಢಪಟ್ಟಿದೆ. ಕಾಡುಗೊಲ್ಲರು ತುಂಬಾ ಭಾವನಾಜೀವಿಗಳು.

**ವಿವಾಹ**

ಕರ್ನಾಟಕದಲ್ಲಿ ಅನಾದಿಕಾಲದಿಂದಲೂ ವಿವಿಧ ಬುಡಕಟ್ಟುಗಳು ತಮ್ಮದೇ ಆದಂತಹ ಚಾರಿತ್ರಿಕತೆಯನ್ನು ಹೊಂದಿರುವುದು ಕಂಡುಬಂದಿದೆ. ಇಂತಹ ಅನೇಕ ಬುಡಕಟ್ಟುಗಳಲ್ಲಿ ಕಾಡುಗೊಲ್ಲ ಸಮುದಾಯ ಒಂದಾಗಿದೆ. ಈ ಕಾಡುಗೊಲ್ಲ ಸಮುದಾಯವು ಪ್ರಕೃತಿಯೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿದ್ದು ತನ್ನದೇ ಆದ ಉಪಭಾಷೆ, ಸಂಸ್ಕೃತಿ ಹಾಗೂ ಸಂಪ್ರದಾಯಗಳನ್ನು ಆಧುನಿಕ ಸಂದರ್ಭದಲ್ಲಿಯೂ ಕಾಪಾಡಿಕೊಂಡು ಬಂದಿರುವುದನ್ನು ಗಮನಿಸಬಹುದು. ಕಾಡುಗೊಲ್ಲ ಸಮುದಾಯವು ಪಶುಪಾಲನೆಯನ್ನು ತನ್ನ ಪ್ರಮುಖ ವೃತ್ತಿಯಾಗಿ ಅವಲಂಬಿಸಿಕೊಂಡಿದೆ. ಈ ಕಾರಣದಿಂದ ತಮ್ಮ ಪಶುಗಳನ್ನು ಪಾಲನೆ ಮಾಡುವ ಉದ್ದೇಶದಿಂದ ಹುಲ್ಲು ನೀರನ್ನು ಅರಸಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವ ಮೂಲಕ ತಮ್ಮ ವೃತ್ತಿಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಈ ಸಮುದಾಯವು ವಲಸೆ ಜೀವನಕ್ಕೆ ಅನುಗುಣವಾಗಿ ತಮ್ಮ ಸಂಪ್ರದಾಯ ಆಚರಣೆಗಳನ್ನು ರೂಢಿಸಿಕೊಂಡು ಬಂದಿದ್ದಾರೆ. ಆದರೆ ಆಧುನಿಕ ಸಂದರ್ಭದಲ್ಲಿ ಈ ಸಂಪ್ರದಾಯವು ಕಾಪಾಡಿಕೊಂಡು ಬಂದಿರುವ ಕೆಲವು ಆಚರಣೆಗಳನ್ನು ಮೌಢ್ಯತೆಗಳೆಂದು ಗುರುತಿಸಲಾಗಿದೆ. ಆದರೆ ಆ ಆಚರಣೆಗಳು ರೂಪುಗೊಂಡ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ತೊಡಗಿದಾಗ ಮಾತ್ರ ಇವುಗಳ ಉಗಮಕ್ಕೆ ಕಾರಣವು ದೊರೆಯುತ್ತದೆ. ಕಾಡುಗೊಲ್ಲರ ಸಮುದಾಯವು ಇಂದು ನಿರ್ದಿಷ್ಟ ಪ್ರದೇಶದಲ್ಲಿ ನೆಲೆಯಾಗದೇ ಅಲೆಮಾರಿಗಳಂತೆ ಬದುಕುವುದು ಅನಿವಾರ್ಯವಾದಾಗ ಈ ರೀತಿಯ ಕೆಲವು ಸಂಪ್ರದಾಯಗಳು ಜನ್ಮ ತಾಳಿರುವ ಸಾಧ್ಯತೆಗಳಿವೆ. ಆನಂತರದಲ್ಲಿ ನಾಗರಿಕತೆಯ ಪ್ರಭಾವದಿಂದ ಒಂದು ಕಡೆ ನೆಲೆಯೂರಿದ ಸಂದರ್ಭದಲ್ಲಿ ತಮ್ಮ ಮೂಲ ಆಚರಣೆಗಳಲ್ಲಿ ಯಥಾಪ್ರಕಾರವಾಗಿ ರೂಢಿಸಿಕೊಂಡು ಬಂದಿರುವ ಸಾಧ್ಯತೆಗಳಿವೆ. ಈ ಕುರಿತು ಇನ್ನಷ್ಟು ಆಳವಾದ ಅಧ್ಯಯನದ ಅಗತ್ಯತೆ ಅನಿವಾರ್ಯವಾಗಿದೆ.

ಪ್ರಸ್ತುತ ಕಾಡುಗೊಲ್ಲ ಸಮುದಾಯವು ತನ್ನ ಸಂಸ್ಕೃತಿ ಪ್ರತೀಕವೆಂಬಂತೆ ಕಾಪಾಡಿಕೊಂಡು ಬಂದಿರುವ ಮದುವೆಯ ಸಂಪ್ರದಾಯ ವಿಶೇಷತೆಯನ್ನು ಇಲ್ಲಿ ಪರಿಚಯಿಸಲಾಗಿದೆ. ಈ ಕಾರಣದಿಂದ ಕಾಡುಗೊಲ್ಲ ಸಮುದಾಯದಲ್ಲಿ ಮದುವೆಯ ಸಂದರ್ಭದಲ್ಲಿ ನಡೆಯುವ ಆಚರಣೆಗಳನ್ನು ಅಧ್ಯಯನಕ್ಕೆ

ಒಳಪಡಿಸುವುದು ಸರಿಯಷ್ಟೆ. ಮದುವೆ ಸಂಬಂಧಿ ವಿಶೇಷ ಆಚರಣೆಗಳ ವೈಶಿಷ್ಟತೆಯನ್ನು ಇಲ್ಲಿ ಪರಿಚಯಿಸಲಾಗುವುದು.

**ಸಂಗಾತಿಯ ಆಯ್ಕೆ**

ಕಾಡುಗೊಲ್ಲರು ಬುಡಕಟ್ಟು ಸಮುದಾಯವಾದ ಕಾರಣದಿಂದ ಸ್ತ್ರೀಯರಿಗೆ ಮಹತ್ವದ ಸ್ಥಾನಮಾನವನ್ನು ನೀಡಿದ್ದಾರೆ. "ಹೆರಿಗೆ ಋತುಮತಿ ಮುಂತಾದ ಜೀವನ ಕ್ರಿಯೆಗಳ ಸಂದರ್ಭದಲ್ಲಿ ಕಾಡುಗೊಲ್ಲ ಬುಡಕಟ್ಟು ಸಮುದಾಯದವರು ಕೆಲವು ನಿಷೇಧಗಳನ್ನು ಹೇರಿರುವುದರಿಂದ ಸ್ತ್ರೀಯರು ಹಲವಾರು ಸಾಮಾಜಿಕ ನ್ಯೂನತೆಗಳಿಂದ ಬಳಲುತ್ತಿದ್ದಾರೆ".[೨೦]

ಕಾಡುಗೊಲ್ಲರಲ್ಲಿ ಇನ್ನೂ ಸಹ ಹಿರಿಯರ ಒಪ್ಪಿತ ವಿವಾಹಗಳೇ ನಡೆಯುತ್ತವೆ. ಪ್ರೇಮವಿವಾಹಗಳು ನಡೆಯುವುದಿಲ್ಲ ಎಂದಲ್ಲ, ಅವು ನಡೆಯುತ್ತವೆ. ಆದರೆ ಬೆರಳೆಣಿಕೆಯ ಪ್ರಮಾಣ ಮಾತ್ರ. ಇದಕ್ಕೆ ಕಾರಣ ಜಾಗತೀಕರಣ, ಕೈಗಾರೀಕರಣ ಹಾಗೂ ನಾಗರಿಕ ಜಗತ್ತು ಬದಲಾದಂತೆ ಹಟ್ಟಿಗಳ ಸ್ಥಿತಿಗತಿಗಳು ಬದಲಾಗಿವೆ. ಕಾಡುಗೊಲ್ಲರಲ್ಲಿ ಅಂತರಜಾತಿ ವಿವಾಹಕ್ಕೆ ಅವಕಾಶವಿಲ್ಲ. ಅಂತರಜಾತಿ ವಿವಾಹವಾದಲ್ಲಿ ತಮ್ಮ ಹಟ್ಟಿಗಳ ಒಳಗೆ ಸೇರಿಸುವುದಿಲ್ಲ ಹಾಗೂ ಉಪ ಬೆಡಗುಗಳೊಂದಿಗೆ ವೈವಾಹಿತ ಸಂಬಂಧ ಏರ್ಪಡುತ್ತವೆ.

**ವೀಳ್ಯದೆಲೆಯ ಶಾಸ್ತ್ರ(ಇಳ್ಯೇವು)**

ಇದು ಕಾಡುಗೊಲ್ಲರ ಪ್ರಾದೇಶಿಕ ಪರಿಭಾಷೆ. ಇವರಲ್ಲಿ ನಿಶ್ಚಯ ಎನ್ನುವ ಪರಿಕಲ್ಪನೆ ಇದ್ದಂತಿಲ್ಲ ಅವರು ಕೊಡುಕೊಳ್ಳುವುದನ್ನು ಮಾತನಾಡುವುದನ್ನು ಈ ಶಾಸ್ತ್ರದ ಜೊತೆಗೆ ಮಾಡುತ್ತಾರೆ.

"ಇಳ್ಯೇವು ಶಾಸ್ತ್ರ ಮದುವೆಯ ಪ್ರಥಮ ಮಂಗಳ ಕಾರ್ಯವಾಗಿದೆ. ಮದುವೆಯ ನಿಶ್ಚಿತಾರ್ಥಕ್ಕಾಗಿ ಹೆಣ್ಣಿನ ಒಕ್ಕಲಿಗೆ ಇಳ್ಯೇವನ್ನು ತುಂಬುವ ಶಾಸ್ತ್ರವೇ ಇಳ್ಯೇವು ಶಾಸ್ತ್ರವಾಗಿದೆ. ಇಳ್ಯೇವು ಶಾಸ್ತ್ರಮುಗಿದ ನಂತರ ಯಾವುದೇ ಕಾರಣಕ್ಕೂ ಮದುವೆಯನ್ನು ನಿಲ್ಲಿಸುವಂತಿಲ್ಲ".[೨೧]

ಹೆಣ್ಣು ಕೊಡುವವರು ಮತ್ತು ತೆಗೆದುಕೊಳ್ಳುವವರು ಮನೆಯಲ್ಲಿ ಸೇರಿರುವ ಯಜಮಾನರ ಎದುರಿಗೆ ಪರಸ್ಪರ ಒಬ್ಬರಿಗೊಬ್ಬರು ಎಲೆ ಅಡಿಕೆ (ಇಳ್ಯೇವು) ಕೊಡುವುದರ ಮೂಲಕ ಸಂಬಂಧವನ್ನು ಗಟ್ಟಿಗೊಳಿಸುತ್ತಾರೆ. ಎಲೆ ಅಡಿಕೆ ಶಾಸ್ತ್ರ ಮುಗಿದ ಮೇಲೆ ಎಂತಹ ಮೈಮನಸ್ಸುಗಳೂ ಬಂದರೂ ಮದುವೆ ನಿಲ್ಲಿಸುವಂತಿಲ್ಲ. ಹಿರಿಯರ ಮಾತಿಗೆ ಹೆಚ್ಚು ಮಹತ್ವವಿದೆ. ನಮ್ಮ ಬುಡಕಟ್ಟು ಕಾವ್ಯಗಳಲ್ಲಿ ಇಳ್ಯೇವು ಶಾಸ್ತ್ರ ಮುಗಿದ ಮೇಲೆ ವೀರರು ಹೋರಾಡಿ ಸಾವು ಸಂಭವಿಸಿದ ಸಮಯದಲ್ಲಿ ಗೊತ್ತು ಮಾಡಿದ ಹೆಣ್ಣುಮಕ್ಕಳು ಕೊಂಡವೇರಿದ ಘಟನೆಗಳಿವೆ.

ಉದಾ: ವೀರಮಂಚಣ್ಣನ ಕಾವ್ಯದಲ್ಲಿ ವೀರ ನಾಗಣ್ಣ ಮಡಿದಾಗ ವೀರನಾಗಮ್ಮ ಕೊಂಡವೇರುತ್ತಾಳೆ. ಇಂದು ಅಂತಹ ಆಚರಣೆಗಳು ಸಂಪೂರ್ಣವಾಗಿ ಮರೆಯಾಗಿವೆ. ಹಿಂದೆ ಕಾಡುಗೊಲ್ಲರಲ್ಲಿ ವಧುದಕ್ಷಿಣೆ ಎಂಬುದು ಅಥವಾ ತೆರಕಟ್ಟುವ ಪದ್ಧತಿ ಜಾರಿಯಲ್ಲಿತ್ತು. ಎತ್ತು ಇಲ್ಲವೆ ಧಾನ್ಯಗಳನ್ನು ಗಂಡಿನ

ಕಡೆಯವರು ಹೆಣ್ಣಿನ ಮನೆಗೆ ಕೊಡುತ್ತಿದ್ದರು. ಆದರೆ ಇದು ಮರೆಯಾಗಿ ಆಧುನಿಕತೆ ಭೂತವಾಗಿ ಅವರ ಹಟ್ಟಿಗಳಿಗೆ ವರದಕ್ಷಿಣೆ ಎಂಬುದು ಕಾಡುತ್ತಿದೆ. ಹೆಚ್ಚಾಗಿ ಓದಿರುವ ಯುವಕರು ವರದಕ್ಷಿಣೆಗೆ ಆಸೆ ಪಡುತ್ತಿದ್ದಾರೆ. ಅವಿದ್ಯಾವಂತರು ವರದಕ್ಷಿಣೆ ಮುಟ್ಟುವುದಿಲ್ಲ. ವಿಳ್ಳೆದೆಲೆಯ ಶಾಸ್ತ್ರದ ದಿನವೇ ಮದುವೆಯ ಅಂದರೆ ಧಾರೆಮುಹೂರ್ತದ ದಿನ ನಿಗದಿಯಾಗುತ್ತಿತ್ತು.

**ಕಟ್ಟಿಗೆ ಹೊಡೆಯುವ ಶಾಸ್ತ್ರ**

ಕಾಡುಗೊಲ್ಲರು(ಇಂದಿನ ಆಧುನಿಕ ಸಮಾಜದಲ್ಲೂ ಸಹ) ಹಿಂದಿನ ಪದ್ಧತಿಯನ್ನು ಮರೆಯುವುದಿಲ್ಲ. ಇತ್ತೀಚೆಗೆ ಕಟ್ಟಿಗೆ ದೊರೆಯುವುದು ಕಷ್ಟವಾದರೂ ತಾವುಗಳು ಇನ್ನೂ ಸಹ ಕಟ್ಟಿಗೆಯಿಂದ ತಮ್ಮ ಮದುವೆಗಳಲ್ಲಿ ಅಡಿಗೆ ಮಾಡಿಸುತ್ತಾರೆ. ಹಾಗಾಗಿ ಮದುವೆ ಇನ್ನು ಒಂದು ತಿಂಗಳಿದೆ ಎನ್ನುವಾಗಲೇ ಮದುವೆಯ ಕಾರ್ಯಕ್ರಮಗಳು ಕಟ್ಟಿಗೆ ಹೊಡೆಯುವ ಶಾಸ್ತ್ರದಿಂದ ಪ್ರಾರಂಭವಾಗುತ್ತದೆ. ಈ ಶಾಸ್ತ್ರವನ್ನು ಗುರುಲಿಂಗಯ್ಯನವರು ಕಾಡುಗೊಲ್ಲ ಎಂಬ ಕೃತಿಯಲ್ಲಿ ಕೊನೆ ಕಡಿಯುವ ಶಾಸ್ತ್ರ ಎಂದು ಕರೆದಿದ್ದಾರೆ. ಮದುವೆಗೆ ಬಂದಿರುವ ಜನರಿಗೆ ಅಡುಗೆ ಮಾಡಿಸಲು ಬೇಕಾಗುವ ಕಟ್ಟಿಗೆಯನ್ನು ಕಡಿಯುವ ಶಾಸ್ತ್ರ. ಕಟ್ಟಿಗೆಯನ್ನು ಒಂದು ತಿಂಗಳು ಮುಂಚೆ ಏಕೆ ಕಡಿಯುತ್ತಾರೆಂದರೆ ಕಟ್ಟಿಗೆ ಹಸಿಯಾಗಿದ್ದು ಅಡಿಗೆ ಮಾಡಲು ತೊಂದರೆಯಾಗುತ್ತದೆ. ಆದುದರಿಂದ ಒಂದು ತಿಂಗಳ ಮುಂಚೆ ಕಟ್ಟಿಗೆಯನ್ನು ಹೊಡೆಯುತ್ತಾರೆ. ಹಟ್ಟಿಯಲ್ಲಿರುವ ಪ್ರತಿಯೊಬ್ಬರ ಸಂಬಂಧಿಕರು ಬಂದು ಮೊದಲ ಹೊಡೆಯುವ ಕಟ್ಟಿಗೆಗೆ ಶಾಸ್ತ್ರೋಕ್ತವಾಗಿ ಪೂಜೆ ಮಾಡಿ ಆನಂತರ ಎಲ್ಲರೂ ಕಟ್ಟಿಗೆಯನ್ನು ಹೊಡೆಯುತ್ತಾರೆ. ಕೆಲವು ಸಂಬಂಧಿಕರು ತಮ್ಮ ಹೊಲಗಳಲ್ಲಿ ಇರುವ ಮರಗಳನ್ನು ಕಡಿದು ಮದುವೆಗೆ ಕೊಡುತ್ತಾರೆ. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಅವರ ಮುಂಜಾಗ್ರತೆಯ ಪ್ರಜ್ಞೆ ಮತ್ತು ಮದುವೆಯ ಜವಾಬ್ದಾರಿ ಇಡೀ ಹಟ್ಟಿ ವಹಿಸಿಕೊಂಡಿರುತ್ತದೆ. ಇವರು ಬಾಂಧವ್ಯಕ್ಕೆ ಮೊದಲ ಆದ್ಯತೆಯನ್ನು ಕೊಡುತ್ತಾರೆ.

**ಅರುಣೆ ತರುವ ಶಾಸ್ತ್ರ**

ಮದುವೆಯ ಮೂರು ದಿನ ಇಲ್ಲವೇ ಐದು ದಿನಗಳು ಇರುವಾಗ ಕಾಡುಗೊಲ್ಲರು ಅರುಣೆ ತರುವ ಶಾಸ್ತ್ರಮಾಡುತ್ತಾರೆ. ಕಾಡುಗೊಲ್ಲರಿಗೂ ಕುಂಬಾರರಿಗೂ ಅವಿನಾಭಾವ ಸಂಬಂಧ ಎಂದು ಹೇಳಬಹುದು. ಹಿಂದೆ ಆಯಗಾರಿಕೆ ಜಾರಿಯಲ್ಲಿದ್ದಂತಹ ಸಮಯದಲ್ಲಿ ಎಲ್ಲಾ ಸಮುದಾಯದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಏಕೆಂದರೆ ಕುಂಬಾರರ ಮಡಕೆ ಸಿಕ್ಕಿಲ್ಲವೆಂದರೆ ಮದುವೆಯೇ ನಿಲ್ಲುವ ಸಂದರ್ಭವಿರುತ್ತದೆ. ಹಿರಿಯರು ಒಪ್ಪಿತ ಮದುವೆಯಾಗಿದ್ದರೆ ಅದು ಎಲ್ಲಿಯೇ ನಡೆದರೂ ಅರುಣೆ ತರುವ ಶಾಸ್ತ್ರವನ್ನು ಮಾತ್ರ ಬಿಡುವುದಿಲ್ಲ. ಅರುಣೆ ತರಲು ಕಾಡುಗೊಲ್ಲರು ತಮ್ಮ ಸಂಬಂಧಿಕರಲ್ಲಿ ಐದು ಅಥವಾ ಮೂರು ಜನ ಮುತ್ತೈದೆಯರನ್ನು ಕರೆದುಕೊಂಡು ಕುಂಬಾರರ ಮನೆಗೆ ಹೋಗುತ್ತಾರೆ. ಸಾಮಾನ್ಯವಾಗಿ ಹಿಂದೆ ಅರುಣೆ ತರಲು ಎತ್ತಿನಗಾಡಿ ಹೂಡಿಕೊಂಡು ಹೋಗುತ್ತಿದ್ದರು. ಗಾಡಿಯಲ್ಲಿ ಮಡಕೆ ಹೊಡೆಯದಂತೆ ಭತ್ತದ ಹುಲ್ಲು ಅಥವಾ ರಾಗಿ ಹುಲ್ಲನ್ನು ಹಾಸುತ್ತಿದ್ದರು. ಆದರೆ ಇತ್ತೀಚೆಗೆ

ಬಸ್ಸಿನಲ್ಲಿ ಇಲ್ಲವೇ ಟೆಂಪೋಗಳಲ್ಲಿ ಇಟ್ಟುಕೊಂಡು ಬರುತ್ತಾರೆ. ಕುಂಬಾರರ ಮನೆಗೆ ಹೋಗಿ ಒಂದು ಸೇರು ಅಕ್ಕಿ, ಒಂದು ಅಚ್ಚು ಬೆಲ್ಲ, ಐದು ಉತ್ತುತ್ತಿ, ಐದು ಕೊಬ್ಬರಿ, ಐದು ಬೆಳ್ಳುಳ್ಳಿ, ಐದು ಹರಿಸಿನದ ಕೊಂಬು, ಐದು ಹಂಗ್ದಾರ(ಅರಿಶಿಣದಿಂದ ತಯಾರಿಸಿದ ದಾರ), ಒಂದು ಸೇರು ಬೇಳೆ, ಒಂದು ಹಿಡಿ ಮೆಣಸಿನಕಾಯಿ, ಮೂರು ಎಲೆ, ಮೂರು ಅಡಿಕೆ ಕೊಟ್ಟು ಒಂಬತ್ತು ಮಡಕೆಗಳನ್ನು ತರುತ್ತಾರೆ. ಅದರಲ್ಲಿ ಎರಡು ಸೋರೆ ಅಂದರೆ ದೊಡ್ಡ ಮಡಿಕೆ, ಮೂರು ಮಧ್ಯಮ ಗಾತ್ರದವು, ನಾಲ್ಕು ಸಣ್ಣ ಮಗಿಗಳು ತರುತ್ತಾರೆ. ಅವುಗಳಲ್ಲಿ ಒಂದು ಕರಗದ ಮಗಿಯೆಂದು ತರುತ್ತಾರೆ. ಈ ರೀತಿ ಅರುಣೆ ತಂದು ಮದುವೆ ಮಾಡುವ ಕಾಡುಗೊಲ್ಲರು ಆದಿಮ ಬುಡಕಟ್ಟು ಎಂಬುದನ್ನು ಪ್ರತಿನಿಧಿಸುತ್ತಾರೆ. ಕಂಚು, ಹಿತ್ತಾಳೆ ಸ್ಟೀಲ್‌ಗಳ ಬಳಕೆಯ ಕಾಲದಲ್ಲಿಯೇ ತಮ್ಮ ಆದಿಮ ಸಂಸ್ಕೃತಿಗೆ ಮಹತ್ವ ಕೊಟ್ಟಿರುವುದು ತಿಳಿದುಬರುತ್ತದೆ.

**ಕರಗದ ಮಗಿ**

ಕರಗದ ಮಗಿಯನ್ನು ಗಂಡಿನ ಕಡೆಯವರು ತರುತ್ತಾರೆ. ಈ ಕರಗದ ಮಗಿಯು ಫಲವಂತಿಕೆಯ ಸಂಕೇತ. ಕರಗದ ಮಗಿಯಲ್ಲಿ ಒಂದು ಸೇರು ಅಕ್ಕಿ ಒಂಭತ್ತು ಉತ್ತುತ್ತಿ, ಐದು ಅರಿಶಿಣದ ಕೊಂಬು, ಐದು ಬೆಳ್ಳುಳ್ಳಿ, ಒಂದು ತುಂಡು ಬೆಲ್ಲ, ಮೂರು ಮೆಣಸಿನಕಾಯಿ ತುಂಬುತ್ತಾರೆ. ಅದನ್ನು ಚಾವಡಿಯ ಮೇಲಿಟ್ಟು ಶಾಸ್ತ್ರೋಕ್ತವಾಗಿ ಪೂಜೆ ಮಾಡಿ ಹೆಣ್ಣಿನ ತಲೆಯ ಮೇಲೆ ಹೊರಿಸುತ್ತಾರೆ. ಈ ಕರಗದ ಮಗಿಯನ್ನು ತನ್ನ ಸಂಬಂಧಿಕರಲ್ಲಿ ಕಲೆಯುವವರು (ಬೆರೆಯುವುವರು) ಮತ್ತು ಕಲೆಯದವರು (ಬೆರೆಯದವರು) ಎಂಬ ಬೆಡಗುಗಳಿರುವುದರಿಂದ ಮದಲಿಂಗನಿಗೆ ಕಲೆಯುವವರು ಮಾತ್ರ ಗಂಡಿನ ಮನೆಯಿಂದ ಹೊತ್ತುಕೊಂಡು ಬರಬೇಕು ಮತ್ತು ಅದು ಏನಾದರು ಕೆಳಗೆ ಬಿದ್ದರೆ ಆ ದಂಪತಿಗಳಲ್ಲಿ ಮಕ್ಕಳಾಗುವುದಿಲ್ಲ ಎಂಬ ನಂಬಿಕೆ ಅವರಲ್ಲಿದೆ. ಅಷ್ಟೇ ಅಲ್ಲ, ಮದುವೆಗೆ ತಂದ ಅರುಣೆಗಳು ಒಂದು ವರುಷದ ವರೆಗೂ ಹೊಡೆಯದ ಹಾಗೆ ನೋಡಿಕೊಳ್ಳಬೇಕು. ಅರುಣೆಗಳನ್ನು ಇಡಲು ಮುಖ್ಯ ಚಪ್ಪರದ ಒಂದು ಮೂಲೆಯಲ್ಲಿ ಒಂದು ಸಣ್ಣ ಚಪ್ಪರವನ್ನು ಹಸಿರು ಎಲೆಗಳಿಂದ ನಿರ್ಮಿಸುತ್ತಾರೆ. ಈ ಚಪ್ಪರವನ್ನು ಅರುಣೆಗುಡ್ಲು ಎಂದು ಕರೆಯುತ್ತಾರೆ ಎಂದು ಗುರುಲಿಂಗಯ್ಯನವರು ಹೇಳಿದ್ದಾರೆ.[೨೨]

**ಗೊಂದಿಗೆ ಶಾಸ್ತ್ರ**

ಕಾಡುಗೊಲ್ಲರಲ್ಲಿ ಭೂಮಿಯನ್ನು ಉಳುಮೆ ಮಾಡಿ ಬೆಳೆಯನ್ನು ಬೆಳೆಯಲು ಸಹಕಾರಿಯಾಗಿರುವುದರಿಂದ ಮೊದಲನೆಯ ಆದ್ಯತೆಯನ್ನು ಬಸವಣ್ಣನಿಗೆ ಕೊಡುತ್ತಾರೆ. ಚಪ್ಪರ ಹಾಕುವ ಶಾಸ್ತ್ರಕ್ಕಿಂತ ಮುಂಚಿತವಾಗಿ ಕಾಡುಗೊಲ್ಲರು ಎತ್ತು ಕಟ್ಟುವ ಗೊಂದಿಗೆಯನ್ನು ಪೂಜೆ ಮಾಡುತ್ತಾರೆ.(ಅಂದರೆ ಎತ್ತಿಗೆ ಹುಲ್ಲು ಹಾಕಿ ಮೇಯಿಸುವ ಜಾಗ), ಒಂದು ಚೆಂಬು, ಪವಿತ್ರವಾದ ನೀರು, ಎರಡು ಬಾಳೆಹಣ್ಣು, ಒಂದು ತೆಂಗಿನ ಕಾಯಿ, ಮೂರು ಕಲ್ಲಿನ ಬೆನವಗಳನ್ನು ಇಡುತ್ತಾರೆ. ಆ ಕಲ್ಲುಗಳೇ ಮೂರು ದೈವಗಳು. ಒಂದು ಭೂಮಿತಾಯಿ, ಎರಡು ಮಳೆರಾಯ, ಮೂರು ಬಸವಣ್ಣ,

ಸೃಷ್ಟಿಸುವ ಪೋಷಿಸುವ ಮತ್ತು ರಕ್ಷಿಸಿಸುವ ಸಂಕೇತಗಳಾದ ದೈವಗಳಿಗೆ ನನ್ನ ಅಪ್ಪನ ಪ್ರಕಾರ ರೂಪಗಳಿರಲಿಲ್ಲ.[೨೩]

ಈ ಮೂರು ಕಲ್ಲುಗಳ ಜೊತೆಗೆ ಮೂರು ಎಲೆ, ಮೂರು ಅಡಿಕೆ ಮೂರು ಮಿದಿಕೆ ತಂಬಿಟ್ಟು ಇಟ್ಟು ಪೂಜೆ ಮಾಡುತ್ತಾರೆ. ಕಾಡುಗೊಲ್ಲರು ಪಶುಪಾಲಕ ಸಮುದಾಯದವರಾಗಿರುವ ಕಾರಣದಿಂದ ಪ್ರತಿವರ್ಷ ತಪ್ಪದೇ ಕಾರುಣ್ಣಿಮೆ ಹಬ್ಬವನ್ನು ಮಾಡುತ್ತಾರೆ. ಮದುವೆಯಲ್ಲಿ ಗೊಂದಿಗೆ ಪೂಜೆ ಮಾಡುವುದು ಮರೆತರೆ ಮೂರು ವರ್ಷಗಳ ಕಾಲ ಕಾರುಣ್ಣಿಮೆ ಹಬ್ಬವನ್ನು ಆಚರಣೆ ಮಾಡುವಂತಿಲ್ಲ. ಈ ಕಾರಣಕ್ಕಾದರೂ ಗೊಂದಿಗೆ ಪೂಜೆ ಮಾಡುತ್ತಾರೆ. ಪಶುಪಾಲಕ ವರ್ಗವು ಪಶುಗಳಿಗಾಗಿ ತಮ್ಮ ಪ್ರಾಣ ಬಲಿ ಕೊಟ್ಟಿರುವುದು ಅನೇಕ ಕಾವ್ಯಗಳಲ್ಲಿ ಉಲ್ಲೇಖವಾಗಿದೆ. ಅದರಲ್ಲೂ ಕಾಡುಗೊಲ್ಲರು ಇಡೀ ತಮ್ಮ ಬದುಕನ್ನು ಪಶುಗಳಿಗಾಗಿಯೇ ಮೀಸಲಿಟ್ಟಿದ್ದಾರೆ.

**ಚಪ್ಪರ ಹಾಕುವ ಶಾಸ್ತ್ರ**

ಕಾಡುಗೊಲ್ಲರಲ್ಲಿ ಇದೊಂದು ವಿಶೇಷವಾದಂತಹ ಆಚರಣೆಯಾಗಿದೆ. ಮದುವೆಯು, ಯಾವುದೇ ರೀತಿಯ ನಿರ್ವಿಘ್ನಗಳಿಗೆ ಒಳಗಾಗದೆ ಸುಸೂತ್ರವಾಗಿ ನೆರವೇರಲು ಮೊದಲು ಚಪ್ಪರ ಹಾಕಲು ಒಂದು ಗುಂಡಿಯನ್ನು ತೆಗೆದು ಆ ಗುಂಡಿಯನ್ನು ದೈವಗುಂಡಿಯೆಂದು ಭಾವಿಸಿ ಆ ಗುಂಡಿಯನ್ನು ಶಾಸ್ತ್ರೋಕ್ತವಾಗಿ ಪೂಜೆ ಮಾಡುತ್ತಾರೆ. ಪೂಜೆಗೆ ಬೇಕಾದ ವಸ್ತುಗಳೆಂದರೆ ವೀಳ್ಯದೆಲೆ ಮೂರು ಅಡಕೆ, ಅಕ್ಕಿಹಿಟ್ಟಿನಿಂದ ಮಾಡಿದ ಮೂರು ಮಡಕೆ ತಂಬಿಟ್ಟು, ಎರಡು ಬಾಳೆಹಣ್ಣು, ಮೂರು ಉತ್ತುತ್ತಿ ಇಟ್ಟು, ಮೂರು ಅಂಗುದಾರ ಕಟ್ಟಿ, ಮೂರು ಜನ ಮುತ್ತೈದೆಯರಿಗೆ ಮಡಿಲು ತುಂಬಿ ನಂತರ ಮೊದಲನೇ ಕಂಬ ನಿಲ್ಲಿಸುತ್ತಾರೆ. ಚಪ್ಪರ ತಯಾರಿಸಲು ದೊಡ್ಡ ಮತ್ತು ಸಣ್ಣ ಪ್ರಮಾಣದ ಕಟ್ಟಿಗೆಗಳನ್ನು ತರುತ್ತಾರೆ. ಇವುಗಳನ್ನು ಕಾಡಿನಲ್ಲಿ ಇಲ್ಲವೇ ಬೇರೆಯವರ ಮನೆಗಳಿಂದ ಸಂಗ್ರಹಿಸುತ್ತಾರೆ.[೨೪]

ಗುರುಲಿಂಗಯ್ಯನವರು ಹೇಳಿರುವಂತೆ ಕಾಡುಗೊಲ್ಲರು ಚಪ್ಪರವನ್ನು ಹಾಕಲು ಹಲವು ಜನರ ಸಹಾಯವನ್ನು ಪಡೆಯುತ್ತಾರೆ. ಮದುವೆ ಕಾರ್ಯವೆಂದರೆ ತೋಟದವರು ತೆಂಗಿನ ಗರಿಯನ್ನು ಕೊಡುತ್ತಾರೆ. ಗಳಗಳನ್ನು ಹೊಂದಿರುವವರು ಗಳಗಳನ್ನು ಕೊಡುತ್ತಾರೆ. ಬೊಂಬು ಹೊಂದಿರುವವರು ಬೊಂಬು ಕೊಡುತ್ತಾರೆ. ಚಪ್ಪರ ಹಾಕುವುದಲ್ಲಿ ಅನುಭವ ಇರುವವರು ಚಪ್ಪರ ಹಾಕಲು ಬರುತ್ತಾರೆ. ಸಾಕಷ್ಟು ಜನ ಹಿರಿಯರು ಮತ್ತು ಕಿರಿಯರಿಗೆ ಮಾರ್ಗದರ್ಶನ ಮಾಡುತ್ತಾರೆ. ಸಾಮಾನ್ಯವಾಗಿ ಚಪ್ಪರವನ್ನು ಆಯತಾಕಾರದಲ್ಲಿ ಹಾಕುತ್ತಾರೆ. ಈ ಚಪ್ಪರವು ನಾಲ್ಕು ಮೂಲೆಗಳನ್ನು ಒಳಗೊಂಡಿದ್ದು ಒಂಬತ್ತು ಕಂಬಗಳಿಂದ ಕೂಡಿರುತ್ತದೆ. ಆ ಕಂಬಗಳು ಕಾಣದಂತೆ ಸುತ್ತಲೂ ತೆಂಗಿನ ಗರಿಗಳನ್ನು ಎಣೆಯುತ್ತಾರೆ. ಚಪ್ಪರದ ಮೇಲ್ಭಾಗವನ್ನು ಬಾಳೆ ಕಂದು ಮುಂತಾದವುಗಳಿಂದ ಅಲಂಕರಿಸುತ್ತಾರೆ. ಹಿಂದೆ ಬಹಳ ದೊಡ್ಡದಾಗಿ ಹಾಕುತ್ತಿದ್ದ ಚಪ್ಪರ ಅದರ ಸ್ವರೂಪದಲ್ಲಿ ಬದಲಾವಣೆಯನ್ನು ಕಂಡುಕೊಂಡಿದೆ. ಇತ್ತೀಚಿನ ದಿನಗಳಲ್ಲಿ ಶಾಸ್ತ್ರಕ್ಕಾಗಿ ಮಾತ್ರ ಚಪ್ಪರವನ್ನು ಹಾಕಿ ಉಳಿದಂತೆ ಪೆಂಡಾಲುಗಳನ್ನು ಹಾಕುವ ವ್ಯವಸ್ಥೆ ಹಟ್ಟಿಗಳಲ್ಲಿ ಜಾರಿಗೆ ಬಂದಿದೆ. ಹಾಗಾಗಿ ಮದುವೆಯೂ ಸಹ

ಸಾಂಪ್ರದಾಯಿಕತೆಯಿಂದ ಆಧುನಿಕತೆಯತ್ತ ಮುಖ ಮಾಡುತ್ತಿದೆ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಇಲ್ಲೂ ಸಹ ಜಾಗತೀಕರಣದ ಛಾಯೆ ತನ್ನ ಛಾಪನ್ನು ಮೂಡಿಸಿದೆ.

ಒಟ್ಟಾರೆ ಕಾಡುಗೊಲ್ಲರ ಮದುವೆಗೆ ಸಂಬಂಧಿಸಿದ ಆಚರಣೆಗಳ ಬಗ್ಗೆ ಹೇಳುವುದಾದರೆ ಆಧುನಿಕ ಕಾಲದಲ್ಲಿಯೂ ತಮ್ಮ ಸಾಂಪ್ರದಾಯಿಕ ಆಚರಣೆಗಳನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಉಳಿಸಿಕೊಂಡು ಬಂದಿರುವುದು ಈ ಸಮುದಾಯ ಬುಡಕಟ್ಟು ಎಂಬುದನ್ನು ತೋರಿಸುತ್ತದೆ. ಇತರೆ ಬುಡಕಟ್ಟುಗಳಿಗೆ ಹೋಲಿಸಿದರೆ ಇವರಲ್ಲಿ ಗುರುತಿಸಬಹುದಾದಂತಹ ಬದಲಾವಣೆಗಳು ಆಗಿಲ್ಲವೆಂದು ಹೇಳಬಹುದು. ಈ ಅಧ್ಯಯನದ ಆಶಯ ಕೂಡ ಇದೇ ಆಗಿದೆ. ಇನ್ನೂ ಎಷ್ಟೋ ಹಟ್ಟಿಗಳು ಆದಿಮ ಬುಡಕಟ್ಟಿನಂತೆಯೇ ಉಳಿಸಿಕೊಂಡಿವೆ. ಇವರು ಆಧುನಿಕ ಬದುಕನ್ನು ಬಹುಬೇಗವಾಗಿ ಒಪ್ಪಿಕೊಳ್ಳುವುದಿಲ್ಲ. ಇವರಲ್ಲಿ ಜಾಗ್ರತೆಯ ಕೊರತೆ ಎದ್ದು ಕಾಣುತ್ತದೆ. ಶಿಕ್ಷಣದ ಮಟ್ಟ ಕಡಿಮೆ ಇದೆ. ಆರ್ಥಿಕವಾಗಿ ಹಿಂದೆ ಉಳಿದಿದ್ದಾರೆ. ಹಾಗಾಗಿ ಎಂದೋ ಹುಟ್ಟಿಕೊಂಡಿರುವ ಕೆಲವು ಆಚರಣೆಗಳು ಹಾಗೆಯೇ ಉಳಿದುಬಂದಿವೆ. ಇವು ಎಲ್ಲೋ ಒಂದು ಕಡೆ ಅಭಿವೃದ್ಧಿಗೆ ಮಾರಕವಾಗಿವೆ. ಆಚರಣೆಗಳಲ್ಲಿರುವ ವೈಚಾರಿಕತೆಯನ್ನು ಅಧ್ಯಯನ ಮಾಡುವುದರ ಮೂಲಕ ಮೌಢ್ಯ ಎಂದು ಗುರುತಿಸಿರುವ ಆಚರಣೆಗಳನ್ನು ಬಿಟ್ಟು ಹೊಸ ಬದುಕನ್ನು ಸ್ವಾಗತಿಸುವುದು ಅನಿವಾರ್ಯವಾಗಿದೆ. ಕಾಡುಗೊಲ್ಲರ ಮದುವೆ ಒಂದು ವಿಶಿಷ್ಟವಾದ ಸಂಪ್ರದಾಯ. ಯಾಕೆಂದರೆ ಯಾವ ಸಮುದಾಯದಲ್ಲಿಯೂ ಕಂಡುಬಾರದ ಅನೇಕ ಆಚರಣೆಗಳು ಈ ಸಮುದಾಯದಲ್ಲಿ ಕಂಡು ಬರುತ್ತವೆ. ಹಿಂದೆ ಕಾಡುಗೊಲ್ಲರ ಮದುವೆಗಳು ೮ ದಿನಗಳ ಕಾಲ ನಡೆಯುತ್ತಿದ್ದವು. ಪ್ರತಿಯೊಂದು ಸಂಪ್ರದಾಯವು ಮುಖ್ಯವಾಗಿರುತ್ತಿತ್ತು. ಆದರೆ ಇತ್ತೀಚೆಗೆ ಕಾಡುಗೊಲ್ಲರಲ್ಲಿಯೂ ಅಂತರಜಾತಿ ವಿವಾಹಗಳನ್ನು ಮಾಡಿಕೊಳ್ಳುತ್ತಾರೆ. ಆಧುನಿಕತೆಯ ಪ್ರಭಾವದಿಂದ ಕಾಡುಗೊಲ್ಲರೂ ಸಹ ಇಂತಹ ವಿವಾಹ ಸಂಬಂಧಗಳನ್ನು ಇತ್ತೀಚೆಗೆ ಅವರ ಮನೆಯವರೂ ಸಹ ಒಪ್ಪಿರುತ್ತಾರೆ. ಈ ಹಿಂದೆ ಇಂತಹ ಆಚರಣೆಗಳನ್ನು ಕಾಡುಗೊಲ್ಲರು ಒಪ್ಪುತ್ತಿರಲಿಲ್ಲ. ಅಂತಹವರನ್ನು ಹಟ್ಟಿಯಿಂದ ಹಾಗೂ ಸಂಬಂಧದಿಂದ ದೂರ ಮಾಡುತ್ತಿದ್ದರು. ಆದರೆ ಇತ್ತೀಚೆಗೆ ಇದಕ್ಕೆ ಹೊಂದಿಕೊಂಡು ನಡೆಯುತ್ತಿರುವುದನ್ನು ನೋಡುತ್ತೇವೆ. ಈ ಹಿಂದೆ ಇವರ ಮೇಲೆ ಆಧುನೀಕರಣ ಎಷ್ಟೇ ಪ್ರಭಾವ ಬೀರಿದರೂ ಇವರು ಮಾತ್ರ ತಮ್ಮ ಸಂಪ್ರದಾಯಗಳನ್ನು ಬಿಟ್ಟು ನಡೆದುಕೊಳ್ಳುತ್ತಿರಲಿಲ್ಲ. ಏಕೆಂದರೆ ಕಾಡುಗೊಲ್ಲರಿಗೆ ದೇವರೆಂದರೆ ತುಂಬಾ ಭಯ. ಆದರೆ ಇತ್ತೀಚೆಗೆ ಕಾಡುಗೊಲ್ಲರೂ ಸಹ ಅಂತರಜಾತಿ ವಿವಾಹ ಆದವರೊಂದಿಗೂ ಕೊಡುಕೊಳ್ಳುವ ಶಾಸ್ತ್ರ ಮುಂದುವರಿಸಿರುವುದನ್ನು ಕಾಣಬಹುದಾಗಿದೆ. ಇದನ್ನು ಗಮನಿಸಿದರೆ ಇವರೂ ಸಹ ಆಧುನಿಕತೆಗೆ ಒಗ್ಗಿಕೊಳ್ಳುತ್ತಿರುವುದನ್ನು ನೋಡಬಹುದಾಗಿದೆ.

ಕಾಡುಗೊಲ್ಲರಲ್ಲಿ ಇತ್ತೀಚೆಗೆ ಆಧುನಿಕತೆಯ ಪ್ರಭಾವದಿಂದ ಸಿನಿಮೀಯ ರೀತಿಯ ವಿವಾಹಗಳನ್ನೂ ಸಹ ಕಾಣಬಹುದಾಗಿದೆ. ಉದಾಹರಣೆಗೆ ದಿನಾಂಕ ೧೦/೧೧/೨೦೧೯ರಂದು ಹಿರಿಯೂರು ತಾಲ್ಲೂಕಿನ ಶೀಗೆಹಟ್ಟಿ ಗೊಲ್ಲರಹಟ್ಟಿಯಲ್ಲಿ ಒಬ್ಬ ಕುರಿಗಾಹಿ ಅರುಣ್ ಎಂಬ ಹುಡುಗ ಎಂ.ಎ. ಪದವೀಧರೆ

ಅಮೃತಾ ಎಂಬ ಅದೇ ಹಟ್ಟಿಯ ಹುಡುಗಿಯೊಂದಿಗೆ ಕುರಿಹಟ್ಟಿಯಲ್ಲೇ ಓಡಿಬರುತ್ತಿರುವ ಹುಡುಗಿಗೆ ತಾಳಿ ಕಟ್ಟಿರುವ ವಿಚಾರ ಸಾಮಾಜಿಕ ಜಾಲತಾಣದಲ್ಲಿ ಹರಿದಾಡುತ್ತಿರುವುದನ್ನು ನೋಡಬಹುದಾಗಿದೆ. ಇದೂ ಸಹ ಇಂದಿನ ಜಾಗತೀಕರಣದ ಪ್ರಭಾವವಾಗಿದೆ(೧೧/೧೧/೨೦೧೯ ರ ಟಿ.ವಿ.೯ ಕನ್ನಡ ಸಮಯ ಬೆಳಿಗ್ಗೆ ೧೦.೩೦). ಇದನ್ನು ನೋಡಿದರೆ ಕಾಡುಗೊಲ್ಲರ ಮೇಲೆ ಜಾಗತೀಕರಣ ಎಷ್ಟು ಪ್ರಭಾವ ಬೀರಿದೆ ಎಂಬುದಕ್ಕೆ ಇಂತಹ ಪ್ರಸ್ತುತ ಪ್ರಕರಣಗಳೇ ಸಾಕ್ಷಿಯಾಗಿವೆ. ಹೀಗೆ ಕಾಡುಗೊಲ್ಲರೂ ಸಹ ಇಂದಿನ ಆಧುನೀಕರಣ, ಜಾಗತೀಕರಣ ಹಾಗೂ ಮುಂತಾದ ಪ್ರಸ್ತುತ ಬದಲಾವಣೆಗಳ ಪ್ರಭಾವ ಇವರ ಮೇಲೆ ಪರಿಣಾಮಕಾರಿಯಾಗಿ ಆಗಿದೆ.

**ಜನನ:** ಕಾಡುಗೊಲ್ಲರಲ್ಲಿ ಹುಟ್ಟುವುದಕ್ಕೂ ಸಂಪ್ರದಾಯವಿದೆ. ಹಾಗೆಯೇ ಸಾಯುವುದಕ್ಕೂ ಸಂಪ್ರದಾಯವಿದೆ. ಕಾಡುಗೊಲ್ಲರ ಹೆಣ್ಣುಮಕ್ಕಳು ಹೆರಿಗೆಯ ಸಮಯದಲ್ಲಿ ಅನೇಕ ಸಂಪ್ರದಾಯಗಳನ್ನು ಅನುಸರಿಸಬೇಕಾಗುತ್ತದೆ. ಕಾಡುಗೊಲ್ಲರಲ್ಲಿ ಹುಟ್ಟಿದರೂ ಸೂತಕ ಹಾಗಾಗಿ ಅವರ ಪ್ರಕಾರ ಕಾಡುಗೊಲ್ಲರ ಹಟ್ಟಿ ಒಳಗೆ ಮಗು ಜನಿಸಿದರೆ ಅದು ಸೂತಕಕ್ಕೆ ಒಳಪಡುತ್ತದೆ. ಆ ಕಾರಣದಿಂದ ಹೆರಿಗೆಯಾದ ಹೆಣ್ಣುಮಕ್ಕಳನ್ನು ಹಿಂದೆ ಒಂದು ತಿಂಗಳ ಕಾಲ ಹಟ್ಟಿಯಿಂದ ಹೊರಗೆ ಅಂದರೆ ಸೂತಕದ ಜಾಗ ಎಂದು ನಿಗದಿ ಮಾಡಿರುವ ಜಾಗದಲ್ಲಿ ಗುಬ್ಬವನ್ನು ನಿರ್ಮಿಸುತ್ತಾರೆ. ಅಲ್ಲಿ ಒಂದು ತಿಂಗಳ ಕಾಲ ಬಾಣಂತಿ ಮತ್ತು ಮಗು ಇಬ್ಬರೇ ಇರುತ್ತಿದ್ದರು ಅವರ ಸಹಾಯಕ್ಕೆ ಯಾರೂ ಇರುತ್ತಿರಲಿಲ್ಲ ಎಂದು ಹಿರಿಯರು ಹೇಳುತ್ತಾರೆ. ಇತ್ತೀಚೆಗೆ ಕಾಲ ಬದಲಾದಂತೆ ಈ ಪದ್ಧತಿಯಲ್ಲಿ ಸಡಿಲಿಕೆಯಾಗಿದೆ. ಇಂದು ಒಂದು ತಿಂಗಳ ಬದಲಾಗಿ ೧೫ ದಿನಗಳು, ನಂತರ ೯ ದಿನಗಳಿಗೆ ಬಂದಿದೆ. ಈಗ ಬಾಣಂತಿ ಮತ್ತು ಮಗುವಿನ ಜೊತೆಯಲ್ಲಿ ವಯಸ್ಸಾದವರು ಇರುತ್ತಾರೆ. ಏಕೆಂದರೆ ಮಗುವನ್ನು ಆರೈಕೆ ಮಾಡುವ ದೃಷ್ಟಿಯಿಂದ ಹಿಂದೆ ಸೂಲಗಿತ್ತಿಯವರು ಬಂದು ಹೆರಿಗೆ ಮಾಡಿಸುತ್ತಿದ್ದರು. ಇಂದು ಸರ್ಕಾರಿ ಆಸ್ಪತ್ರೆಗಳಿರುವ ಕಾರಣದಿಂದ ಆಸ್ಪತ್ರೆಯಲ್ಲಿ ಹೆರಿಗೆಯಾದ ಬಾಣಂತಿ ಮತ್ತು ಮಗುವನ್ನು ೫ ದಿನಗಳ ಕಾಲ ಆಸ್ಪತ್ರೆಯಲ್ಲಿ ಇರಿಸಿ ಆನಂತರ ಹಟ್ಟಿಗೆ ಬರುವ ದಿನದಂದು ಮಡಿವಾಳರನ್ನು ಕರೆಯಿಸಿ ಅವರಿಂದ ಬಾಣಂತಿಗೆ ಮತ್ತು ಮಗುವಿಗೆ ಗೋಮೂತ್ರವನ್ನು ಹಾಕುವ ಮೂಲಕ ಹಟ್ಟಿಯ ಒಳಗಡೆ ಪ್ರವೇಶ ಮಾಡಲು ಅನುಮತಿ ಕೊಡುತ್ತಾರೆ. ಹಿಂದೆ ಹೀಗಿರಲಿಲ್ಲ. ಒಂದು ತಿಂಗಳು ಇಲ್ಲವೇ ೧೫ ದಿನಗಳ ಕಾಲ ಮಡಿವಾಳರು ಬಂದು ಪ್ರತಿಯೊಂದು ದಿವಸ ಗುಬ್ಬವನ್ನು ಬದಲಾಯಿಸಿ ಬಾಣಂತಿಗೂ ಮತ್ತು ಮಗುವಿಗೂ ಸ್ನಾನ ಮಾಡಿಸಿ ಮಡಿ ಬಟ್ಟೆಯನ್ನು ಕೊಟ್ಟು ಗೋಮೂತ್ರ ಸಿಂಪಡಿಸುತ್ತಿದ್ದರು. ಕಾಲ ಬದಲಾದಂತೆ ಈ ಆಚರಣೆ ನಿಂತುಹೋಗಿದೆ. ಈ ಸಂಪ್ರದಾಯಕ್ಕೆ ಒಳಪಡಲು ಕಾರಣವೇನೆಂದರೆ ಕಾಡುಗೊಲ್ಲರು ಪಶುಪಾಲಕರು ಮತ್ತು ಅಲೆಮಾರಿಗಳು. ಹಾಗಾಗಿ ವಲಸೆ ಹೋದಂತಹ ಸಮಯದಲ್ಲಿ ಹೆರಿಗೆಯಾದ ಹೆಣ್ಣುಮಕ್ಕಳನ್ನು ಮಳೆ, ಗಾಳಿ ಬಿಸಿಲಿನಿಂದ ಸಂರಕ್ಷಣೆ ಮಾಡುವ ದೃಷ್ಟಿಯಿಂದ ಈ ಸಂಪ್ರದಾಯ ಮುಂದುವರಿದುಕೊಂಡು ಬಂದಿದೆ. ಆದರೆ ಇತ್ತೀಚೆಗೆ ಇದು ಸ್ತ್ರೀಯರನ್ನು ಶೋಷಣೆ ಮಾಡುವ ಪದ್ಧತಿಯಾಗಿ ರೂಪಾಂತರ ಹೊಂದಿದೆ ಎಂದು ಹೇಳಬಹುದು.

**ಜನ್ನಿಗೆ ಪದ್ದತಿ:** ಜನ್ನಿಗೆ ಎಂಬುದು ಇದು ಕಾಡುಗೊಲ್ಲರಲ್ಲಿ ಹುಟ್ಟಿನ ಸೂತಕದ ಕಾರ್ಯಕ್ಕೆ ಸಂಬಂಧಿಸಿದ್ದಾಗಿದೆ. ಮಗು ಜನಿಸಿದಾಗ ಬಾಣಂತಿಯನ್ನು ಹಟ್ಟಿಯ ಹೊರಗೆ ಗುಡಿಸಲು ನಿರ್ಮಿಸಿ ಬಿಡುತ್ತಿದ್ದರು. ನಂತರ ಅವರನ್ನು ಒಳಗಡೆ ಕರೆದುಕೊಳ್ಳುವಾಗ ಸೂತಕವನ್ನು ತೆಗೆಯುವುದು ಕಾಡುಗೊಲ್ಲರಲ್ಲಿ ಇರುವ ಪಾರಂಪರಿಕ ಸಂಪ್ರದಾಯವಾಗಿತ್ತು. ಈ ಸಂದರ್ಭದಲ್ಲಿ ನಡೆಯುವ ಒಂದು ಪ್ರಕ್ರಿಯೆಯೆ ಜನ್ನಿಗೆಯಾಗಿದೆ. ಈ ಕಾರ್ಯಕ್ಕೆ ಕಾಡುಗೊಲ್ಲರು ಪಶುಪಾಲಕರಾಗಿರುವುದರಿಂದ ತಮ್ಮ ಪಶುಗಳಲ್ಲಿ ಒಂದು ಹಸುವನ್ನು ಜನ್ನಿಗೆ ಹಸುವೆಂದು ಬಿಡುತ್ತಿದ್ದರು. ಬಾಣಂತಿಯನ್ನು ಹಟ್ಟಿಯ ಒಳಗಡೆ ಕರೆಯಿಸಿಕೊಳ್ಳುವಾಗ ಈ ಹಸುವಿನ ಹಾಲನ್ನು ಮಗುವಿನ ಬಾಯಿಗೆ ಹಾಕುತ್ತಿದ್ದರು. ಈ ಹಸುವಿನ ಹಾಲನ್ನು ಜನ್ನಿಗೆ ಕಾರ್ಯಕ್ಕೆ ಹೊರತುಪಡಿಸಿ ಬೇರೆ ಯಾವ ಉದ್ದೇಶಕ್ಕೂ ಬಳಸುತ್ತಿರಲಿಲ್ಲ. ಇತ್ತೀಚಿನ ದಿನಗಳಲ್ಲಿ ಪಶುಪಾಲನೆ ಕಷ್ಟವಾಗಿರುವ ಹಿನ್ನೆಲೆಯಲ್ಲಿ ಕುರಿಸಾಕಾಣಿಕೆ ಹೆಚ್ಚಾಗುತ್ತಿದ್ದು ಈ ಕುರಿಗಳಲ್ಲಿ ಒಂದು ಕುರಿಯನ್ನು ಜನ್ನಿಗೆ ಕುರಿಯೆಂದು ಬಿಟ್ಟು ಈ ಕಾರ್ಯಕ್ಕೆ ಹಸುವಿನ ಬದಲಾಗಿ ಕುರಿಯ ಹಾಲನ್ನೇ ಬಳಸುತ್ತಿರುವುದು ಕಂಡುಬಂದಿದೆ. ಜನ್ನಿಗೆ ಹಸು ಇಲ್ಲವೆ ಕುರಿ ದೇವರಿಗೆ ಸಮಾನವೆಂದು ಭಾವಿಸುತ್ತಾರೆ. ಹಾಗಾಗಿ ಇವು ಮರಣ ಹೊಂದಿದಾಗ ಅವುಗಳನ್ನು ಸಮಾಧಿ ಮಾಡುತ್ತಾರೆ.

ಜನ್ನಿಗೆ ಪದ್ಧತಿಯಲ್ಲಿ ಎರಡು ವಿಧಗಳಿವೆ. ಹೊರಜನ್ನಿಗೆ ಮತ್ತು ಕಿರುಜನ್ನಿಗೆ. ಪ್ರಸ್ತುತ ದಿನದಲ್ಲಿಯೇ ಜನ್ನಿಗೆ ಹೊಯ್ಯುವ ಪದ್ಧತಿ ಮುಂದುವರಿಯುತ್ತಿದೆ. ಆಸ್ಪತ್ರೆಯಲ್ಲಿಯೇ ಹೆರಿಗೆಯಾದರೂ ಸಹ ಜನ್ನಿಗೆ ಹೊಯ್ಯುವುದರ ಮೂಲಕ ಹಟ್ಟಿಯ ಒಳಗೆ ಸೇರಿಸಿಕೊಳ್ಳುತ್ತಾರೆ. ಜನ್ನಿಗೆ ಎಂದರೆ ಕಾಡುಗೊಲ್ಲರ ಪ್ರಕಾರ ಹಾಲು ಎಂದು. ಇವರು ಪಶುಪಾಲಕರಾದ ಕಾರಣದಿಂದ ಮಗುವಿಗೆ ನಾಮಕರಣವನ್ನು ಜನ್ನಿಗೆ ಹೊಯ್ಯುವುದರ ಮೂಲಕ ನೆರವೇರಸಿಕೊಳ್ಳುತ್ತಾರೆ.

**ಹೊರಜನ್ನಿಗೆ:** ಅಂದರೆ ಹೆರಿಗೆಯಾದ ಬಾಣಂತಿ ಮತ್ತು ಮಗುವನ್ನು ಹಟ್ಟಿಯ ಹುದೇ ಬಾಗಿಲಲ್ಲಿ ನಿಲ್ಲಿಸಿ ಜನ್ನಿಗೆ ಹಸುವಿನ ಹಾಲಿನಿಂದ ಬಾಣಂತಿ ಮತ್ತು ಮಗುವಿನ ಬಾಯಿಗೆ ಮೂರು ಹನಿ ಬಿಡುತ್ತಾರೆ. ಆನಂತರ ಮಗುವಿನ ಕಾಲುಗಳನ್ನು ಹಾಲಿನಿಂದ ತೊಳೆಯುತ್ತಾರೆ.

**ಒಳಜನ್ನಿಗೆ:** ಒಳಜನ್ನಿಗೆ ಎಂದರೆ ಹಟ್ಟಿಯ ಒಳಗಡೆ ಬಾಣಂತಿ ಮತ್ತು ಮಗುವಿಗೆ ದೇವಸ್ಥಾನದಲ್ಲಿ ಪೂಜಾರಿ ಹಾಕುವ ಜನ್ನಿಗೆ ಹಾಲು. ಇದನ್ನು ಒಳಜನ್ನಿಗೆ ಎನ್ನುತ್ತಾರೆ.

**ನಾಮಕರಣ:** ಕಾಡುಗೊಲ್ಲರಲ್ಲಿ ಹೆಸರಿಡುವುದು ಅಂತಹ ವಿಶೇಷವನ್ನು ಪಡೆದುಕೊಂಡಿಲ್ಲ. ಅವರ ಸಂಪ್ರದಾಯದ ಪ್ರಕಾರ ಕಾಡುಗೊಲ್ಲರ ಮಕ್ಕಳಿಗೆ ತಮ್ಮ ಮನೆಯ ದೇವರ ಗುಡಿಯ ಪೂಜಾರಿ ನಾಮಕರಣವನ್ನು ಮಾಡುತ್ತಾನೆ. ಕಾಡುಗೊಲ್ಲರಲ್ಲಿ ಪೂಜಾರಿಯೂ ದೇವರಷ್ಟೆ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದಾನೆ. ಇಲ್ಲಿ ನಾಮಕರಣಕ್ಕೆ ಜನ್ನಿಗೆ ಹಸುವಿನ ಹಾಲನ್ನು ಮಗುವಿಗೆ ಕುಡಿಸುವುದರ ಮೂಲಕ ಪೂಜಾರಿಯು ತಂದೆ-ತಾಯಿಗಳು ಸೂಚಿಸಿದ ಹೆಸರನ್ನು ಮೂರು ಬಾರಿ ಮಗುವಿನ

ಕಿವಿಯಲ್ಲಿ ಹೇಳುತ್ತಾನೆ. ಆನಂತರ ಜನ್ನಿಗೆ ಹಾಲನ್ನು ಮೂರು ಹನಿ ಮಗುವಿನ ಬಾಯಿಗೆ ಬಿಡುತ್ತಾನೆ. ಅಲ್ಲಿ ನಾಮಕರಣ ಶಾಸ್ತ್ರ ಮುಗಿದಂತೆ. ಅಲ್ಲಿ ಸೇರಿರುವ ಎಲ್ಲಾ ಭಕ್ತರಿಗೆ ಸಕ್ಕರೆ ಹಂಚುವುದರ ಮೂಲಕ ಸರಳವಾಗಿ ನಾಮಕರಣ ಶಾಸ್ತ್ರ ಮಾಡಿ ಮುಗಿಸುತ್ತಾರೆ.

ಕಾಡುಗೊಲ್ಲರಲ್ಲಿ ಈ ಜನನದ ಸಂದರ್ಭದಲ್ಲಿ ಹಲವಾರು ಮಹಿಳೆಯರು ಮತ್ತು ಎಳೆಯ ಮಕ್ಕಳು ಸಾವನ್ನಪ್ಪಿರುವ ಘಟನೆಗಳು ನಡೆದಿವೆ. ಏಕೆಂದರೆ ಅಸುರಕ್ಷಿತ. ಹೆರಿಗೆ ನಿಯಮ ಮತ್ತು ಅವರನ್ನು ಸರಿಯಾಗಿ ನೋಡಿಕೊಳ್ಳದ ಕಾರಣ ಮಳೆ, ಗಾಳಿ, ಬಿಸಿಲು ಹಾಗೂ ಹಾವುಗಳ ಕಾರಣದಿಂದ ಸಾವು ಸಂಭವಿಸಿರುವ ಸಂಭವವುಂಟು. ಕಾಡುಗೊಲ್ಲರ ಹಟ್ಟಿಗಳು ಸಮಸ್ಯೆಯ ಕೂಪಗಳಾಗಿವೆ. ಏಕೆಂದರೆ ಹುಟ್ಟಿದರೂ ಸೂತಕ, ಹೆತ್ತರೂ ಸೂತಕ, ಮದುವೆಗೂ ಸೂತಕ, ಮಡಿದರೂ ಸೂತಕ, ಹಾಗೆಯೇ ಋತುಮತಿಯಾದರೂ ಸೂತಕ ಎಂಬ ಸಂಪ್ರದಾಯ ಅವರ ಬದುಕನ್ನು ಬಲೆಯೋಪಾದಿಯಲ್ಲಿ ಹೆಣೆದುಕೊಂಡಿರುವುದರಿಂದ ಅದರಿಂದ ಬಿಡಿಸಿಕೊಳ್ಳಲು ಅವರಿಂದ ಸಾಧ್ಯವಾಗುತ್ತಿಲ್ಲ. ಅಷ್ಟೇ ಅಲ್ಲ, ಅವರು ಇನ್ನೂ ಸಹ ಆಧುನಿಕತೆಗೆ ಒಳಗಾಗಿಲ್ಲ. ತಲತಲಾಂತರದಿಂದ ನಡೆದುಕೊಂಡು ಬಂದ ಸಂಪ್ರದಾಯಗಳನ್ನು ನಂಬಿಕೊಂಡು ಬಂದಿದ್ದಾರೆ. ವಿದ್ಯಾವಂತ ಸಂಪ್ರದಾಯವು ಸಹ ಅಸಹಾಯಕರಾಗಿದ್ದಾರೆ. ಏಕೆಂದರೆ ಅವರ ಹಿರಿಯರು ಯುವಕರ ಮಾತುಗಳಿಗೆ ಬೆಲೆ ಕೊಡುವುದಿಲ್ಲ. ಯುವಕರನ್ನು ಹಿರಿಯರು ಅನುಮಾನದ ದೃಷ್ಟಿಯಿಂದ ನೋಡುತ್ತಾರೆ. ಇವರ ಈ ಪದ್ಧತಿಯನ್ನು ಯಾವ ಸರ್ಕಾರದಿಂದ ಬಿಡಿಸಲು ಸಾಧ್ಯವಾಗಿಲ್ಲ. ಏಕೆಂದರೆ ಇವರು ಕಾನೂನಿಗಿಂತಲೂ ದೇವರನ್ನು ಅತಿಯಾಗಿ ನಂಬುತ್ತಾರೆ. ಅಷ್ಟೇ ಅಲ್ಲ, ಇವರು ಶಿಕ್ಷಣದಿಂದ ವಂಚಿತ ಸಮುದಾಯವಾಗಿರುವುದರಿಂದ ತಮ್ಮ ತಪ್ಪಿನ ಅರಿವು ಇವರಿಗೆ ಆಗಿಲ್ಲ.

ಇತ್ತೀಚೆಗೆ ಕೆಲವು ಹಟ್ಟಿಗಳಲ್ಲಿ ನಗರೀಕರಣ, ಕೈಗಾರೀಕರಣ ಹಾಗೂ ಆಧುನೀಕರಣ ಇವುಗಳ ಪ್ರಭಾವದಿಂದಾಗಿ ಸ್ವಲ್ಪಮಟ್ಟಿಗೆ ಈ ಪದ್ಧತಿ ಸುಧಾರಿಸಿದೆ ಎಂದು ಹೇಳಬಹುದು. ನಗರಗಳಲ್ಲಿ ವಾಸಿಸುವ ಕಾಡುಗೊಲ್ಲರು ಈ ಪದ್ಧತಿಯನ್ನು ಅನುಸರಿಸುವುದಿಲ್ಲ.

ಜಾಗತೀಕರಣಕ್ಕೆ ಒಳಗಾದಂತೆ ಕಾಡುಗೊಲ್ಲರ ಬದುಕು ಬದಲಾಗುತ್ತಿದೆ. ಅಂದರೆ ಅವರ ಆಚರಣೆಗಳಲ್ಲಿ ಸಡಿಲಿಕೆ ಉಂಟಾಗುತ್ತಿದೆ. ಇತ್ತೀಚೆಗೆ ವಿದ್ಯಾವಂತ ಯುವಕರು ಅಂದರೆ ನಗರವಾಸಿ ಕಾಡುಗೊಲ್ಲರು ಇಂತಹ ಪದ್ಧತಿಗಳನ್ನು ವಿರೋಧಿಸುತ್ತಿದ್ದಾರೆ. ಹಳ್ಳಿಗಳಲ್ಲಾದರೆ ಶಾಲೆಗಳಿಗೆ ಕಳಿಸುವುದಿಲ್ಲ. ಆದರೆ ನಗರಗಳಲ್ಲಿ ವಾಸವಾಗಿರುವ ಕಾಡುಗೊಲ್ಲರು ತಮ್ಮ ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸುತ್ತಾರೆ. ಒಂದು ಮಾತಿನಲ್ಲಿ ಹೇಳುವುದಾದರೆ ನಗರಗಳಲ್ಲಿ ಸೂತಕ ಎಂಬ ಪದವೇ ಇರುವುದಿಲ್ಲ. ಹಾಗಾಗಿ ಕಾಲ ಬದಲಾವಣೆಯಾದಂತೆ ಕಾಡುಗೊಲ್ಲರ ಸಂಸ್ಕೃತಿ ಬದಲಾಗುತ್ತಾ ಹೋಗುತ್ತದೆ. ಇದರಲ್ಲಿ ಕಾಡುಗೊಲ್ಲರು ಬದಲಾಗಬೇಕೆ ವಿನಾಃ ಸಮಾಜದಿಂದ ಅಥವಾ ಸರ್ಕಾರದಿಂದ ಅಥವಾ ಒತ್ತಾಯದಿಂದ ಬದಲಾಗುವುದಿಲ್ಲ.

ಋತುಮತಿ ಶಾಸ್ತ್ರದ ಬಗ್ಗೆ ತೀ. ನಂ. ಶಂಕರನಾರಯಣ ಅವರು ಈ ರೀತಿಯಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇಲ್ಲಿ ಅವಳಿಗೆ ಹಸಿರು ಚಪ್ಪರವನ್ನು ಹಾಕಿ ಕೊಡುತ್ತಾರೆ. ಈ ಹಸಿರು ಚಪ್ಪರದಲ್ಲಿ ಅವಳು ೯ ದಿನಗಳ ಕಾಲ ಇರುತ್ತಾಳೆ. ಇಪ್ಪತ್ತೊಂದು ದಿನಗಳ ಅವಧಿಯಲ್ಲಿ ಅವಳು ಮಂದೆಯಲ್ಲಿ ಏಳು ದಿನಗಳು, ಮಂದೆಗೆ ಬರುವ ಮೊದಲು ಹಸಿರು ಚಪ್ಪರದಲ್ಲಿ ೫ ದಿನಗಳು 'ಮಂದೆಯನ್ನು' ಬಿಟ್ಟ ನಂತರ ಹಸಿರು ಚಪ್ಪರದಲ್ಲಿ ೯ ದಿನಗಳು ಇದ್ದಂತಾಯಿತು. ಇಪ್ಪತ್ತೆರಡನೆಯ ದಿನ ಅವಳಿಗೆ ನೀರು ಹಾಕಿ ಮಡಿ ಬಟ್ಟೆಯನ್ನು ಕೊಟ್ಟು ಹಟ್ಟಿಯ ಒಳಕ್ಕೆ ಕರೆದುಕೊಳ್ಳುತ್ತಾರೆ. ಅಂದು ಅವಳ ಮನೆಯಲ್ಲಿ ಪಾಯಸ ಮಾಡಿಸಿ ಊಟ ಮಾಡಿಸುತ್ತಾರೆ.[೧೫]

ಇತ್ತೀಚೆಗೆ ವಿದ್ಯಾವಂತ ನಗರವಾಸಿ ನೌಕರಿಯಲ್ಲಿರುವ ತಂದೆ ತಾಯಿಗಳು ಇದನ್ನು ಒಂದು ಸೂತಕ ಎಂದು ಭಾವಿಸದೆ ತಮ್ಮ ಹೆಣ್ಣುಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸಲು ಪ್ರಾರಂಭಿಸಿದ್ದಾರೆ. ಆದರೆ ಅಂತಹವರ ಸಂಖ್ಯೆ ಕಡಿಮೆ. ಆದಾಗ್ಯೂ ಕೆಲವು ಸಂಪ್ರದಾಯಸ್ಥ ನಗರವಾಸಿ ಸಮುದಾಯದ ಜನರು ನಗರದಲ್ಲಿ ಮನೆ ನಿರ್ಮಿಸುವಾಗಲೂ ಮೈನೆರೆದ ಹೆಣ್ಣುಮಕ್ಕಳಿಗೋಸ್ಕರ ಮತ್ತು ಮುಟ್ಟಾದವರಿಗೆಂದು ಒಂದು ಪ್ರತ್ಯೇಕ ಕೊಠಡಿಯನ್ನು ನಿರ್ಮಿಸುತ್ತಿರುವುದನ್ನು ನೋಡಿದರೆ ಇಂತಹ ಆಚರಣೆಗಳಿಗೆ ಮತ್ತು ಸೂತಕ ಮತ್ತು ಮಡಿ ಮೈಲಿಗೆಗೆ ಕೊನೆ ಎಲ್ಲಿ ಎಂಬ ಭಾವನೆ ಉಂಟಾಗುತ್ತದೆ. ಬಹುಶಃ ಕಾಲವಷ್ಟೇ ಇವರನ್ನು ಬದಲಾಯಿಸಬೇಕು. ಇದೆಲ್ಲಕ್ಕೂ ಶಿಕ್ಷಣವು ಒಂದು ಮಂತ್ರವಾಗಬೇಕು.[೧೬]

ಒಟ್ಟಾರೆಯಾಗಿ ಹೇಳುವುದಾದರೆ ಕಾಡುಗೊಲ್ಲರು ಬುಡಕಟ್ಟು ಸಮುದಾಯದವರಾಗಿರುವುದರಿಂದ ಕಾಡುಗೊಲ್ಲರಲ್ಲಿ ಇಂತಹ ಅನೇಕ ಆಚರಣೆಗಳಿವೆ. ಕೆಲವು ಆಚರಣೆಗಳನ್ನು ವಿರೋಧಿಸುವ, ವಿಮರ್ಶಿಸುವ ಅಧಿಕಾರ ಎಲ್ಲರಿಗೂ ಇರುವುದಿಲ್ಲ. ಸಂಪ್ರದಾಯವನ್ನು ವಿರೋಧಿಸುವವರು ಹಟ್ಟಿಯಿಂದ ಹೊರಗಿರಬಹುದು. ಈ ಸಂಪ್ರದಾಯದಲ್ಲಿ ವೈಚಾರಿಕತೆ ಇಲ್ಲದಿರುವುದಿಲ್ಲ. ನಮ್ಮ ಪೂರ್ವಜರು ಯಾವುದೇ ಒಂದು ಸಂಪ್ರದಾಯವನ್ನು ಕುರುಹಾಗಿ ಸೃಷ್ಟಿಸಿಕೊಂಡಿರುವುದಿಲ್ಲ. ಕಾಡುಗೊಲ್ಲರ ಮನಸ್ಥಿತಿಯನ್ನು ಅರ್ಥ ಮಾಡಿಕೊಳ್ಳದ ವಿದ್ವಾಂಸರು ಕಾಡುಗೊಲ್ಲ ಪುರುಷರು ಮಹಿಳೆಯರನ್ನು ಶೋಷಣೆ ಮಾಡುತ್ತಿದ್ದಾರೆಂದು ಬರೆದಿದ್ದಾರೆ. ಕಾಡುಗೊಲ್ಲ ಪುರುಷರಿಗೂ ಅವರಿಗೂ ಮಾನವೀಯತೆ ಇದೆ. ಇವರು ನಿಸರ್ಗಪ್ರಿಯರಾದ ಕಾರಣದಿಂದ ನಿಸರ್ಗದ ಮೊರೆ ಹೋಗಿದ್ದಾರೆ. ೯ ದಿನಗಳ ಕಾಲ ಋತುಮತಿಯಾದ ಹೆಣ್ಣುಮಕ್ಕಳನ್ನು ಹೊರಗಿಡಲು ಅವರ ಆರೋಗ್ಯದ ದೃಷ್ಟಿಯಿಂದ ಒಳ್ಳೆಯ ಅಭಿಪ್ರಾಯವಾಗಿದೆ. ಕೆಲವರು ಮನೆಯಲ್ಲಿಯೇ ಇಟ್ಟುಕೊಂಡು ಅವರನ್ನು ಆರಾಮಾಗಿ ಇಡಬಹುದೆಂದು ವಾದಿಸುತ್ತಾರೆ.

ಸಾಮಾನ್ಯವಾಗಿ ಕಾಡುಗೊಲ್ಲರು ಹೆಸರಿಡುವಾಗ ತಮ್ಮ ಮನೆ ದೇವರುಗಳ ಅಥವಾ ಪೂರ್ವಿಕರ ಅಥವಾ ಸಾಂಸ್ಕೃತಿಕ ವೀರರ ಹೆಸರುಗಳನ್ನಿಡುವುದು ವಾಡಿಕೆ. ಈ ಹೆಸರನ್ನು ಇಡುವಾಗ ದೊಡ್ಡ ಸಮಾರಂಭವನ್ನು ಏರ್ಪಡಿಸದೆ ಸರಳವಾಗಿ ಹೆಸರಿಡುವ ಕಾರ್ಯವನ್ನು ಮುಗಿಸಿ ಬಿಡುತ್ತಾರೆ.[೧೭]

**ಪೂಜಾರಿಯ ಪಟ್ಟ:** ಕಾಡುಗೊಲ್ಲರು ತಮ್ಮ ದೇವರ ಪೂಜಾರಿಯನ್ನು ದೇವರ ಪ್ರತಿರೂಪ ಎಂದು ಭಾವಿಸುತ್ತಾರೆ. ಕಾಡುಗೊಲ್ಲರಲ್ಲಿ ಪೂಜಾರಿಗೆ ಎಲ್ಲಿಲ್ಲದ ಗೌರವವಿದೆ. ಪೂಜಾರಿಗೆ ವಯಸ್ಸಾದ ನಂತರ ಅಥವಾ ಅಕಾಲಿಕ ಮರಣಕ್ಕೆ ತುತ್ತಾದರೆ ಅಂತಹ ಸಮಯದಲ್ಲಿ ಹೊಸ ಪೂಜಾರಿಯ ಅವಶ್ಯಕತೆ ಇರುತ್ತದೆ. ಅಂತಹ ಸಮಯದಲ್ಲಿ ಪೂಜಾರಿಯ ಮಕ್ಕಳು ಇಲ್ಲವೇ ಮೊಮ್ಮಕ್ಕಳನ್ನು ಪೂಜಾರಿಯನ್ನಾಗಿ ಮಾಡುತ್ತಾರೆ. ಒಂದು ವೇಳೆ ಪೂಜಾರಿಗೆ ಮಕ್ಕಳಾಗದಿದ್ದಲ್ಲಿ ಪೂಜಾರಿಯ ವಂಶದಲ್ಲಿಯೇ ದೇವರು ಯಾರನ್ನು ಇಷ್ಟಪಡುತ್ತದೆಯೋ ಅವರನ್ನು ಆಯ್ಕೆ ಮಾಡುತ್ತಾರೆ. ಮದುವೆಯಾದವರನ್ನು ಪೂಜಾರಿಯಾಗಿ ಮಾಡುವುದಿಲ್ಲ. ಪೂಜಾರಿಯಾಗುವವರು ಅವಿವಾಹಿತರಾಗಿರಬೇಕು ಮತ್ತು ತನ್ನ ಸಮುದಾಯದವರಲ್ಲದವರ ಮನೆಯಲ್ಲಿ ಊಟ ಮಾಡುವಂತಿಲ್ಲ. ಅದರಲ್ಲೂ ಕಂಚಿನ ತಟ್ಟೆಯಲ್ಲೇ ಊಟ ಮಾಡಬೇಕು. ಹೋಟೆಲ್‌ಗಳಲ್ಲಿ ತಿನ್ನುವಂತಿಲ್ಲ.

ಹಿಂದೆ ಪೂಜಾರಿಗಳು ತುಂಬಾ ಕಟ್ಟುನಿಟ್ಟಿನ ಜೀವನವಿಧಾನವನ್ನು ಅನುಸರಿಸುತ್ತಿದ್ದರು. ಒರತೆಯ ನೀರನ್ನೇ ಕುಡಿಯುತ್ತಿದ್ದರು. ತಮ್ಮ ಅಡುಗೆಯನ್ನು ಸ್ವತಃ ತಾವೇ ಮಾಡಿಕೊಳ್ಳುತ್ತಿದ್ದರು. ವಾಹನಗಳಲ್ಲಿ ಪ್ರಯಾಣ ಮಾಡುತ್ತಿರಲಿಲ್ಲ. ಆದರೆ ಇತ್ತೀಚೆಗೆ ಕಾಡುಗೊಲ್ಲರ ಪೂಜಾರಿಗಳ ಬದುಕು ಬದಲಾಗಿದೆ. ಅವರು ಸಹ ಐಶಾರಾಮಿ ಜೀವನವನ್ನು ಸಾಗಿಸುತ್ತಿದ್ದಾರೆ. ತಮ್ಮ ಎಲ್ಲಾ ನಿಷಿದ್ಧಗಳನ್ನು ಮೀರುತ್ತಿದ್ದಾರೆ. ಹೊಸದಾಗಿ ಪೂಜಾರಿಯನ್ನು ಮಾಡುವ ಸಮಯದಲ್ಲಿ ಕಾಡುಗೊಲ್ಲರಿಗೆ ಆರ್ಥಿಕವಾಗಿ ತುಂಬಾ ಖರ್ಚಾಗುತ್ತದೆ. ಆಗ ತಮ್ಮ ಮನೆದೇವರನ್ನು ಹೊಳೆಗೆ(ನದಿಗೆ) ಕರೆದುಕೊಂಡು ಹೋಗಿ ಗಂಗಾ ಸ್ನಾನ ಮಾಡಿಸಿಕೊಂಡು ಬರುತ್ತಾರೆ. ಆ ಸಮಯದಲ್ಲಿ ಗೌಡನಿಗೆ, ವಯಸ್ಸಾದ ಪೂಜಾರಿ ಇದ್ದರೆ ಅವರಿಗೆ ಹೊಸಬಟ್ಟೆ ತರುತ್ತಾರೆ. ಹುರಿಮೆಯವರಿಗೆ ಹಾಗೂ ಅಗಸರಿಗೆ ಹೊಸಬಟ್ಟೆಯನ್ನು ತರುತ್ತಾರೆ. ಕಾಡುಗೊಲ್ಲ ಪೂಜಾರಿಗೆ ಪಟ್ಟ ಆಗುವ ಸಂದರ್ಭದಲ್ಲಿ ಗೋಸಿಕೆರೆಯ ಅಯ್ನೋರು ಪ್ರಮುಖ ಪಾತ್ರ ವಹಿಸುತ್ತಾರೆ. ಅವರಿಲ್ಲದಿದ್ದರೆ ಪೂಜಾರಿಯನ್ನು ಮಾಡಲು ಆಗುವುದಿಲ್ಲ. ಮೊದಲು ಚಾಂಡೀಮರವನ್ನು ಎತ್ತಿ ನಿಲ್ಲಿಸುತ್ತಾರೆ, ಹಿರೆ ಕಂಬಿಗೂ ಜನ್ನಿಗೆ ಹಸುವಿನ ಹಾಲನ್ನು ತುಂಬುತ್ತಾರೆ. ಆ ಹಾಲನ್ನು ಅಡ್ಡೆಗಳ ಮೂಲಕ ಕಿರಿಯ ಪೂಜಾರಿಯ ಹೆಗಲ ಮೇಲೆ ಕೂರಿಸಿಕೊಂಡು ಹೋಗುತ್ತಾರೆ. ಅಲ್ಲಿ ಯಾವುದಾದರೂ ಹುಣಸೆ ಗಿಡವನ್ನು ಹುಡುಕಿ ಅದಕ್ಕೆ ಹಾಲು ಎರೆಯುತ್ತಾರೆ. ಹಾಗಾಗಿ ಕಾಡುಗೊಲ್ಲರಿಗೆ ಹುಣಸೆ ಮರ ಪವಿತ್ರವಾದುದು. ಆ ಮರದ ಕಟ್ಟಿಗೆಯನ್ನು ಒಲೆಯಲ್ಲಿ ಇಡುವುದಿಲ್ಲ. ಈ ಶಾಸ್ತ್ರವನ್ನು ಹುಣಸೆಗೆ ಹಾಲೊಯ್ಯುವುದು ಎಂದು ಕರೆಯುತ್ತಾರೆ.

**ಸಾವು ಸಂಬಂಧಿ ಆಚರಣೆಗಳು:** ಕಾಡುಗೊಲ್ಲರಲ್ಲಿ ಸಾವಿನ ಸೂತಕ ತುಂಬಾ ವಿಶಿಷ್ಟವಾದುದು. ತಮ್ಮ ಹಟ್ಟಿಯ ಒಳಗಡೆ ಯಾರನ್ನೂ ಸಾಯಲು ಬಿಡುವುದಿಲ್ಲ. ಏಕೆಂದರೆ ಅವರ ಪ್ರಕಾರ ಸಾವಿನ ಸೂತಕ ತುಂಬಾ ಕೆಟ್ಟದ್ದು. ಹಾಗಾಗಿ ಹಟ್ಟಿಯ ಒಳಗಡೆ ಸಾಯಲು ಬಿಡದೆ ಹೊರಗಡೆ ತರುತ್ತಾರೆ. ಸಾವು ಸಮೀಪಿಸುತ್ತಿದ್ದಂತೆ ಕಂಬಳಿ ಕೊರೆಯಲ್ಲಿ ಹಾಕಿಕೊಂಡು ಹಟ್ಟಿಯ ಹೊರಗಡೆ ಹಿಡಿದುಕೊಂಡು ಬರುತ್ತಾರೆ. ಒಂದು ವೇಳೆ ಹಟ್ಟಿಯ ಒಳಗಡೆ ಸತ್ತರೆ ಇಡೀ ಹಟ್ಟಿಯನ್ನು ಶುದ್ಧೀಕರಿಸಬೇಕಾಗುತ್ತದೆ.

ಅದು ಯಾವ ರೀತಿಯೆಂದರೆ ಹಟ್ಟಿಯಲ್ಲಿರುವ ಎಲ್ಲಾ ಜನರು ತಮ್ಮ ಮನೆಗಳನ್ನು ಬಳಿದುಕೊಂಡು ಅಂದರೆ ಮನೆಯಲ್ಲಿ ತಾವು ಬಳಸುವ ಎಲ್ಲಾ ವಸ್ತುಗಳನ್ನು ಶುದ್ಧ ನೀರಿನಿಂದ ತೊಳೆದು ಹಟ್ಟಿಯ ದೇವರನ್ನು ಹಳ್ಳಕ್ಕೆ ತೆಗೆದುಕೊಂಡು ಹೋಗಿ ಗಂಗಾ ದೇವತೆ ಮಾಡಿಕೊಂಡು ಹಟ್ಟಿಯ ಒಳಗಡೆ ಬರುವಾಗ ಮೊದಲು ಮಡಿವಾಳರು ಗೋಮೂತ್ರವನ್ನು ಪ್ರತಿಯೊಂದು ಮನೆಯ ಒಳಗೆ ಎರಚುತ್ತಾರೆ. ಅನಂತರ ದೇವರ ತೀರ್ಥವನ್ನು ಮನೆಯ ಒಳಗಡೆ ಹಾಕುವುದರ ಮೂಲಕ ಇಡೀ ಹಟ್ಟಿಯನ್ನು ಶುದ್ಧೀಕರಿಸುತ್ತಾರೆ. ಅದಕ್ಕಾಗಿಯೇ ಹಟ್ಟಿಯ ಒಳಗಡೆ ಸಾಯಲು ಬಿಡುವುದಿಲ್ಲ. ಅದಕ್ಕಾಗಿಯೆ ಕೆಲವು ಗೊಲ್ಲರು ವಯಸ್ಸಾದ ಮುದುಕರನ್ನು ಹಟ್ಟಿಯ ಹೊರಗೆ ಸಣ್ಣದೊಂದು ಗುಬ್ಬವನ್ನು ನಿರ್ಮಾಣ ಮಾಡಿ ಅಲ್ಲಿಯೇ ಅವರಿಗೆ ಊಟವನ್ನು ಕೊಡುತ್ತಾರೆ. ಅವರು ಓಡಾಡುವ ಶಕ್ತಿ ಇದ್ದರೆ ಹಟ್ಟಿಯ ಒಳಗಡೆ ಬರಬಹುದು ನಂತರ ಹೋಗಿ ಗುಡಿಸಲಲ್ಲೆ ಮಲಗಬೇಕು.

**ಸುದ್ದಿ ಪ್ರಸಾರದ ವಿಧಾನ:** ಕಾಡುಗೊಲ್ಲರು ಹಟ್ಟಿಯ ಒಳಗಡೆ ಸಾಯಲು ಬಿಡದೆ ಹಟ್ಟಿಯ ಹೊರಗಡೆ ಹಿಡಿದು ತರುತ್ತಾರೆ. ಸಾಯುವುದಕ್ಕೆ ಮುಂಚಿತವಾಗಿ ಅವರ ವಂಶಸ್ಥರು ಯಾರಾದರೂ ಅವರ ಬಾಯಿಗೆ ನೀರು ಬಿಡುತ್ತಾರೆ. ನಂತರ ಜೀವ ಹೋದನಂತರ ಸಾವಿನ ಸುದ್ದಿಯನ್ನು ತಮ್ಮ ಸಂಬಂಧಿಕರಿಗೆ ಮುಟ್ಟಿಸಲು ಮುಖ್ಯವಾಗಿ ಮಾದಿಗರನ್ನು ಬಳಸಿಕೊಳ್ಳುತ್ತಾರೆ. ಆದರೆ ಆಧುನಿಕ ಅಥವಾ ಇತ್ತೀಚಿನ ದಿನಗಳಲ್ಲಿ ಈ ಪರಿಸ್ಥಿತಿ ಸುಧಾರಿಸಿದೆ. ತಂತ್ರಜ್ಞಾನ ಮುಂದುವರಿದಿರುವುದರಿಂದ ದೂರವಾಣಿಗಳ ಮೂಲಕ ಸುದ್ದಿ ಮುಟ್ಟಿಸುತ್ತಾರೆ. ದೂರವಾಣಿಗಳು ತಮ್ಮ ಕೈಗೆ ಸಿಗದ ಸಮಯದಲ್ಲಿ ತಮ್ಮ ಆಯಗಾರರನ್ನು ಬಳಕೆ ಮಾಡಿಕೊಳ್ಳುತ್ತಿದ್ದರು. ಇವರು ಸಮೂಹ ಮಾಧ್ಯಮದ ರೂಪದಲ್ಲಿ ತಮ್ಮ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ಕಾಡುಗೊಲ್ಲರು ಹನ್ನೆರಡು ಜನ ಕೈವಾರದವರನ್ನು ಬಳಕೆ ಮಾಡಿಕೊಳ್ಳುತ್ತಿದ್ದರು. ಅವರಲ್ಲಿ ಮಾದಿಗರು ಒಬ್ಬರು. ಮಾದಿಗರ ಹಟ್ಟಿಯ ಒಳಗಡೆ ಕಾಡುಗೊಲ್ಲರು ಹೋಗದಿದ್ದರೂ, ಹಟ್ಟಿಯ ಹೊರಗಡೆ ನಿಂತು ತಮ್ಮ ಆಯಗಾರರನ್ನು ಕರೆದುಕೊಂಡು ಅವನಿಗೆ ವಿಷಯವನ್ನು ತಿಳಿಸುತ್ತಾರೆ. ಬಸ್ಸು ಸಂಚಾರ ಇಲ್ಲದ ಸಮಯದಲ್ಲಿ ಮಾದಿಗರು ನಡೆದುಕೊಂಡೇ ಹೋಗಿ ವಿಷಯವನ್ನು ಮುಟ್ಟಿಸಿ ಬರುತ್ತಿದ್ದರು. ಈಗ ಸಾರಿಗೆ ಸೌಲಭ್ಯ ಸುಧಾರಿಸಿದ ಕಾರಣದಿಂದ ಬಸ್ಸಿನಲ್ಲಿ ಹೋಗಿ ಅವರು ಹೇಳಿರುವ ಊರುಗಳಿಗೆ ಹೋಗಿ ಸುದ್ದಿ ಮುಟ್ಟಿಸಿ ಬರುತ್ತಾರೆ. ಇವರು ಇಂದು ಬಸ್ಸು ಬಳಸುತ್ತಿರುವುದರಿಂದ ಅವರ ಖರ್ಚಿಗಾಗಿ ಹಣವನ್ನು ಸಹ ಕೊಡುತ್ತಾರೆ. ಮಾದಿಗರು ಯಾರಿಗೂ ತೊಂದರೆಯಾಗದ ರೀತಿಯಲ್ಲಿ ವಿಷಯವನ್ನು ಮುಟ್ಟಿಸಿ ಬರುತ್ತಾರೆ.

**ಮಡಿವಾಳರ ಕೆಲಸ:** ಸಾವು ಸಂಭವಿಸಿದ ನಂತರ ಯಾರಾದರೊಬ್ಬರು ಮಡಿವಾಳರ ಮನೆಗೆ ಹೋಗಿ ಅವರಿಗೆ ಸಾವಿನ ಸುದ್ದಿಯನ್ನು ಮುಟ್ಟಿಸಿ ಬರುತ್ತಾರೆ. ಆನಂತರ ಅವರು ಬಂದು ಗೋಮೂತ್ರವನ್ನು ಹಾಕುವ ಮೂಲಕ ಶವಸಂಸ್ಕಾರವಾಗುವ ತನಕ ಅವರ ಬಳಿಯಲ್ಲಿಯೇ ಇದ್ದು ಶವಸಂಸ್ಕಾರವಾದ ನಂತರ ಶವಸಂಸ್ಕಾರ ಮಾಡಿ ಬಂದವರಿಗೆ ಗೋಮೂತ್ರ ಹಾಕುವ ಮೂಲಕ ಹಟ್ಟಿಯ ಒಳಗಡೆ ಸೇರಿಸಿಕೊಳ್ಳುತ್ತಾರೆ.

**ಚಟ್ಟ ಕಟ್ಟುವುದು:** ಚಟ್ಟವನ್ನು ಆಯತಾಕಾರದಲ್ಲಿ ಕಟ್ಟುತ್ತಾರೆ. ಪೂಜಾರಿಗಳು ಸತ್ತಾಗ ಪಲ್ಲಕ್ಕಿಯಂತೆ ಚಟ್ಟವನ್ನು ಕಟ್ಟುತ್ತಾರೆ. ಚಟ್ಟ ತಯಾರಾದ ನಂತರ ಸತ್ತ ವ್ಯಕ್ತಿಯನ್ನು ಚಟ್ಟದ ಮೇಲೆ ಮಲಗಿಸಿ ಅದರ ಮೇಲೆ ಹೊಸ ಬಿಳಿ ಬಟ್ಟೆ ಹಾಕಿ ಶವ ಜರಿಗಾಡದಂತೆ ಬಿಗಿಯುತ್ತಾರೆ. ಶವವನ್ನು ನಾಲ್ಕು ಜನರು ಮಾತ್ರ ಹೊತ್ತುಕೊಂಡು ಹೋಗುತ್ತಾರೆ. ಶವವನ್ನು ಹೊತ್ತುಕೊಂಡು ಹೋಗಲು ತನ್ನ ಮಕ್ಕಳಿಗೆ ಮತ್ತು ಅಳಿಯಂದಿರಿಗೂ ಅಧಿಕಾರವಿರುತ್ತದೆ. ಕಾಡುಗೊಲ್ಲರಲ್ಲಿ ಹೆಣ್ಣುಮಕ್ಕಳು ಸಹ ಶವವನ್ನು ಹೊರುತ್ತಿರುವುದನ್ನು ಇತ್ತೀಚಿನ ದಿನಗಳಲ್ಲಿ ಕಾಣಬಹುದು. ಹಾಗೆಯೇ ಪೂಜಾರಿಯನ್ನು ದೇವರ ಪ್ರತಿರೂಪ ಎಂದು ಭಾವಿಸುವುದರಿಂದ ಪೂಜಾರಿಯು ಸತ್ತರೆ ಅವರ ಶವವನ್ನು ಪಲ್ಲಕ್ಕಿಯಂತೆ ಕಟ್ಟಿ ಮಲಗಿಸುವ ಬದಲಾಗಿ ಕೂರಿಸಿಕೊಂಡು ಮೆರವಣಿಗೆಯ ಮೂಲಕ ಹೊಯ್ಯುತ್ತಾರೆ. ಕಾಡುಗೊಲ್ಲರು ಶವ ಸಾಗಿಸುವಾಗ ಯಾವುದೇ ಕಾರಣಕ್ಕೂ ತಪ್ಪಡೆ ಬಳಸುವುದಿಲ್ಲ.

**ಶವದ ಗುಂಡಿಯನ್ನು ತೆಗೆಯುವುದು:** ಕಾಡುಗೊಲ್ಲರಲ್ಲಿ ಶವದ ಗುಂಡಿಯನ್ನು ಯಾರು ತೆಗೆಯುತ್ತಾರೆ ಎಂಬ ಪ್ರಶ್ನೆ ಬಂದಾಗ, ಕಾಡುಗೊಲ್ಲರು ಹೆಚ್ಚಾಗಿ ಶವಸಂಸ್ಕಾರವನ್ನು ತಮ್ಮ ಹೊಲಗಳಲ್ಲಿಯೇ ಮಾಡುವುದರಿಂದ ಶವದ ಗುಂಡಿಯನ್ನು ತೆಗೆಯಲು ಕಾಡುಗೊಲ್ಲರ ಯುವಕರೇ ತೆಗೆಯುತ್ತಾರೆ. ಗುಂಡಿಯನ್ನು ಆರು–ಮೂರು ಅಡಿ ವಿಸ್ತಾರದಲ್ಲಿಯೆ ತೆಗೆಯುತ್ತಾರೆ. ಉತ್ತರ ದಕ್ಷಿಣ ಅಭಿಮುಖವಾಗಿ ತೆಗೆಯುತ್ತಾರೆ. ಜಾಸ್ತಿ ಪಾಪ ಮಾಡಿದರೆ ಗುಂಡಿ ತೆಗೆಯುವವರು ಹೆಚ್ಚು ಕಷ್ಟ ಪಡಬೇಕಾಗುತ್ತದೆ. ಒಳ್ಳೆಯ ಕೆಲಸ ಮಾಡಿದರೆ ಬಹು ಬೇಗವಾಗಿ ಗುಂಡಿ ಇಳಿಯುತ್ತದೆ ಎಂಬ ವಾಡಿಕೆ ಇದೆ. ಕಾಡುಗೊಲ್ಲರು ದ್ರಾವಿಡ ಪರಂಪರೆಯವರು ಹಾಗೂ ಬುಡಕಟ್ಟು ಸಮುದಾಯದವರಾಗಿರುವ ಕಾರಣ ಅವರಲ್ಲಿ ಶವವನ್ನು ಹೂಳುವ ಪ್ರಕ್ರಿಯೆ ಇನ್ನೂ ಜಾರಿಯಲ್ಲಿದೆ. ಆದರೆ ಇತ್ತೀಚೆಗೆ ಕಾಡುಗೊಲ್ಲರ ಮೇಲೆ ವೈಷ್ಣವರ ಪ್ರಭಾವವಾಗಿರುವುದರಿಂದ ಕಾಡುಗೊಲ್ಲರಲ್ಲಿಯೂ ಶವ ಸುಡುವ ಪದ್ಧತಿಯು ಜಾರಿಯಲ್ಲಿದೆ. ಅದು ಆತ್ಮಹತ್ಯೆ ಮಾಡಿಕೊಂಡವರನ್ನು ಹಾಗೂ ಅಪಘಾತದಲ್ಲಿ ಮರಣ ಹೊಂದಿದವರನ್ನು ಮತ್ತು ಗರ್ಭಿಣಿ ಸ್ತ್ರೀ ಸತ್ತರೆ ಮಾತ್ರ ಹೂಳುವ ಬದಲಾಗಿ ಸುಡುತ್ತಾರೆ. ಏಕೆಂದರೆ ಆಯಸ್ಸು ಮುಗಿದು ಸತ್ತರೆ ದೈವರಾಗುತ್ತಾರೆ. ಆಯಸ್ಸು ಮುಗಿಯದೆ ಸತ್ತರೆ ದೆವ್ವಗಳಾಗುತ್ತಾರೆ ಎಂಬ ಭಯದಿಂದ ಆತ್ಮಹತ್ಯೆ ಮಾಡಿಕೊಂಡವರನ್ನು ಸುಡುತ್ತಾರೆ.

**ಶವಸಂಸ್ಕಾರ:** ಶವವನ್ನು ಪೂಜೆ ಮಾಡಿ ತಮ್ಮ ಹೊಲದಲ್ಲಿಯೇ ತಯಾರುಮಾಡಿರುವ ಗುಂಡಿಯ ಬಳಿ ನಾಲ್ಕು ಜನ ಸೇರಿ ಹೊತ್ತುಕೊಂಡು ಹೋಗುತ್ತಾರೆ. ಆ ಸಮಯಕ್ಕಾಗಲೆ ಅಲ್ಲಿಗೆ ಬರಬೇಕಾಗಿರುವ ಎಲ್ಲಾ ಬಂಧು ಬಾಂಧವರು ಬಂದಿರುತ್ತಾರೆ. ಇನ್ನು ಯಾರಾದರೂ ಬರುವವರು ಇದ್ದರೆ ಸ್ವಲ್ಪ ಹೊತ್ತು ಕಾಯುತ್ತಾರೆ. ನಂತರ ಶವಸಂಸ್ಕಾರ ಮಾಡುತ್ತಾರೆ. ಇತರೆ ಸಮುದಾಯದಲ್ಲಿರುವಂತೆ ಕಾಡುಗೊಲ್ಲರಲ್ಲಿ ಶವಸಂಸ್ಕಾರದಲ್ಲಿ ಹೆಣ್ಣುಮಕ್ಕಳು ಸಹ ಸ್ಮಶಾನಕ್ಕೆ ಹೋಗಿ ಶವಸಂಸ್ಕಾರ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಾರೆ. ಇಲ್ಲಿ ಮತ್ತೊಮ್ಮೆ ಶವಕ್ಕೆ ಶಾಸ್ತ್ರೋಕ್ತವಾಗಿ ಪೂಜೆಯನ್ನು ಮಾಡಿ ಮುಗಿಸುತ್ತಾರೆ. ನಂತರ ಶವವನ್ನು ಗುಂಡಿಯ ಸುತ್ತಲೂ ಮೂರು ಬಾರಿ ತಿರುಗಿಸುತ್ತಾರೆ. ಆನಂತರ ಶವದ

ಮೈಮೇಲಿರುವ ಎಲ್ಲಾ ಬಟ್ಟೆಯನ್ನು ತೆಗೆಯುತ್ತಾರೆ. ಸತ್ತ ವ್ಯಕ್ತಿ ಬಳಸುತ್ತಿದ್ದ ಎಲ್ಲಾ ಬಟ್ಟೆಗಳನ್ನು ಶವದ ಗುಂಡಿಯ ಬಳಿ ಹಾಕುತ್ತಾರೆ. ಮೈಮೇಲಿನ ಉಡುದಾರವನ್ನು ಸಹ ತೆಗೆಯುತ್ತಾರೆ. ಒಡವೆಗಳಿದ್ದರೆ ಸಂಬಂಧಿಕರು ತೆಗೆದುಕೊಳ್ಳುತ್ತಾರೆ. ನಂತರ ಶವವನ್ನು ಗುಂಡಿಯಲ್ಲಿಟ್ಟು ಸೇರಿರುವ ಎಲ್ಲಾ ಸಂಬಂಧಿಕರು ಮೊದಲು ಗಿಡದ ಸೊಪ್ಪನ್ನು ಮುರಿದುಕೊಂಡು ಬಂದು ಶವದ ಮೇಲೆ ಹಾಕಿ ನಂತರ ಒಂದು ಹಿಡಿ ಮಣ್ಣನ್ನು ಹಾಕುತ್ತಾರೆ. ಮೊದಲು ಕಲೆಯುವವರು ಮಣ್ಣನ್ನು ಹಾಕಿದ ನಂತರ ಕಲೆಯದವರು ಮಣ್ಣು ಹಾಕುತ್ತಾರೆ. ಹಿಂದೆ ಕಲೆಯದವರಿಗೆ ಮಣ್ಣು ಹಾಕುವ ಅವಕಾಶವಿರಲಿಲ್ಲ. ಹಟ್ಟಿಯಿಂದ ದೂರವಿರುವ ಕಾಡಿನಲ್ಲಿ ಮೂರು ನಾಲ್ಕು ಜನ ಮೊದಲೇ ಹೋಗಿ ಒಂದು ಕಡೆ ಗುಂಡಿಯನ್ನು ತೆಗೆದಿರುತ್ತಾರೆ. ಶವವನ್ನು ಹೊತ್ತು ತಂದವರು ಗುಂಡಿಯ ಸುತ್ತಮೂರು ಸಲ ಶವವನ್ನು ಸುತ್ತಿಸಿ ಗುಂಡಿಯ ಪಕ್ಕದಲ್ಲಿ ಇಡುತ್ತಾರೆ.[೨೭]

ಕಾಡುಗೊಲ್ಲರಲ್ಲಿ ಅನೇಕ ಬೆಡಗು ಹಾಗೂ ಉಪಬೆಡಗುಗಳಿವೆ. ಅವುಗಳಲ್ಲಿ ಅನೇಕ ಭಿನ್ನತೆಗಳಿವೆ. ಉದಾ: ಕರಡಿಗೊಲ್ಲರಿಗೂ ಮಾರನಗೊಲ್ಲರಿಗೂ ಕಲೆಯುವುದಿಲ್ಲ ಎಂದು ಮಾಹಿತಿದಾರರು ಹೇಳುತ್ತಾರೆ. ಹಾಗೆಯೇ ಸನ್ನೆರಗೊಲ್ಲರಿಗೂ ಸೋಮನಗೊಲ್ಲರಿಗೂ ಆಗಿಬರುವುದಿಲ್ಲ. ಯಾವುದೇ ಶುಭ ಹಾಗೂ ಅಶುಭ ಸಮಾರಂಭಗಳಲ್ಲಿಯೂ ಭಾಗವಹಿಸುವುದಿಲ್ಲ. ಹಾಗಾಗಿ ಕಾಡುಗೊಲ್ಲರು ಶವಸಂಸ್ಕಾರ ಮಾಡುವಂತಹ ಸಮಯದಲ್ಲಿ ಇವುಗಳನ್ನು ತುಂಬಾ ಕಟ್ಟುನಿಟ್ಟಾಗಿ ಆಚರಣೆ ಮಾಡುತ್ತಾರೆ. ಕರಡಿಗೊಲ್ಲರು ಮತ್ತು ಮಾರನಗೊಲ್ಲರು ಒಂದೇ ಅಣ್ಣತಮ್ಮಂದಿರಾದರೂ ಅವರು ಕೆಲವು ಸಂದರ್ಭಗಳಲ್ಲಿ ದೂರವಿರಬೇಕಾಗುತ್ತದೆ. ಶವಸಂಸ್ಕಾರದ ಸಂದರ್ಭದಲ್ಲಿಯೂ ದೂರವಿರಬೇಕಾಗುತ್ತದೆ. ಇದಕ್ಕೆ ಕಾರಣ ಯಾವುದೋ ಒಂದು ಸಣ್ಣ ಜಗಳ. ಒಂದು ಕುಟುಂಬದಲ್ಲಿರುವ ಅಣ್ಣತಮ್ಮಂದಿರು ತುಂಬಾ ಅನ್ಯೋನ್ಯವಾಗಿರುತ್ತಾರೆ. ಆದರೆ ಮನೆಯ ಜವಾಬ್ದಾರಿಯನ್ನು ಹೊತ್ತಿರುವ ಹಿರಿಯವನು ಶೆಟ್ಟಿಯ ಹತ್ತಿರ ಸಾಲ ಮಾಡಿರುತ್ತಾನೆ. ಎಷ್ಟು ದಿನವಾದರೂ ವಾಪಸ್ಸು ಕೊಟ್ಟಿರುವುದಿಲ್ಲ. ಒಂದು ದಿನ ಶೆಟ್ಟಿಯು ಸಾಲ ವಸೂಲಿಗೆಂದು ಬಂದು ಮನೆಯಲ್ಲಿರುವ ಎಲ್ಲಾ ವಸ್ತುಗಳನ್ನು ಸಾಲಕ್ಕೆ ಜಮಾ ಮಾಡಿಕೊಳ್ಳುತ್ತಾನೆ. ಆದರೂ ಸಾಲಕ್ಕೆ ಸರಿಹೊಂದುವುದಿಲ್ಲ. ಕೊನೆಗೆ ತಮ್ಮ ಹೆಂಡತಿಯರ ಕೊರಳಲ್ಲಿರುವ ತಾಳಿ ಬಿಟ್ಟರೆ ಬೇರೆ ಏನೂ ಇರುವುದಿಲ್ಲ. ಆಗ ಹಿರಿಯನು ತನ್ನ ಹೆಂಡತಿಯ ಕೊರಳಲ್ಲಿರುವ ತಾಳಿಯನ್ನು ತೂಕಕ್ಕೆ ಹಾಕುತ್ತಾನೆ. ಇದರಿಂದಾಗಿ ಅಣ್ಣನ ಸಾಲ ತೀರುತ್ತದೆ. ತಮ್ಮನಿಗೂ ಅದೇ ರೀತಿ ಹೇಳಿದಾಗ, ತಮ್ಮ ಅಣ್ಣ ಮಾಡಿರುವ ಸಾಲಕ್ಕೆ ನನ್ನ ಹೆಂಡತಿಯ ಮಾಂಗಲ್ಯ ಏಕೆ ಕೊಡಬೇಕೆಂದು ಕೊಡದಂತೆ ಕಣ್ಮರೆಯಾಗುತ್ತಾನೆ. ಇದರಿಂದ ಕೋಪಗೊಂಡ ಅಣ್ಣ, ತಮ್ಮ ಮಾತಿಗೆ ತಪ್ಪಿದ ಕಾರಣದಿಂದ ಅವನನ್ನು ಹಟ್ಟಿಯಿಂದ ಬಹಿಷ್ಕಾರ ಹಾಕಿದ್ದಲ್ಲದೆ ಮುಂದೆ ಇಬ್ಬರ ಮಧ್ಯೆ ನಡೆಯಬಹುದಾದ, ಮದುವೆ, ದೇವರು ಹಾಗೂ ಯಾವುದೇ ಅಶುಭ ಆಚರಣೆಗಳಲ್ಲಿ ಭಾಗವಹಿಸುವಂತಿಲ್ಲ ಎಂದು ಮಾತು ತೆಗೆದುಕೊಳ್ಳುತ್ತಾನೆ. ಅಂದಿನಿಂದ ಇಂದಿನವರೆಗೂ ಕರಡಿಗೊಲ್ಲರು ಮತ್ತು ಮಾರನಗೊಲ್ಲರಾಗಿ ಎರಡು ಬೆಡಗುಗಳಾಗಿ ಪ್ರತ್ಯೇಕ ದೇವರನ್ನು ಮಾಡಿಕೊಂಡು ಆಚರಣೆ ಮಾಡುವುದನ್ನು

ಗಮನಿಸಬಹುದಾಗಿದೆ. ಇದಕ್ಕೆ ಸಾಕ್ಷಿಯಾಗಿ ಹಾಲು ಮೊಸರಿನ ಮೇಲೆ ಪ್ರಮಾಣ ಮಾಡಿರುವುದು ತಿಳಿದುಬಂದಿದೆ. ಅಂದರೆ ಮಾರನಗೊಲ್ಲರ ಮೊಸರನ್ನು ಕರಡಿಗೊಲ್ಲರ ಹಾಲಿನೊಂದಿಗೆ ಸೇರಿಸಿದಾಗ ಅದು ಮೊಸರಾಗುವುದಿಲ್ಲ. ಇದರಿಂದಾಗಿ ಹಾಲು ಮೊಸರೇ ಕಲಿಯುವುದಿಲ್ಲ ಎಂದ ಮೇಲೆ ಅಣ್ಣ ತಮ್ಮಂದಿರು ಜೊತೆಯಾಗಿರುವುದು ಒಳ್ಳೆಯದಲ್ಲ ಎಂದು ತಿಳಿದು ಅಂದಿನಿಂದ ಇಂದಿನವರೆಗೂ ಯಾವುದೇ ವಿಧಿ, ಸಂಪ್ರದಾಯ ಹಾಗೂ ಸಂಸ್ಕಾರಗಳಲ್ಲಿಯೂ ಭಾಗವಹಿಸುವುದಿಲ್ಲ. ಇತ್ತೀಚೆಗೆ ವಿದ್ಯಾಭ್ಯಾಸವನ್ನು ಪಡೆದುಕೊಂಡ ಕೆಲವು ಯುವಸಮುದಾಯಗಳು ಇಂತಹ ಪದ್ಧತಿಗಳನ್ನು ತಿರಸ್ಕರಿಸಿ ಕೆಲವು ಆಚರಣೆಗಳಲ್ಲಿ ಭಾಗವಹಿಸುತ್ತಾರೆ. ಇತ್ತೀಚೆಗೆ ಶವಸಂಸ್ಕಾರಗಳಲ್ಲಿಯೂ ಭಾಗವಹಿಸುತ್ತಾರೆ. ಮೊದಲು ಕಲೆಯುವವರು ಭಾಗವಹಿಸಿದ ನಂತರ ಇವರು ಕೊನೆಗೆ ಬಂದು ಒಂದು ಹಿಡಿ ಮಣ್ಣು ಹಾಕಿಹೋದವರು ಮತ್ತೆ ಯಾವ ಸಂಸ್ಕಾರದಲ್ಲಿಯೂ ಭಾಗವಹಿಸುವುದಿಲ್ಲ. ದಿವಸಗಳಲ್ಲಿ, ತಿಥಿ ಊಟಗಳಲ್ಲಿ ಯಾವುದರಲ್ಲಿಯೂ ಭಾಗವಹಿಸುವಂತಿಲ್ಲ ಎಂದು ಹೇಳಬಹುದು.

**ತಲೆ ದಿಂಬುಶಾಸ್ತ್ರ:** ಕಾಡುಗೊಲ್ಲರು ಶವಸಂಸ್ಕಾರ ಮಾಡಿದ ನಂತರ ತಲೆದಿಂಬು ತಿವಿಯುವ ಶಾಸ್ತ್ರ ಮಾಡುತ್ತಾರೆ. ಇದು ಎಲ್ಲಾ ಸಮುದಾಯಗಳಲ್ಲಿ ಜಾರಿಯಲ್ಲಿರುವಂತೆ ಇವರಲ್ಲಿಯೂ ತುಂಬಾ ಜಾರಿಯಲ್ಲಿದೆ. ಕಾಡುಗೊಲ್ಲರಲ್ಲಿ ತಲೆದಿಂಬು ತಿವಿಯುವುದು ಕೊನೆಯ ಮಗ/ ಮಗಳು ಇಲ್ಲವೇ ಮೊಮ್ಮಕ್ಕಳಿಗೆ ಅವಕಾಶವಿರುತ್ತದೆ. ಗಂಡು ಸಂತಾನ ಇಲ್ಲದಿದ್ದಾಗ ಹೆಣ್ಣು ಮಕ್ಕಳಿಗೆ ಶವ ಹೊರುವ ಹಾಗೂ ತಲೆದಿಂಬು ತಿವಿಯುವ ಅವಕಾಶವನ್ನು ಕಲ್ಪಿಸಿ ಕೊಡಲಾಗಿದೆ. ತಲೆದಿಂಬು ತಿವಿಯುವವರು ಹೊಸ ಮಡಕೆಯ ತುಂಬಾ ನೀರನ್ನು ತುಂಬಿಕೊಂಡು ಹಿರಿಯರ ಸಲಹೆಯ ಮೇರೆಗೆ ಮೊದಲು ತಲೆಯ ಕಡೆಯಿಂದ ಪ್ರಾರಂಭ ಮಾಡುತ್ತಾರೆ. ತಲೆಯ ಬಳಿಯಲ್ಲಿ ಬಂದು ನಿಂತ ತಕ್ಷಣ ಕುಡುಗೋಲಿನಿಂದ ಮೊದಲು ಒಂದು ತೂತನ್ನು ಮಾಡುತ್ತಾರೆ. ಎರಡನೆಯ ಸುತ್ತಿನಲ್ಲಿ ಎರಡನೇ ತೂತು ಹಾಗೂ ಮೂರನೇ ಸುತ್ತಿನಲ್ಲಿ ಮೂರನೆಯ ತೂತು ಮಾಡಿ ಕೊನೆಗೆ ಶವದ ತಲೆಯ ಮೇಲೆ ಹಿಂದಿನಿಂದ ಮಡಕೆಯನ್ನು ಬಿಟ್ಟು ತಿರುಗಿ ನೋಡದಂತೆ ಹಟ್ಟಿಯ ಕಡೆ ಮುಖ ಮಾಡುತ್ತಾರೆ. ಹಟ್ಟಿಯ ಹೊರಗಡೆ ಇರುವ ಜಗ್ಗು ಬೋರಿನಿಂದ ಮುಖ ಕೈ ಕಾಲು ತೊಳೆದುಕೊಂಡು ಸತ್ತವರ ಮನೆಯಲ್ಲಿ ಜ್ಯೋತಿಯನ್ನು ನೋಡಿ ಆನಂತರ ನೆಂಟರಾದವರು ಬಂದಿರುವ ಬಂಧುಬಾಂಧವರಿಗೆ ಎಲೆ ಅಡಿಕೆ ಕೊಟ್ಟು ನಂತರ ತಮ್ಮ ತಮ್ಮ ಊರುಗಳಿಗೆ ಮರಳುತ್ತಾರೆ. ಶವವನ್ನು ಹೆಗಲ ಮೇಲೆ ಹೊತ್ತಿರುವವರನ್ನು ಹಾಗೂ ತಲೆದಿಂಬು ತಿವಿದಿರುವವರನ್ನು ಯಾವುದೇ ಕಾರಣಕ್ಕೂ ಹಟ್ಟಿಯ ಒಳಗಡೆ ಸೇರಿಸುವುದಿಲ್ಲ. ಏಕೆಂದರೆ ಅವರಿಗೆ ಸೂತಕ ಅಂಟಿಕೊಂಡಿರುತ್ತದೆ ಎಂಬ ನಂಬಿಕೆ ಕಾಡುಗೊಲ್ಲರಲ್ಲಿದೆ. ಮೂರು ದಿವಸದ ತಿಥಿ ಮಾಡುವ ತನಕ ಹಟ್ಟಿಯ ಹೊರಗೆ ಕಾಲ ಕಳೆಯಬೇಕಗುತ್ತದೆ.

**ಮೂರು ದಿವಸದ ಕೂಳು ಅಥವಾ ಕಾಗೆಗೆ ಕೂಳು ಹಾವುದು:** ಕಾಡುಗೊಲ್ಲರು ತಮ್ಮ ಸಮುದಾಯದಲ್ಲಿ ಯಾರೇ ಸತ್ತರೂ ಮೂರು ದಿನದ ದಿವಸ ಮಾಡುವುದನ್ನು ಮಾತ್ರ ಮರೆಯುವಂತಿಲ್ಲ. ಮೂರನೇ

ದಿನದಲ್ಲಿ ಮೂರು ದಿನದ ಕೂಳು ತಯಾರಿಸಲಾಗುತ್ತದೆ ಹಾಗೂ ಇದನ್ನು ಕಾಗೆ ಇರುವ ಕಡೆ ಇಡಲಾಗುತ್ತದೆ. ಮೂರು ದಿವಸದ ಕೂಳನ್ನು ಕಾಗೆ ಮುಟ್ಟುವುದಿಲ್ಲ ಎಂದರೆ ಸತ್ತಿರುವ ವ್ಯಕ್ತಿ ಆಯಸ್ಸು ಮುಗಿಯದೆ ಸತ್ತಿರುತ್ತಾನೆಂದು ಭಾವಿಸಿ ಈ ಕೂಳನ್ನು ಎತ್ತು ಅಥವಾ ಹಸುಗಳಿಗೆ ನೀಡುತ್ತಾರೆ. ಮುಂಚೆಯೇ ಹೇಳಿರುವಂತೆ ಕಾಡುಗೊಲ್ಲರು ಹಟ್ಟಿಯ ಒಳಗಡೆ ಪ್ರಾಣ ಹೋಗಿದ್ದರೆ ಇಡೀ ಹಟ್ಟಿಯನ್ನೇ ಶುದ್ಧಗೊಳಿಸಿಕೊಳ್ಳುತ್ತದೆ. ಹಟ್ಟಿಯ ಹೊರಗಡೆ ಪ್ರಾಣ ಹೋದರೆ ಸತ್ತಿರುವ ವ್ಯಕ್ತಿಯ ಮನೆಯವರು ಮಾತ್ರ ಮನೆಯನ್ನು ಶುದ್ಧೀಕರಿಸಿಕೊಳ್ಳುತ್ತಾರೆ. ಏಳು ಗಂಟೆಯ ಸಮಯದಲ್ಲಿ ಅಗಸರು ಬಂದಿರುತ್ತಾರೆ. ಅಗಸರು ಬರುವುದರೊಳಗಾಗಿ ಶವವನ್ನು ಹೊತ್ತಿರುವ ನಾಲ್ಕು ಜನರು ಬಿಸಿ ನೀರಿನಲ್ಲಿ ಸ್ನಾನ ಮಾಡಿರುತ್ತಾರೆ. ನಂತರ ಅವರ ಹೆಗಲುಗಳನ್ನು ಇಳಿಸುತ್ತಾರೆ.

**ಹೆಗಲು ಇಳಿಸುವ ಶಾಸ್ತ್ರ:** ಕಾಡುಗೊಲ್ಲರು ಶವವನ್ನು ಹೊತ್ತಿರುವವರನ್ನು ಹಟ್ಟಿಯ ಒಳಗಡೆ ಸೇರಿಸುವುದು ಹೆಗಲು ಇಳಿಸುವ ಶಾಸ್ತ್ರದ ಮೂಲಕ. ಇದರ ಜೊತೆಗೆ ತಲೆ ದಿಂಬು ತಿವಿದವರನ್ನು ಸೇರಿಸಿಕೊಳ್ಳುತ್ತಾರೆ. ಈ ಐದು ಜನರು ಬಿಸಿ ನೀರಿನಲ್ಲಿ ಸ್ನಾನ ಮಾಡಿ ಈಗಾಗಲೇ ಜೋಡಿಸಿಕೊಂಡಿರುವ ಕಾಡು ಹಕ್ಕಿಯ ಗರಿ ಮತ್ತು ಒನಕೆ ಹಾಗೂ ಕೊಡಲಿಯಿಂದ ಸೂತಕವನ್ನು ಕಳೆದುಕೊಳ್ಳುತ್ತಾರೆ. ಅದು ಹೇಗೆಂದರೆ ಬಿಸಿ ನೀರಿನಲ್ಲಿ ಸ್ನಾನ ಮಾಡಿದ ವ್ಯಕ್ತಿಗಳು ಒಬ್ಬೊಬ್ಬರಾಗಿ ಬಂದು ಒನಕೆಯ ಮೇಲೆ ಕೂರುತ್ತಾರೆ. ಆನಂತರ ಅವರ ಹೆಗಲಿಗೆ ಕೊಡಲಿಯನ್ನು ಮುಟ್ಟಿಸುವುದರ ಮೂಲಕ ಸೂತಕವನ್ನು ಕಳೆದುಕೊಳ್ಳುತ್ತಾರೆ. ಇದರ ಜೊತೆಗೆ ಕಾಡುಕೋಳಿಯನ್ನು ಹೆಗಲಿಗೆ(ಕೆಲವು ಕಡೆ) ಮುಟ್ಟಿಸಿ ಆನಂತರ ಶುದ್ಧ ನೀರು, ಹಾಗೂ ಗೋಮೂತ್ರವನ್ನು ಅವರ ಮೇಲೆ ಸಿಂಪಡಿಸಿದಾಗ ಅಲ್ಲಿಗೆ ಅವರ ಸೂತಕ ಸಂಪೂರ್ಣವಾಗಿ ಕಳೆಯುತ್ತದೆ.

**ಗರ್ಭಿಣಿ ಸ್ತ್ರೀಯರು ಸತ್ತಾಗ ಆಚರಿಸುವ ಆಚರಣೆಗಳು:** ಗರ್ಭಿಣಿ ಸ್ತ್ರೀಯರು ಸತ್ತಾಗ ಕಾಡುಗೊಲ್ಲರು ತುಂಬಾ ಜಾಗ್ರತೆ ವಹಿಸುತ್ತಾರೆ. ಅವರ ಕಲ್ಪನೆಯ ಪ್ರಕಾರ ಗರ್ಭಿಣಿಯರು ಸಾಯುವುದು ತುಂಬಾ ಪಾಪದ ಕೆಲಸ ಹಾಗೂ ಅವರು ದೆವ್ವವಾಗಿ ಕಾಡುವ ಅವಕಾಶ ತುಂಬಾ ಹೆಚ್ಚಾಗಿವೆ ಎಂದು ಭಾವಿಸಿ ಗರ್ಭಿಣಿ ಸ್ತ್ರೀಯರನ್ನು ಹೂಳುವ ಬದಲಾಗಿ ಸ್ಮಶಾನದಲ್ಲಿ ಸುಡುತ್ತಾರೆ. ಬೇರೆಯವರು ಸತ್ತರೆ ತಮ್ಮ ಹೊಲಗಳಲ್ಲಿಯೇ ಹೂಳುತ್ತಾರೆ. ಹಾಗಾಗಿ ಗರ್ಭಿಣಿ ಸ್ತ್ರೀಯರು ಸತ್ತರೆ ಸುಡುಗಾಡಿಗೆ ಒಯ್ದು ಸುಡುತ್ತಾರೆ. ಸುಟ್ಟ ನಂತರ ಅವಳ ಹೊಟ್ಟೆಯಲ್ಲಿ ಮಗು ಇರುವ ಕಾರಣ ಮಗುವಿಗಾಗಿ ಗುಳ್ಳೆಯ ಬಳಿ ಮೂರು ದಿನಗಳ ಕಾಲ ಹಾಲು ಇಡುವ ಪದ್ಧತಿ ಕಾಡುಗೊಲ್ಲರಲ್ಲಿದೆ. ಆನಂತರ ಎಲ್ಲಾ ರೀತಿಯ ಸಂಸ್ಕಾರಗಳನ್ನು ಮಾಡಿ ಮುಗಿಸಿದ ನಂತರ ಗರ್ಭಿಣಿ ಸ್ತ್ರೀಯ ಗಂಡನಾದವನು ೨೧ ದಿನಗಳ ಕಾಲ ರಾತ್ರಿಯ ಸಮಯದಲ್ಲಿ ೨೧ ಊರುಗಳಲ್ಲಿ ಅಡುಗೆ ಮಾಡಿಕೊಂಡು ಊಟ ಮಾಡಿ ಬರಬೇಕು. ಇವನು ಊಟ ಮಾಡುವುದನ್ನು ಯಾರೂ ನೋಡಬಾರದು. ನೋಡಿದರೆ ಮತ್ತೆ ಮೊದಲಿನಿಂದ ಈ ಆಚರಣೆಯನ್ನು ಪ್ರಾರಂಭಿಸಬೇಕಾಗುತ್ತದೆ.

**ಅವಿವಾಹಿತರಾಗಿರುವವರು ಸತ್ತರೆ:** ಕಾಡುಗೊಲ್ಲರಲ್ಲಿ ಅವಿವಾಹಿತರನ್ನು ಶವಸಂಸ್ಕಾರ ಮಾಡುವ ವಿಧಾನವೇ ವಿಶಿಷ್ಟವಾಗಿದೆ. ಅವಿವಾಹಿತರನ್ನು ಮಕ್ಕಳು ಎಂದು ಭಾವಿಸಿ ಅವರ ಶವಸಂಸ್ಕಾರ

ಮಾಡುವಾಗ ಚಟ್ಟ ಕಟ್ಟುವುದಿಲ್ಲ. ಕಂಬಳಿಕೊರೆಯಲ್ಲಿ ನಾಲ್ಕು ಜನರು ಹಿಡಿದುಕೊಂಡು ಹೋಗಿ ಗುಣಿಯ ಹತ್ತಿರ ಶಾಸ್ತ್ರೋಕವಾಗಿ ಪೂಜೆ ಮಾಡಿ ಶವಸಂಸ್ಕಾರ ಮಾಡುತ್ತಾರೆ. ಇವರಿಗೆ ಸೂತಕ ಇರುವುದಿಲ್ಲ. ಹಾಗಾಗಿ ಮೂರು ದಿನದ ದಿವಸವನ್ನು ಗುಡ್ಡೆಯ ಬಳಿ ಹಾಲು ಇಡುವುದರ ಮೂಲಕ ಸಂಸ್ಕಾರ ಮಾಡಿಕೊಳ್ಳುತ್ತಾರೆ. ಇವರನ್ನು ಬೋರಲಾಗಿ ಶವಸಂಸ್ಕಾರ ಮಾಡುತ್ತಾರೆ. ಯಾಕೆಂದರೆ ಇವರು ಮದುವೆ ಆಗಿಲ್ಲ ಎಂಬ ಕಾರಣದಿಂದ ಮಾತ್ರ, ಇವರು ಸತ್ತಾಗ ಕಾಗೆಗೆ ಕೂಳು ಹಾಕುವುದಿಲ್ಲ.

**ಗುಡ್ಡೆ ತಣ್ಣಗೆ ಮಾಡಿಕೊಳ್ಳುವ ಶಾಸ್ತ್ರ:** ಕಾಡುಗೊಲ್ಲರು ತಮ್ಮ ಸಮುದಾಯದಲ್ಲಿ ಸತ್ತಿರುವ ವ್ಯಕ್ತಿಗಳಿಗೆ ೨೧ ದಿನ ಇಲ್ಲವೆ ೩೦ ದಿನಗಳಲ್ಲಿ ಗುಡ್ಡೆ ತಣ್ಣಗೆ ಮಾಡಿಕೊಳ್ಳುವ ಶಾಸ್ತ್ರವನ್ನು ಮಾಡುತ್ತಾರೆ. ಇದನ್ನು ಕೆಲವರು ಗುಡ್ಡೆ ಒಳಗೆ ತೆಗೆದುಕೊಳ್ಳುವುದು ಎಂದು ಕರೆಯುತ್ತಾರೆ. ೨೧ ಅಥವಾ ೩೦ ದಿನಗಳಲ್ಲಿ ಬೆಳಿಗ್ಗೆ ಎದ್ದು ಗುಡ್ಡೆಗೆ ಮೂರರಿಂದ ನಾಲ್ಕು ಕೊಡ ತುಂಬಿದ ಗಡಿಗೆಯ ನೀರನ್ನು ಗುಡ್ಡೆಯ ಮೇಲೆ ಸುರಿಯುತ್ತಾರೆ. ಆನಂತರ ಸಂಜೆ ತಮ್ಮ ಬಂಧುಬಾಂಧವರೊಂದಿಗೆ ಗುಡ್ಡೆಯ ಬಳಿ ಹೋಗಿ ಒಂದು ಹೊಸ ಕುಡಿಕೆಯಲ್ಲಿ ಸಮಾಧಿಯ ಮಣ್ಣು ತುಂಬಿಕೊಂಡು ಅದನ್ನು ಶಾಸ್ತ್ರೋಕ್ತವಾಗಿ ಪೂಜೆಯನ್ನು ಮಾಡಿ ನಂತರ ಬಂದಿರುವ ಸಂಬಂಧಿಕರಿಗೆ ಬಾಳೆಹಣ್ಣು, ಕಾಯಿ, ತಂಬಿಟ್ಟನ್ನು ಪ್ರಸಾದವಾಗಿ ನೀಡಿ ಒಂದು ಒಳ್ಳೆಯ ಕಲ್ಲನ್ನು ಆಯ್ಕೆ ಮಾಡಿಕೊಂಡು ಬಂದು ಈಗಾಗಲೆ ತಮ್ಮ ಹಿರಿಯರನ್ನು ಕೂರಿಸಿರುವ ಜಾಗದಲ್ಲಿ ಕುಡಿಕೆಯನ್ನು ಗುಂಡಿ ತೆಗೆದು ಹೂಳುತ್ತಾರೆ. ನಂತರ ಅದರ ಮೇಲೆ ಆಯ್ಕೆ ಮಾಡಿಕೊಂಡಿರುವ ಕಲ್ಲನ್ನು ಇಡುತ್ತಾರೆ. ಅಂದಿನಿಂದ ಸತ್ತಿರುವ ವ್ಯಕ್ತಿ ಕಲ್ಲಿನ ರೂಪದಲ್ಲಿ ಪೂಜೆಗೆ ಒಳಗಾಗುತ್ತಾರೆ.

**ಅಮಾವಾಸ್ಯೆಯ ಪೂಜಾರಿ:** ಕಾಡುಗೊಲ್ಲರು ತಮ್ಮ ಸಮುದಾಯದಲ್ಲಿ ಸತ್ತ ವ್ಯಕ್ತಿಗಳಿಗೆ ಮೋಕ್ಷ ಕಲ್ಪಿಸುವ ಸಲುವಾಗಿ ಅಮಾವಾಸ್ಯೆಯ ಪೂಜಾರಿಯನ್ನು ನೇಮಕ ಮಾಡಿಕೊಳ್ಳುತ್ತಾರೆ. ಈ ಪೂಜಾರಿಯು ದೇವರ ಪೂಜಾರಿಯಷ್ಟೇ ಪ್ರಾಮುಖ್ಯತೆಯನ್ನು ಹೊಂದಿದವರಾಗಿರುತ್ತಾನೆ. ಈತನಿಗೆ ತುಂಬಾ ವಿಶಿಷ್ಟವಾದ ಸ್ಥಾನಮಾನವಿದೆ. ಕಾಡುಗೊಲ್ಲರು ಮೊದಲು ಮೂರು ಬೆಡಗುಗಳಿದ್ದ ಕಾರಣ ಮೂರು ಜನ ಅಮಾವಾಸ್ಯೆಯ ದೇವರುಗಳಿದ್ದಾರೆ. ಅದರಲ್ಲಿ ಮೊದಲನೆಯವನು ಕಾಟಯ್ಯ ಸಂದಮುತ್ತಿ ಬೆಡಗಿಗೆ ಅಮಾವಾಸ್ಯೆಯ ದೇವರು. ಅದರಲ್ಲಿ ಎಷ್ಟೋ ಉಪಬೆಡಗುಗಳಿದ್ದರೂ ಅವೆಲ್ಲವುಗಳಿಗೆ ಕಾಟಯ್ಯನೇ ಅಮಾವಾಸ್ಯೆ ದೇವರು. ಹಾಗೆಯೇ ಕರಡಿಗೊಲ್ಲರಿಗೆ ಚಿತ್ತಯ್ಯ ಅಮಾವಾಸ್ಯೆಯ ದೇವರು. ಮತ್ತು ರಾಮಮುತ್ತಿ ವಂಶಸ್ಥರಿಗೆ ರಾಮದೇವರು ಅಮಾವಾಸ್ಯೆಯ ದೇವರು. ಈ ಮೂರು ದೇವರಿಗೂ ಒಂದೊಂದು ಕಟ್ಟೆಮನೆಗಳಿವೆ. ಕಾಡುಗೊಲ್ಲರು ಪ್ರತಿವರ್ಷವು ಅಮಾವಾಸ್ಯೆದೇವರು ಮಾಡುವ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿರುವುದು ತಿಳಿದುಬರುತ್ತದೆ. ಸಾಮಾನ್ಯವಾಗಿ ಕಾಡುಗೊಲ್ಲರು ಶಿವರಾತ್ರಿ ತಿಂಗಳಿನಲ್ಲಿ ಗುಗ್ಗರಿ ಅಥವಾ ಕಾಳಿನ ಹಬ್ಬವನ್ನು ಆಚರಿಸುತ್ತಾರೆ. ಆ ಸಂದರ್ಭದಲ್ಲಿ ಆ ವರ್ಷದಲ್ಲಿ ಸತ್ತಿರುವ ವ್ಯಕ್ತಿಗಳಿಗೆ ತಮ್ಮ ಗುಡಿಕಟ್ಟುಗಳಲ್ಲಿ ಹಿಂಡೆ ಕೂಳುಹಾಕುವ ಸಂಪ್ರದಾಯವನ್ನು ಇಟ್ಟುಕೊಂಡಿದ್ದಾರೆ. ಬ್ರಾಹ್ಮಣರ ಪಿಂಡ, ಕಾಡುಗೊಲ್ಲರ ಪಿಂಡ ಆಗಿರಬಹುದು. ಇದರಿಂದ ಕಾಳಹಬ್ಬದಲ್ಲಿ

ಅಮಾವಾಸ್ಯೆಯ ಪೂಜಾರಿಯು ಕುಂಬಾರರ ಮನೆಗೆ ಹೋಗಿ ಮೂರು ಕುಡಿಕೆಗಳನ್ನು ತೆಗೆದುಕೊಂಡು ಬರುತ್ತಾರೆ. ನಂತರ ದೇವರು ಹೊಳೆಗೆ ಹೋಗಿ ಗಂಗಾದೇವತೆ ಮಾಡಿಕೊಂಡು ರಾತ್ರಿಯ ಸಮಯದಲ್ಲಿ ಗುಡಿಯನ್ನು ಪ್ರವೇಶ ಮಾಡುತ್ತಾರೆ. ದೇವರು ಗುಡಿ ಪ್ರವೇಶ ಮಾಡಿದ ನಂತರ ಸಾಕಷ್ಟು ಜನರು ತಮ್ಮ ತಮ್ಮ ಮನೆಗಳಿಗೆ ಹೋಗಿ ಮಲಗಿಕೊಳ್ಳುತ್ತಾರೆ. ಜನರೆಲ್ಲಾ ಮಲಗಿದ ನಂತರ ಅಮಾವಾಸ್ಯೆಯ ಪೂಜಾರಿಯು ಯಾರೊಂದಿಗೆ ಮಾತನಾಡದಂತೆ ಬಾಯಿಗೆ ಬಟ್ಟೆ ಕಟ್ಟಿಕೊಂಡು ಒಲೆಯನ್ನು ಹಚ್ಚಿ ತಂದಿರುವ ಹೊಸ ಮಡಕೆಗೆ ಎಷ್ಟು ಜನರು ಆ ವರ್ಷದಲ್ಲಿ ಸತ್ತಿರುತ್ತಾರೋ ಅಷ್ಟು ಹಿಡಿ ಅಕ್ಕಿಯನ್ನು ಮಡಕೆಗೆ ಹಾಕಿ ಅದರ ಜೊತೆ ಬೇವಿನ ಸೊಪ್ಪನ್ನು ಸೇರಿಸಿ ಚೆನ್ನಾಗಿ ಬೇಯಿಸುತ್ತಾರೆ. ಚೆನ್ನಾಗಿ ಬೆಂದ ನಂತರ ಸತ್ತಿರುವ ವ್ಯಕಿಗಳ ಸಂಖ್ಯೆಗೆ ಅನುಗುಣವಾಗಿ ಅಷ್ಟು ಸಣ್ಣ ಕಲ್ಲುಗಳನ್ನು ಇಡುತ್ತಾನೆ. ಅದರ ಮುಂದೆ ವೀಳ್ಯೆದೆಲೆ ಅಡಿಕೆ ಅದೇ ಎಲೆಯಲ್ಲಿಯೇ ಒಂದೊಂದು ಮಡಕೆ ಅನ್ನವನ್ನು ಇಟ್ಟು ಮೈಮೇಲಿನ ಬಟ್ಟೆಗಳನ್ನೆಲ್ಲಾ ತೆಗೆದು ಹುಟ್ಟುರೂಪಿಲೆ ಸತ್ತಿರುವ ವ್ಯಕ್ತಿಗಳಿಗೆ ಪೂಜೆಯನ್ನು ಮಾಡುತ್ತಾನೆ. ಹೀಗೆ ಪೂಜೆ ಮಾಡುವುದನ್ನು ಯಾರೂ ನೋಡ ಬಾರದೆಂದು ಹಿರಿಯರು ಹೇಳುತ್ತಾರೆ. ಅನಂತರ ಹಿರಿಯರ ಮುಂದೆ ಇಟ್ಟಿರುವ ಕೂಳನ್ನು ಯಾರಿಗೂ ಕಾಣದಂತೆ ತಿನ್ನುತ್ತಾನೆ. ಎಲ್ಲಾ ಕೂಳು ಮುಗಿದ ನಂತರ ತನ್ನ ಬಟ್ಟೆಗಳನ್ನು ಧರಿಸುತ್ತಾನೆ. ಈ ಪೂಜಾರಿಯೂ ಅಮವಾಸ್ಯೆಯ ಕೂಳು ತಿಂದ ಕಾರಣಕ್ಕಾಗಿ ಸತ್ತ ವ್ಯಕ್ತಿಯ ಮನೆಯವರಿಂದ ನಿಗದಿ ಮಾಡಿದ ಹಣ ದೊರೆಯುತ್ತದೆ. ಇತ್ತೀಚೆಗೆ ಜಾಗತೀಕರಣದ ಪ್ರಭಾವದಿಂದಾಗಿ ಈ ಆಚರಣೆಗಳು ಕೆಲವು ಬೆಡಗುಗಳಲ್ಲಿ ನಿಂತು ಹೋಗಿವೆ. ಕಾಡುಗೊಲ್ಲರ ಯುವಕರು ದೇವರ ಪೂಜಾರಿಯಾಗಲು ಬಯಸುವುದಿಲ್ಲ. ಯಾಕೆಂದರೆ ಪೂಜಾರಿಯಾದರೆ ತುಂಬಾ ಕಟ್ಟುನಿಟ್ಟಾಗಿ ಇರಬೇಕಾಗುತ್ತದೆ ಎಂಬ ಕಾರಣಕ್ಕಾಗಿ. ಬೇರೆಯವರ ಮನೆಯಲ್ಲಿ ಹಾಗೂ ಹೋಟೆಲ್‌ಗಳಲ್ಲಿ ಊಟ ಮಾಡುವಂತಿಲ್ಲ, ನೀರು ಕುಡಿಯುವಂತಿಲ್ಲ ಹಾಗೂ ಬಸ್ಸುಗಳಲ್ಲಿ ಓಡಾಡುವಂತೆ ಇಲ್ಲ.

**ಹಿರಿಯರ ಪೂಜೆ:** ಕಾಡುಗೊಲ್ಲರು ಹಿರಿಯರ ಹಬ್ಬವನ್ನು ಎಂತಹ ಬಡತನವಿದ್ದರೂ ಮಾಡುತ್ತಾರೆ. ಏಕೆಂದರೆ ಹಿರಿಯರು ತಮ್ಮನ್ನು ಕಾಡುತ್ತಾರೆಂಬ ಭಯವಿದೆ. ಹಾಗಾಗಿ ಹಿರಿಯರ ಹಬ್ಬವನ್ನು ಚಾಚೂ ತಪ್ಪದೇ ಮಾಡುತ್ತಾರೆ. ಹಿರಿಯರು ಬಳಸುತ್ತಿದ್ದ ಎಲ್ಲಾ ವಸ್ತುಗಳನ್ನು ಇಟ್ಟು ತುಂಬಾ ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ಹಿರಿಯರಿಗೆ ಹೊಸ ಸೀರೆ ಪಂಚೆ ಮತ್ತು ಟವೆಲ್ ಹಾಗೂ ಉಡದಾರವನ್ನು ಸಹ ಹಿರಿಯರಿಗೆ ಉಡಿಸುತ್ತಾರೆ. ತಮ್ಮ ಮನೆಯಲ್ಲಿ ಮಾಡಿರುವ ಭಕ್ಷ ಭೋಜನಗಳನ್ನು ಇಡುತ್ತಾರೆ. ಸಾಮಾನ್ಯವಾಗಿ ಕೆಲವು ಭಾಗಗಳಲ್ಲಿ ಹಿರಿಯರ ಹಬ್ಬವನ್ನು ದೀಪಾವಳಿ ತಿಂಗಳಿನಲ್ಲಿ ಮಾಡಿದರೆ ಕೆಲವು ಭಾಗಗಳಲ್ಲಿ ಯುಗಾದಿ ಹಬ್ಬದೊಂದಿಗೆ ಮಾಡುತ್ತಾರೆ. ಯುಗಾದಿ ಹಬ್ಬದಲ್ಲಿ ಹಿರಿಯರಿಗೆ ಬೇವು ಬೆಲ್ಲವನ್ನು ಇಟ್ಟು ಸಹ ಪೂಜಿಸುತ್ತಾರೆ.

**ಕುಟುಂಬ:** ಭಾರತೀಯ ಸಮಾಜದಲ್ಲಿ ಕುಟುಂಬವು ಪ್ರಧಾನವಾದ ಪಾತ್ರ ವಹಿಸುತ್ತದೆ. ಏಕೆಂದರೆ ಮನುಷ್ಯನಿಗೆ ಮೊದಲನೆಯ ಪಾಠಶಾಲೆಯು ಕುಟುಂಬ ಎಂದು ಹೇಳಿದರೆ ತಪ್ಪಾಗಲಾರದು. ಒಂದು

ಕುಟುಂಬದಲ್ಲಿ ಅಪ್ಪ, ಅಮ್ಮ, ಅಜ್ಜ, ಅಜ್ಜಿ, ಚಿಕ್ಕಪ್ಪ, ಚಿಕ್ಕಮ್ಮ, ದೊಡ್ಡಪ್ಪ, ದೊಡ್ಡಮ್ಮ, ಅಣ್ಣ, ತಮ್ಮ, ಅಕ್ಕ, ತಂಗಿ ಮುಂತಾದವರು ಇರುವುದರಿಂದ ಉತ್ತಮ ಸಂಸ್ಕೃತಿಯ ಪ್ರತೀಕವಾಗಿ ಕುಟುಂಬವು ಕಂಡುಬರುತ್ತದೆ. ಸಾಮಾಜಿಕ ಸಂಘಟನೆಯಲ್ಲಿ ಮೊದಲ ಸ್ಥಾನವೇ ಕುಟುಂಬದ್ದು. ಹಾಗಾಗಿ ಹಿಂದೆ ಕಾಡುಗೊಲ್ಲರಲ್ಲಿ ಮಾತೃಪ್ರಧಾನ ಕುಟುಂಬಗಳು ಅಸ್ತಿತ್ವದಲ್ಲಿರುವುದು ಸಂಶೋಧನೆಯ ಮೂಲಕ ತಿಳಿದುಬಂದಿದೆ. ಕಾಡುಗೊಲ್ಲರು ಮಾತೃದೇವತಾ ಆರಾಧಕರಾಗಿದ್ದರು. ಇದಕ್ಕೆ ಪುಷ್ಟಿಯಾಗಿ ಅವು ಆರಾಧನೆ ಮಾಡುತ್ತಿರುವ ಮಾತೃದೇವತೆಗಳಾದ ಗೌರಸಮುದ್ರದ ಮಾರಮ್ಮ, ಗೂಲ್ಲಳಮ್ಮ, ಬೇವಿಹಳ್ಳಿ ಕರಿಯಮ್ಮ, ಹೀರೆಗುಂಟನೂರು ದ್ಯಾಮವ್ವ ಅಷ್ಟೆ ಅಲ್ಲಪ್ರತಿಯೊಂದು ಗೊಲ್ಲರ ಹಟ್ಟಿಯ ಹೀಗೆ ಮಾರಮ್ಮನ ಗುಡಿ ಇರುವುದು ಕಂಡುಬರುತ್ತದೆ. ಆಂಧ್ರಪ್ರದೇಶದಲ್ಲಿ ವಾಸವಾಗಿರುವ ಕಾಡುಗೊಲ್ಲರು ರೇಣುಕ ಎಲ್ಲಮ್ಮ ಮತ್ತು ಕಾವಲಮ್ಮ ಅವರನ್ನು ಆರಾಧನೆ ಮಾಡುತ್ತಿರುವುದು ಸಂಶೋಧನೆಯಿಂದ ತಿಳಿದುಬಂದಿದೆ. ಜಾಗತೀಕರಣ, ಕೈಗಾರೀಕರಣ, ಯಾಂತ್ರೀಕರಣ, ನಗರೀಕರಣಗಳ ಪ್ರಭಾವದಿಂದಾಗಿ ಕಾಡುಗೊಲ್ಲರಲ್ಲಿ ಮಾತೃದೇವತೆಗಳ ಬದಲಾಗಿ ಪಿತೃದೇವತೆಗಳ ಆರಾಧನೆ ಪ್ರಾರಂಭವಾಯಿತು. ಅನಂತರ ಮಾತೃಪ್ರಧಾನ ಕುಟುಂಬಗಳು ಪಿತೃಪ್ರಧಾನ ಕುಟುಂಬಗಳಾಗಿ ಬದಲಾಗಿರುವುದು ಕಂಡು ಬರುತ್ತದೆ.

'ದಕ್ಷಿಣ ಭಾರತದ ಕೆಲವು ಬುಡಕಟ್ಟುಗಳನ್ನು ಹೊರತುಪಡಿಸಿದರೆ ಮತ್ತು ಕೇರಳದ ನಾಯರ್‌ಗಳಲ್ಲಿ ಬಿಟ್ಟರೆ ಎಲ್ಲಾ ಕಡೆ ಪಿತೃಪ್ರಧಾನ, ಪಿತೃವಂಶೀಯ ಮತ್ತು ಪಿತೃಸ್ಥಾನೀಯ ಕುಟುಂಬಗಳನ್ನು ನೋಡಬಹುದಾಗಿದೆ. ಅದರಂತಯೇ ದಕ್ಷಿಣ ಭಾರತದವರಾದ ಕಾಡುಗೊಲ್ಲರು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಪಾಲಿಸಿಕೊಂಡು ಬಂದಿದ್ದಾರೆ.'[೮] ಎಂ ಗುರುಲಿಂಗಯ್ಯನವರು ಹೇಳುವ ಪ್ರಕಾರ ಕಾಡುಗೊಲ್ಲರು ಮೂಲತಃ ಪಿತೃಪ್ರಧಾನ ಕುಟುಂಬವನ್ನು ಹೊಂದಿದ್ದರು ಎಂದು ಹೇಳುತ್ತಾರೆ. ಆದರೆ ಭಾರತದ ಎಲ್ಲಾ ಬುಡಕಟ್ಟುಗಳು ಮಾತೃಪ್ರಧಾನ ಸಂಸ್ಕೃತಿಯನ್ನು ಹೊಂದಿದ್ದವು. ಆನಂತರ ಇಂತ ಸಂಸ್ಕೃತಿಗಳ ಪ್ರಭಾವದಿಂದಾಗಿ ಕುಟುಂಬಗಳು ಪಿತೃಪ್ರಧಾನವಾಗಿ ಪರಿವರ್ತನೆ ಹೊಂದಿರುವುದು ವಾಸ್ತವ್ಯ ಸತ್ಯ. ಇಂದಿಗೂ ಕೂಡ ಬುಡಕಟ್ಟು ಸಮುದಾಯದವರು ಮಾತೃದೇವತೆಗಳನ್ನು ಆರಾಧನೆ ಮಾಡುತ್ತಿರುವುದು ಹಾಗೂ ಮನೆಯ ಒಳಗಡೆ ಇದ್ದುಕೊಂಡು ಹೆಣ್ಣಾದವಳು ಪುರುಷನಿಗಿಂತ ಹೆಚ್ಚಿನ ಆದಾಯವನ್ನು ಗಳಿಸುವವಳಾಗಿದ್ದಾಳೆ. ಇದರಿಂದಾಗಿ ಇಡೀ ಕುಟುಂಬ ಸ್ತ್ರೀಯರ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ. ಸ್ತ್ರೀಯಿಂದಲೆ ಕೃಷಿ ವಿಕಾಸ ಹೊಂದಿದೆ ಎಂಬುದನ್ನು ನಾವು ಮರೆಯಬಾರದು. ಮಹಿಳೆಯರಿಗೆ ಪುರುಷರಿಗಿಂತ ಜವಾಬ್ದಾರಿಗಳು ಹೆಚ್ಚು. ಕೃಷಿಯ ಜೊತೆಗೆ ಪಶುಪಾಲನೆಯನ್ನು ಮುಂದುವರಿಸಿಕೊಂಡು ಬರುತ್ತಿರುವವರು ಮಹಿಳೆಯರೆ. ಮಕ್ಕಳನ್ನು ಪೋಷಿಸುವಂತೆ ಕಾಡುಗೊಲ್ಲರು ಪಶುಗಳಪಾಲನೆ ಪೋಷಣೆ ಮಾಡುವುದರಿಂದ ಅವರ ಆರ್ಥಿಕ ಸ್ಥಿತಿಗೆ ನೆರವಾಗುತ್ತಿದ್ದಾರೆ.

ಕಾಡುಗೊಲ್ಲರಲ್ಲಿ ಹಿಂದೆ ಅವಿಭಕ್ತ ಕುಟುಂಬಗಳು ಅಸ್ತಿತ್ವದಲ್ಲಿ ಇದ್ದ ಕಾಲದಲ್ಲಿ ಇಡೀ ಕುಟುಂಬದ ನಿರ್ವಹಣೆಯನ್ನು ಪುರುಷರ ಬದಲಾಗಿ ಮಹಿಳೆಯರೇ ನಿರ್ವಹಿಸುತ್ತಿದ್ದರು. ಹಿಂದೆ ಕಾಡುಗೊಲ್ಲರು

ಅವಿಭಕ್ತ ಕುಂಟುಂಬಗಳಿಗೆ ತುಂಬಾ ಪ್ರಾಮುಖ್ಯತೆಯನ್ನು ಕೊಟ್ಟಿದ್ದರು. ಇನ್ನೂ ಅನೇಕ ಹಟ್ಟಿಗಳಲ್ಲಿ ಅವಿಭಕ್ತ ಕುಟುಂಬಗಳಿರುವುದು ಸಂಶೋಧನೆಯಿಂದ ತಿಳಿದುಬಂದಿದೆ. ಇವರು ಪಶುಪಾಲಕರಾದ ಕಾರಣ ಅವಿಭಕ್ತ ಕುಟುಂಬವು ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಏಕೆಂದರೆ ದನ ಕಾಯಲು, ಕುರಿ ಕಾಯಲು ಹಾಗೂ ಕೃಷಿ ಮಾಡಲು ಜನರ ಅವಶ್ಯಕವಿರುತ್ತದೆ. ಮೂರು ತಲೆ ಮಾರಿನ ಜನರು ಒಂದೇ ಕುಟುಂಬದಲ್ಲಿ ವಾಸ ಮಾಡುತ್ತಿರುವುದು ಸಂಶೋಧನೆಯಿಂದ ದೃಢಪಟ್ಟಿದೆ. ಕಾಡುಗೊಲ್ಲರು ತುಂಬಾ ಭಾವನಾಜೀವಿಗಳು. ಇತರೇ ಸಮುದಾಯಗಳಲ್ಲಿ ನಂಬಿಕೆ ಇಡದಿದ್ದರೂ ಇವರು ಮಾತ್ರ ನಂಬಿಕೆ ಇಟ್ಟುಕೊಂಡು ಬಂದಿದ್ದಾರೆ. ಜೊತೆಗೆ ಬಾಳುವುದರಿಂದ ಆನಂದ ಇದೆ ಎಂದು ಭಾವಿಸುತ್ತಾರೆ. ಮೂರು ನಾಲ್ಕು ಕುಟುಂಬಗಳು ಸಹ ಒಂದೇ ಸೂರಿನಡಿ ಬದುಕುತ್ತಿರುವ ಕುಟುಂಬಗಳನ್ನು ನಾವು ನೋಡಬಹುದು. ಅವಿಭಕ್ತ ಕುಟುಂಬಗಳು ಆರ್ಥಿಕವಾಗಿ ಸಬಲತೆಯನ್ನು ಹೊಂದಿರುವ ಉದಾಹರಣೆಗಳು ಸಾಕಷ್ಟು ದೊರೆಯುತ್ತವೆ. ಆದರೆ ಇತ್ತೀಚೆಗೆ ಕಾಡುಗೊಲ್ಲರ ಸಮಾಜದಲ್ಲಿ ಶಿಕ್ಷಣ ಎನ್ನುವ ಹೊಸ ಗಾಳಿ ಬೀಸಿದ್ದರ ಪರಿಣಾಮವಾಗಿ ನಾವು ನಮ್ಮವರು ಎಂಬ ಭಾವನೆಯು ಹೊರಟು ಹೋಗಿ ಸಂಕುಚಿತ ಮನೋಭಾವ ಬೆಳೆದುನಿಂತಿದೆ. ಆಧುನಿಕ ಯುವಕ ಯುವತಿಯರು ತಮ್ಮ ಭಾವನೆಗಳನ್ನು ಕೊಂದುಕೊಂಡು ತಮ್ಮ ಸ್ವಾರ್ಥಕ್ಕಾಗಿ ಅವಿಭಕ್ತ ಕುಟುಂಬಗಳನ್ನು ವಿಭಕ್ತ ಕುಟುಂಬಗಳಾಗಿ ಮಾರ್ಪಾಡು ಮಾಡುತ್ತಿರುವ ದೃಶ್ಯಗಳು ನಮ್ಮ ಕಣ್ಣಿಗೆ ಬೀಳುತ್ತದೆ. ಇದರಿಂದ ಯಾವ ಪ್ರಯೋಜನವು ಇಲ್ಲವೆಂದು ಗೊತ್ತಿದ್ದ ಯುವ ಜನತೆ ಹಿರಿಯರ ನೆಮ್ಮದಿಯನ್ನು ಹಾಳುಮಾಡುತ್ತಿದೆ. ನಮ್ಮ ಯುವ ಜನತೆ ಸಂಪ್ರದಾಯವನ್ನು ವಿರೋಧಿಸುವುದರ ಜೊತೆಗೆ ಕೃಷಿಯನ್ನು ಹಾಗೂ ಪಶುಪಾಲನೆಯನ್ನು ನಿರಾಕರಿಸಿ ಪಟ್ಟಣ ಪ್ರದೇಶಗಳನ್ನು ಸೇರಿಕೊಂಡು ಹಟ್ಟಿ ಸಂಸ್ಕೃತಿಯನ್ನು ಮರೆಯುವಂತಹ ಪರಿಸ್ಥಿತಿ ನಿರ್ಮಾಣವಾಗುತ್ತಿದೆ.

**ಬಂಧುತ್ವ:** ಕಾಡುಗೊಲ್ಲರಲ್ಲಿ ಕಂಡುಬರುವಂತಹ ಬಂದುತ್ವದ ಬಿಗಿತ ಇತರೇ ಯಾವ ಸಮುದಾಯದಲ್ಲಿಯೂ ಗುರುತಿಸಲು ಸಾಧ್ಯವಾಗುವುದಿಲ್ಲ. ಕಾಡುಗೊಲ್ಲರಲ್ಲಿ ಅನೇಕ ಕುಲಬಳಿಗಳು ಇದ್ದರೂ ಸಹ ಬಂಧುತ್ವ ವೈಜ್ಞಾನಿಕವಾಗಿದೆ. ಕಾಡುಗೊಲ್ಲರಲ್ಲಿ ಪ್ರಾರಂಭದಲ್ಲಿ ಎರಡು ಬೆಡಗುಗಳಿದ್ದವು. ಅದರಲ್ಲಿ ಮೊದಲೆಯದು ಸೂರ್ಯಕುಲ(ಚಿತ್ತ ಮುತ್ತ) ಎರಡನೆಯದು ಚಂದ್ರನ ಕುಲ(ಚಂದಮತ್ತಿ) ಇವರಿಬ್ಬರು ಸಹೋದರರಾಗಿ ಹುಟ್ಟಿ ಆನಂತರ ಜನಸಂಖ್ಯೆ ಬೆಳಸುವ ಉದ್ದೇಶದಿಂದ ನೆಂಟರು ಬಂಟರಾಗಿ ರೂಪಾಂತರ ಹೊಂದುತ್ತಾರೆ. ಅಂದರೆ ಆ ಕುಲಗಳ ಮೂಲಪುರುಷಗಳಾದ ಕಾಟಯ್ಯ ಮತ್ತು ಚಿತ್ತಯ್ಯ ಸಹೋದರರಾಗಿದ್ದವರು ಮಾವ ಅಳಿಯರಾಗಿ ಪರಿವರ್ತಿತರಾಗುತ್ತಾರೆ. ಹಾಗಾಗಿ ಕಾಟಯ್ಯ ಚಿತ್ತಯ್ಯರಿಗೆ ನೆಂಟರಾದ ನಂತರ ಅವರಿಬ್ಬರ ಬಳಿ ಕೊಡು ಕೊಳುವಿಕೆ ನಡೆಯಿತು. ಈ ಎರಡು ಬೆಡಗುಗಳು ಕರ್ನಾಟಕದಲ್ಲಿ ಮಾತ್ರವಲ್ಲದೆ ಎಲ್ಲಿಯೇ ವಾಸವಾಗಿದ್ದರೂ ಇಂದೂ ಸಹ ನೆಂಟಬಂಟರಾಗಿಯೇ ಉಳಿದುಕೊಂಡಿದ್ದಾರೆ. ಇವರಿಬ್ಬರೂ ಮೊದಲು ರೇಪಳ್ಳಿ ಮತ್ತು ಮಾಪಳ್ಳಿಗಳನ್ನು ಕಟ್ಟೆಮನೆಗಳನ್ನು ಕಟ್ಟಿ ಮನೆಗಳನ್ನು ಮಾಡಿಕೊಂಡಿದ್ದರು. ಆನಂತರ ಬ್ರಾಹ್ಮಣ ಬೊಮ್ಮಲಿಂಗನ ತಂಗಿಯನ್ನು ಚಿತ್ತಯ್ಯ ಮದುವೆಯಾದ ಕಾರಣದಿಂದ ಅಲ್ಲಿ ಇನ್ನೊಂದು ಬೆಡಗು ಸೃಷ್ಟಿಯಾಗುತ್ತದೆ.

ಆ ಬೆಡಗು ಹೆಗಡೆ ಗೊಲ್ಲರು ಎಂದು ಹೆಸರು ಪಡೆಯಿತು. ಆನಂತರ ಹೆಗಡೆ ಗೊಲ್ಲರು ಬೆಸ್ತರಹಳ್ಳಿಯನ್ನು ಕಟ್ಟೆಮನೆಯನ್ನಾಗಿ ಮಾಡಿಕೊಂಡರು. ಹೆಗಡೆಗೊಲ್ಲರು ಚಿತ್ತಯ್ಯನಿಗೆ ಮಾತ್ರ ನೆಂಟರಾಗಬೇಕು. ಕಾಟಯ್ಯನಿಗೆ ದಾಯಾದಿಗಳಾಗುತ್ತಾರೆ. ಏಕೆಂದರೆ ಬೊಮ್ಮಲಿಂಗನ ತಂಗಿಯನ್ನು ಚಿತ್ತಯ್ಯ ಮದುವೆಯಾದುದರಿಂದ ಕಾಟಯ್ಯನಿಗೆ ಅಣ್ಣತಮ್ಮ ಆಗಬೇಕು. ಹಾಗಾಗಿ ಚಂದಮತ್ತಿಯ ಕುಲಕ್ಕೂ ಹೆಗಡೆ ಮುತ್ತಿಯ ಕುಲಕ್ಕೂ ಇಂದಿಗೂ ಸಹ ವೈವಾಹಿಕ ಸಂಬಂಧಗಳು ನಿಷಿದ್ಧವಾಗಿವೆ. ಚಿತ್ತಮತ್ತಿಯ ಬೆಡಗುಗಳಾದ ಕರಡಿಗೊಲ್ಲರು, ಮಾರನಗೊಲ್ಲರು, ಬಾಲ್ಕಿರ ಗೊಲ್ಲರು ಹಾಗೂ ಕೆಂಗರಿ ಗೊಲ್ಲರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳಸಬಹುದು. ಮೊದಲೇ ಪಶುಪಾಲಕರು ಹಾಗೂ ಅಲೆಮಾರಿಗಳಾದ ಕಾಡುಗೊಲ್ಲರು ಆಂಧ್ರದಿಂದ ಕನಾಟಕದ ಕಡೆಗೆ ಮುಖ ಮಾಡಿದಾಗ, ಕರಡಿಗೊಲ್ಲರು ಕರಿ ಮತ್ತು ಬೇನಹಳ್ಳಿಯನ್ನು ಕಟ್ಟೆಮನೆಯನ್ನಾಗಿ ಮಡಿಕೊಂಡರು.

### ೩.೮. ಕಾಡುಗೊಲ್ಲರ ಕಟ್ಟೆಮನೆಗಳು ಮತ್ತು ಗುಡಿಕಟ್ಟುಗಳು

ಕಾಡುಗೊಲ್ಲರ ಮೂಲದ ಬಗ್ಗೆ ಹೇಳುವುದಾದರೆ ಇವರ ಮೂಲ ಅಸ್ಪಷ್ಟವಾಗಿದೆ. ಅವರ ಮೌಖಿಕ ಪರಂಪರೆಯ ಮೂಲಗಳು ದೆಹಲಿಯಿಂದ ಬಂದವರೆಂದು ಹೇಳಿದರೆ, ಇನ್ನೂ ಕೆಲವು ಮೂಲಗಳು ಆಂಧ್ರದಿಂದ ಬಂದವರೆಂದು ಹೇಳುತ್ತವೆ. ಕೃಷ್ಣಮೂರ್ತಿ ಹನೂರು ಅವರು ಕಾಡುಗೊಲ್ಲರು ಕರ್ನಾಟಕದ ಮೂಲದವರು ಎಂಬ ಅನಂತ ಕೃಷ್ಣಯ್ಯ ಆರ್ ಅವರ ಮಾತನ್ನು ಸಮರ್ಥಿಸುವುದನ್ನು ಗಮನಿಸಿದರೆ, ಕಾಡುಗೊಲ್ಲರು ಮೂಲತಃ ಕರ್ನಾಟಕದವರೆಂದು ಹೇಳಬಹುದು. ಏಕೆಂದರೆ ದೆಹಲಿಯಿಂದ ಬಂದವರು ಎಂದು ಹೇಳುವುದಕ್ಕೆ ಯಾವುದೇ ಆಧಾರಗಳು ದೊರೆಯುವುದಿಲ್ಲ. ಆಂಧ್ರದಿಂದ ಬಂದವರು ಎಂದು ಹೇಳುವುದಕ್ಕೆ ಕಾಡುಗೊಲ್ಲರ ಸಾಂಸ್ಕೃತಿಕ ಕೇಂದ್ರಗಳಾದ ಕಟ್ಟೆಮನೆಗಳು ಆಂಧ್ರ ಮತ್ತು ಕರ್ನಾಟಕದ ಗಡಿಭಾಗಗಳಲ್ಲಿ ಕಂಡುಬರುವುದೇ ಪ್ರಮುಖ ಕುರುಹುಗಳಾಗಿವೆ. ಇದರ ಜೊತೆಗೆ ಕ್ಷೇತ್ರಕಾರ್ಯದ ಮಾಹಿತಿಯಿಂದ ಆಂಧ್ರದಲ್ಲಿ ವಾಸವಾಗಿರುವ ಕಾಡುಗೊಲ್ಲರು ತಮ್ಮ ಸಾಂಸ್ಕೃತಿಕ ಕೇಂದ್ರಗಳಾದ ಕಟ್ಟೆಮನೆಗಳು ಕರ್ನಾಟಕದಲ್ಲಿರುವುದನ್ನು ಹೇಳುತ್ತಾರೆ. ಹಾಗಾಗಿ ಮೂಲತಃ ಕಾಡುಗೊಲ್ಲರು ಎಲ್ಲಿಯವರು, ಯಾವ ಕಡೆಯಿಂದ ಬಂದವರು ಎಂದು ಹೇಳುವುದು ಕಷ್ಟವಾದರೂ ಆಂಧ್ರದ ಕಾಡುಗೊಲ್ಲರನ್ನು ಮತ್ತು ಕರ್ನಾಟಕದ ಕಾಡುಗೊಲ್ಲರನ್ನು ತೌಲನಿಕವಾಗಿ ಅಧ್ಯಯನಕ್ಕೆ ಒಳಪಡಿಸಿದಾಗ ಆಂಧ್ರದ ಕಾಡುಗೊಲ್ಲರು ಬಹುತೇಕ ಕರ್ನಾಟಕದ ಕಾಡುಗೊಲ್ಲರ ಸಂಸ್ಕೃತಿಯನ್ನು ಅನುಸರಿಸುತ್ತಿರುವುದು ಕಂಡುಬಂದಿದೆ. ಅದೇನೇ ಭಿನ್ನಾಭಿಪ್ರಾಯಗಳಿದ್ದರೂ ಕಾಡುಗೊಲ್ಲರಲ್ಲಿ ಮುಖ್ಯವಾಗಿ ಮೂರು ಕಟ್ಟೆಮನೆಗಳಿರುವುದು ತಿಳಿದುಬಂದಿದೆ. ಇಂದೂ ಕೂಡ ಕಾಡುಗೊಲ್ಲರ ಅನನ್ಯತೆ ಉಳಿದಿರುವುದು ಈ ಕಟ್ಟೆಮನೆಗಳಿಂದ ಎಂದು ಹೇಳಬಹುದು. ಕಟ್ಟೆಮನೆಗಳ ಅವಶ್ಯಕತೆ ಮತ್ತು ಅನಿವಾರ್ಯತೆ ಏನಿತ್ತು ಎಂಬ ಪ್ರಶ್ನೆ ಏಳಬಹುದು. ಆದರೆ ಕಾಡುಗೊಲ್ಲರು ಪ್ರಾರಂಭದ ಕಾಲಘಟ್ಟದಲ್ಲಿ ಪಶುಪಾಲನೆಯನ್ನು ಮೂಲ ವೃತ್ತಿಯನ್ನಾಗಿ ಮಾಡಿಕೊಂಡವರು. ಹೀಗಾಗಿ ಅವರು ಯಾವ ಪ್ರದೇಶದಲ್ಲಿ ವಾಸವಾಗಿದ್ದರೂ, ವರ್ಷಕ್ಕೆ ಒಂದು ಸಲ ಕಟ್ಟೆಮನೆಗೆ ಬಂದು ಹೋಗುವುದು ರೂಢಿಯಲ್ಲಿತ್ತು. ಇದರ ಜೊತೆಗೆ ತಮ್ಮ

ನ್ಯಾಯ ತೀರ್ಮಾನಗಳನ್ನು ಬಗೆಹರಿಸಿಕೊಳ್ಳಲು ಅವರಿಗೆ ಕಟ್ಟೆಮನೆಯ ಅವಶ್ಯಕತೆ ಇತ್ತು. ಏಕೆಂದರೆ ಇವರು ಮೊದಲೇ ಊರಿನಿಂದ ದೂರ ಉಳಿದವರು. ಅನಕ್ಷರಸ್ಥರು ಅಲೆಮಾರಿಗಳು ಆಗಿರುವುದರಿಂದ ಕೋರ್ಟು ಕಛೇರಿ ಎಂದರೆ ಎಲ್ಲಿಲ್ಲದ ಭಯ. ಜೊತೆಗೆ ಮಡಿಮೈಲಿಗೆ ಎಂಬ ಬದ್ಧತೆಗೆ ಒಳಗಾದವರು. ನಗರ ಪ್ರವೇಶಿಸಿದರೆ ತಮಗೆ ಮೈಲಿಗೆಯಾಗುತ್ತದೆ. ಇತರೆ ಸಮುದಾಯಗಳ ಮನೆಗಳಲ್ಲಿ ಊಟ ಮಾಡುತ್ತಿರಲಿಲ್ಲ, ಒಂದೇ ಮಾತಿನಲ್ಲಿ ಹೇಳುವುದಾದರೆ ಬ್ರಾಹ್ಮಣರನ್ನು ಮೀರಿಸುವಂತಹ ಸಂಪ್ರದಾಯದವರೆಂದು ಹೇಳಬಹುದು.

'ಕಾಡುಗೊಲ್ಲರಲ್ಲಿರುವ ನ್ಯಾಯ ಪಂಚಾಯಿತಿಯ ಸ್ವರೂಪ ಬೇರೆ ಯಾವ ಸಮುದಾಯದಲ್ಲಿಯೂ ಇಲ್ಲ ಎಂದರೆ ತಪ್ಪಾಗಲಾರದು. ಈ ಸಮುದಾಯದ ಪಂಚಾಯಿತಿಯ ರಚನೆ, ತೀರ್ಮಾನಗಳು, ಜಗಳ, ವ್ಯಾಜ್ಯಗಳು ಇತ್ಯಾದಿಗಳು ಬುಡಕಟ್ಟು ಅಥವಾ ಕಟ್ಟೆ ಮನೆಯ ವಿಷಯಗಳಿಗೆ ಸಂಬಂಧಿಸಿದವುಗಳಾಗಿರುತ್ತವೆ.'[೨೯]

ಕಾಡುಗೊಲ್ಲರಲ್ಲಿ ಮೊದಲು ಎರಡು ಬೆಡಗುಗಳಿರುವುದು ಕಂಡುಬಂದಿದೆ. ಮೊದಲನೆಯದು ಚಿತ್ತಮುತ್ತಿ(ಸೂರ್ಯವಂಶ) ಎರಡನೆಯದು ಚಂದಮುತ್ತಿ(ಚಂದ್ರವಂಶ). ಈ ಕಾರಣಕ್ಕಾಗಿ ಇವರು ಕಟ್ಟೆಮನೆಗಳು ಕೂಡ ಎರಡು ಇರುವುದು ತಿಳಿದುಬಂದಿದೆ. ಚಿತ್ತಮುತ್ತಿ ವಂಶದವರು ಮೊದಲು ಆಂಧ್ರದ ಗಡಿಭಾಗದಲ್ಲಿ ಕಂಡುಬರುವ 'ರೇಪಲ್ಲಿ' ಎಂಬ ಊರನ್ನು ಕಟ್ಟೆಮನೆಯಾನ್ನಾಗಿ ಮಾಡಿಕೊಂಡಿದ್ದರು. ಚಂದಮುತ್ತಿ ವಂಶದವರು 'ಮಾಪಲ್ಲಿ' ಎಂಬುದನ್ನು ಕಟ್ಟೆಮನೆಯಾನ್ನಾಗಿ ಮಾಡಿಕೊಂಡಿದ್ದರು.

ಇವರ ಅಲೆಮಾರಿತನ ಮುಂದುವರಿದ ಕಾರಣ ಕಾಲಾನಂತರ ರೇಪಲ್ಲಿ ಮತ್ತು ಮಾಪಲ್ಲಿಗಳನ್ನು ಬಿಟ್ಟು ಹಾಲೇನಹಳ್ಳಿ ಮತ್ತು ಪಾಲೇನಹಳ್ಳಿಗಳು ಕಟ್ಟೆಮನೆಗಳಾಗಿ ಬದಲಾಗಿರುವುದು ಕಂಡುಬರುತ್ತದೆ. ಈ ಎರಡು ಕಟ್ಟೆಮನೆಗಳು ಕರ್ನಾಟಕದಲ್ಲಿ ಇರುವುದನ್ನು ಗಮನಿಸಬಹುದು. ಇದರಿಂದಾಗಿ ಕೆಲವು ವಿದ್ವಾಂಸರು ಕಾಡುಗೊಲ್ಲರು ಮೂಲತಃ ಆಂಧ್ರದಿಂದ ಕರ್ನಾಟಕಕ್ಕೆ ವಲಸೆ ಬಂದು ಇಲ್ಲಿಯೇ ನೆಲಸಿದ್ದಾರೆಂದು ಹೇಳುತ್ತಾರೆ. ಇಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಅಂಶವೆಂದರೆ ಈ ಎರಡು ರಾಜ್ಯಗಳು ವಿಭಾಗವಾಗಿದ್ದ ಸಂದರ್ಭದಲ್ಲಿ ಬಯಲು ಅಥವಾ ಹುಲ್ಲುಗಾವಲು ಪ್ರದೇಶದಲ್ಲಿ ಕಾಡುಗೊಲ್ಲರು ವಾಸವಾಗಿದ್ದರು. ಅಷ್ಟೇ ಅಲ್ಲದೆ ಅವರು ವಾಸಿಸುವ ಪ್ರದೇಶ, ಕನ್ನಡ ಮಾತನಾಡುವ ಪ್ರದೇಶವಾಗಿತ್ತು. ಇಂದಿಗೂ ಆಂಧ್ರದ ಮತ್ತು ಕರ್ನಾಟಕದ ಕಾಡುಗೊಲ್ಲರಿಗೂ ವೈವಾಹಿಕ ಸಂಬಂಧಗಳು ಮುಂದುವರಿದಿರುವುದನ್ನು ಕಾಣುತ್ತೇವೆ. ಜನಸಂಖ್ಯೆಯ ದೃಷ್ಟಿಯಿಂದ ಆಂಧ್ರಕ್ಕೆ ಹೋಲಿಸಿದರೆ ಕರ್ನಾಟಕದಲ್ಲೇ ಕಾಡುಗೊಲ್ಲರ ಸಂಖ್ಯೆ ಹೆಚ್ಚಾಗಿದೆ. ಆಂಧ್ರದಲ್ಲಿ ವಾಸವಾಗಿರುವ ಕಾಡುಗೊಲ್ಲರು ಕರ್ನಾಟಕದಲ್ಲಿರುವ ತಮ್ಮ ದೇವರುಗಳಿಗೆ ಪ್ರತಿವರ್ಷ ಬಂದು ಹೋಗುವುದನ್ನು ಗಮನಿಸಬಹುದು.

ಆಧುನೀಕರಣ ಸಂದರ್ಭದಲ್ಲಿಯೂ ನ್ಯಾಯಾಲಯ ವ್ಯವಸ್ಥೆ ಮತ್ತು ಪೊಲೀಸ್ ವ್ಯವಸ್ಥೆ ಜಾರಿಯಲ್ಲಿದ್ದರೂ ಸಹ ಕಾಡುಗೊಲ್ಲ ಜನಾಂಗದಲ್ಲಿ ತಮ್ಮದೇ ರೀತಿಯಾದಂತಹ ಬಲಿಷ್ಠ

ನ್ಯಾಯವ್ಯವಸ್ಥೆಯನ್ನು ಒಳಗೊಂಡದ್ದು ತಮ್ಮ ಸಮುದಾಯದಲ್ಲಿನ ಸಮಸ್ಯೆಗಳಿಗೆ ತಾವೇ ಪರಿಹಾರಗಳನ್ನು ಕಂಡು ಕೊಳ್ಳುತ್ತಾರೆ. ಈ ಜನಾಂಗದಲ್ಲಿ ಗುರು-ಹಿರಿಯರಿಗೆ ವಿಶೇಷವಾದ ಸ್ಥಾನಮಾನಗಳಿದ್ದು, ಅವರು ನೀಡುವ ಆದೇಶಗಳನ್ನು ಚಾಚೂ ತಪ್ಪದೇ ತಮ್ಮ ಸಮುದಾಯದವರ ಆಜ್ಞೆಗಳನ್ನು ಪಾಲಿಸಲಾಗುವುದು. ಈ ನ್ಯಾಯ ಪಂಚಾಯಿತಿಯ ವ್ಯವಸ್ಥೆಯಲ್ಲಿ ಹಟ್ಟಿಯ ಗೌಡರು, ಪೂಜಾರಿಗಳು, ಉನ್ನತ ರೀತಿಯ ರಾಜಕೀಯ ಸ್ಥಾನಮಾನಗಳು ಉನ್ನತ ಶಿಕ್ಷಣವನ್ನು ಪಡೆದಂತಹ ವ್ಯಕ್ತಿಗಳು ಹಾಗೂ ಹಟ್ಟಿಯ ಹಿರಿಯರಾಗಿರುತ್ತಾರೆ. ಇವರು ನೀಡುವ ಆಜ್ಞೆಯೇ ಸಂವಿಧಾನಬದ್ಧವಾಗಿ ನೀಡುವ ನ್ಯಾಯಾಲಯಗಳ ಆದೇಶಗಳಂತೆಯೇ ಈ ನ್ಯಾಯಪಂಚಾಯಿತಿಯಲ್ಲಿ ನೀಡುವ ಅದೇಶಗಳು ಅಷ್ಟೇ ಪರಿಣಾಮಕಾರಿಯಾಗಿರುತ್ತವೆ. ಇವರ ಆಜ್ಞೆಗಳನ್ನು ಮೀರುವುದು ಶಿಕ್ಷಾರ್ಹ ಅಪರಾಧವಾಗಿದ್ದು ಹಟ್ಟಿಗಳಿಂದ ಬಹಿಷ್ಕರಿಸಲಾಗುತ್ತದೆ. ಈ ಕಾಡುಗೊಲ್ಲ ಸಮುದಾಯದಲ್ಲಿ ಮದುವೆ, ಆಸ್ತಿಯ ಹಂಚಿಕೆ ಕೌಟುಂಬಿಕ ಸಮಸ್ಯೆಗಳು ಏನಾದರೂ ಕಂಡುಬಂದಲ್ಲಿ ಈ ಜನಾಂಗದ ನ್ಯಾಯ ಪಂಚಾಯಿತಿಯ ಮೊರೆ ಹೋಗುವುದರ ಮೂಲಕ ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲಾಗುತ್ತದೆ. ಹಾಗೂ ಈ ಜನಾಂಗದ ಮೇಲೆ ಇತರೆ ಜನಾಂಗಗಳ ಆಕ್ರಮಣ ಅಥವಾ ದೌರ್ಜನ್ಯಗಳು ನಡೆದರೆ ಹಟ್ಟಿಯ ಜನರೆಲ್ಲರೂ ಸೇರಿ ಈ ವಿಷಯದ ಬಗ್ಗೆ ಚರ್ಚಿಸುವುದರ ಮೂಲಕ ನ್ಯಾಯಪಂಚಾಯಿತಿಯ ಆದೇಶದಂತೆ ಸೂಕ್ತ ಪ್ರಕ್ರಿಯೆಗಳನ್ನು ನೀಡುವುದರ ಮೂಲಕ ತಮ್ಮ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಹಾಗೂ ತಮ್ಮ ಸಮುದಾಯದಲ್ಲಿಯೇ ಸಂಭವಿಸುವಂತಹ ಮಡಿ-ಮೈಲಿಗೆ, ಹುಟ್ಟು-ಸಾವು, ನಿಯಮಗಳ ಉಲ್ಲಂಘನೆಯಾದಾಗ ಉದಾಹರಣೆಗೆ ಚಪ್ಪಲಿಗಳಲ್ಲಿ ಹೊಡೆದಾಡುವುದು, ಸಮಾನ ಕುಲದಲ್ಲಿ ವಿವಾಹವಾಗುವುದು, ಅಂತರ್‌ಜಾತಿಯ ವಿವಾಹ, ಗಂಡ-ಹೆಂಡತಿಯ ಬೇರ್ಪಡಿಕೆ ಈ ಎಲ್ಲಾ ಸಮಸ್ಯೆಗಳಿಗೆ ತಮ್ಮ ನ್ಯಾಯ ಪಂಚಾಯಿತಿಯಲ್ಲಿಯೇ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಇವರು ನೀಡುವ ನ್ಯಾಯ-ತಿರ್ಮಾನವು, ಸತ್ಯ-ಅಸತ್ಯತೆ, ವಾದ-ತಿರ್ಮಾನಗಳನ್ನು ಪರಿಶೀಲಿಸಿ ಪಾರದರ್ಶಕವಾದ ತೀರ್ಪುಗಳನ್ನು ನೀಡುವುದರ ಮೂಲಕ ಅನ್ಯಾಯಕ್ಕೆ ಒಳಗಾದ ವ್ಯಕ್ತಿಗೆ ನ್ಯಾಯವನ್ನು ಒದಗಿಸುವುದರ ಮೂಲಕ, ತಪ್ಪು ಮಾಡಿದ ವ್ಯಕ್ತಿಗೆ ದಂಡ ವಿಧಿಸುವುದರ ಮೂಲಕ ಅಥವಾ ಶಿಕ್ಷೆ, ಸಾಮಾಜಿಕ ಬಹಿಷ್ಕಾರ, ಧರ್ಮದೇಟು ಈ ರೀತಿಯ ಶಿಕ್ಷೆಗಳನ್ನು ನೀಡುವುದರ ಮೂಲಕ ಈ ತಪ್ಪುಗಳು ಮತ್ತೆ ಮರುಕಳಿಸದಂತೆ ಮಾಡಿ ಸಾಮಾಜಿಕ ಶಾಂತಿ ಮತ್ತು ಭದ್ರತೆಯ ದೃಷ್ಟಿಯಿಂದ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯಲಾಗುವುದು. ಈ ಬಗೆಯ ನ್ಯಾಯ ಪಂಚಾಯಿತಿಯು ಅಸ್ತಿತ್ವದಲ್ಲಿದ್ದು ಪರಿಣಾಮಕಾರಿಯಾಗಿದೆ. ಪ್ರಸ್ತುತ ಆಧುನೀಕರಣ ಪ್ರಭಾವದಿಂದ ತುಂಭ ವಿರಳ ಸಂಖ್ಯೆಯಲ್ಲಿ ಕಾನೂನಿನ ಮೊರೆ ಹೋಗುವುದನ್ನು ಇತ್ತೀಚಿನ ದಿನಗಳಲ್ಲಿ ಕಾಣಬಹುದು.

ಕಟ್ಟೇಮನೆಗಳು ಕಾಡುಗೊಲ್ಲರ ಸಂಸ್ಕೃತಿಯ ಪ್ರತೀಕವೆಂದು ಹೇಳಬಹುದು. ಏಕೆಂದರೆ ಇಷ್ಟೆಲ್ಲ ಮುಂದುವರಿದ ಕಾಲದಲ್ಲಿಯೂ ಕಾಡುಗೊಲ್ಲರು ತಮ್ಮ ಕಟ್ಟೇಮನೆಗಳ ನ್ಯಾಯವ್ಯವಸ್ಥೆಯನ್ನು ಒಪ್ಪಿಕೊಂಡಿದ್ದಾರೆ. ಕಾರಣ ಕಾಡುಗೊಲ್ಲರ ಕಟ್ಟೇಮನೆಗಳು ಕೊಡುವ ತೀರ್ಪು ಅಷ್ಟು ಗುಣಮಟ್ಟದ್ದಾಗಿರುತ್ತದೆ. ಕಾಡುಗೊಲ್ಲರಲ್ಲಿ ಹಿಂದೆ ಮೂರು ಬೆಡಗುಗಳಿದ್ದವು. ಚಿತ್ತಮುತ್ತಿ, ಸನ್ನಮುತ್ತಿ

ಮತ್ತು ರಾಮಮುತ್ತಿಯೆಂದು ಈ ಮೂರು ಬೆಡಗುಗಳಿಗೂ ಒಂದೊಂದು ಕಟ್ಟೇಮನೆಗಳಿವೆ. ಚಿತ್ರ ಮುತ್ತಿ ವಂಶದವರು ಕರಿಓಬೇನಹಳ್ಳಿಯಲ್ಲಿ ಕಟ್ಟೇಮನೆಯನ್ನಾಗಿ ಮಾಡಿಕೊಂಡಿದ್ದಾರೆ. ಅದೇ ರೀತಿ ಸನ್ನಮುತ್ತಿಯವರು ತಾಳವಟ್ಟಿ ಕಟ್ಟೇಮನೆಯಾಗಿ ಮಾಡಿಕೊಂಡರೆ ರಾಮ ಮುತ್ತಿ ವಂಶದವರು ರಾಮನಹಾಳು ಎಂದು ಕಟ್ಟೇಮನೆಯನ್ನು ಮಾಡಿಕೊಂಡಿದ್ದಾರೆ. ಈ ಕಟ್ಟೇಮನೆಗಳಲ್ಲಿ ತಮ್ಮ ಬೆಡಗಿಗೆ ಸೇರಿದ ಉಪಬೆಡಗಿನವರುಗಳ ನ್ಯಾಯ ತೀರ್ಮಾನ ಮಾಡುವ ಸಲುವಾಗಿ ಈ ಕಟ್ಟೇ ಮನೆಗಳು ಸೃಷ್ಟಿಗೊಂಡಿವೆ. ಪ್ರತಿಯೊಂದು ಕಟ್ಟೇಮನೆಯು ಏಳು ಗುಡಿಕಟ್ಟುಗಳನ್ನು ಹೊಂದಿರುತ್ತಿದ್ದವು. ಪ್ರಸ್ತುತ ದಿನಗಳಲ್ಲಿ ಜನಸಂಖ್ಯೆಯು ವಿಸ್ತಾರವಾಗಿ ಹಬ್ಬಿರುವುದರಿಂದ ಅವರ ಗುಡಿಕಟ್ಟುಗಳ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ.

ಕಟ್ಟೇಮನೆಗಳ ಮೇಲೆ ಆಧುನಿಕತೆಯ ಪ್ರಭಾವ ಬೀರಿರುವುದರಿಂದ ಕಟ್ಟೇಮನೆಯಲ್ಲಿ ನ್ಯಾಯ ತೀರ್ಮಾನಗಳು ಸರಿ ಎನಿಸದಿದ್ದಾಗ ಅನಿವಾರ್ಯವಾಗಿ ಕೋರ್ಟ್ ಕಛೇರಿಗಳ ಮೊರೆಗೆ ಹೋಗುತ್ತಿದ್ದಾರೆ. ಕಟ್ಟೇಮನೆಯಲ್ಲಿಯೇ ನ್ಯಾಯಯುತವಾದ ತೀರ್ಪು ಹೊರಬಿದ್ದರೆ ಹಣದ ಉಳಿತಾಯವಾಗುತ್ತದೆ. ಆದರೆ ಕೋರ್ಟ್‌ಗಳಿಗೆ ಹೋದವರು ಹಣ ಆಸ್ತಿ ಕಳೆದುಕೊಂಡ ಸಾಕಷ್ಟು ಉದಾಹರಣೆಗಳಿವೆ.

**ಕರ್ನಾಟಕದಲ್ಲಿ ಕಾಡುಗೊಲ್ಲರ ಕಟ್ಟೆಮನೆಗಳು**

ಆರಂಭದಲ್ಲಿ ಎರಡು ಇದ್ದ ಕಟ್ಟೆಮನೆಗಳು ಕಾಲಾನಂತರ ಮೂರು ಆಗಿರುವುದನ್ನು ಗಮನಿಸಬಹುದು. ಆದರೆ ಮೂರನೆಯ ಕಟ್ಟೆಮನೆ ಯಾವಾಗ ಸೇರಿಕೊಂಡಿತು ಎಂಬುದು ತಿಳಿದುಬಂದಿಲ್ಲ. ಆಂಧ್ರದ ಗಡಿಭಾಗಗಳಲ್ಲಿ ಇವರ ಕಟ್ಟೆಮನೆಗಳು ಎರಡು ಕಂಡುಬಂದರೆ ಕರ್ನಾಟಕದಲ್ಲಿ ಮೂರು ಕಟ್ಟೆಮನೆಗಳು ಕಂಡುಬರುವುದು ಒಂದು ವಿಶೇಷವಾಗಿದೆ. ಇಲ್ಲಿ ಇನ್ನೊಂದು ಹೊಸ ಕುಲ ಸೇರ್ಪಡೆಯಾಗುತ್ತದೆ. ಇದು ತನ್ನದೇ ಕುಲದಿಂದ ಹಬ್ಬಿರುವಂತಹದಲ್ಲ. ಬೇರೊಂದು ಕುಲ ಕಾಡುಗೊಲ್ಲರಾಗಿ ಪರಿವರ್ತನೆಯಾದುದರ ಬಗ್ಗೆ ಒಂದು ದೊಡ್ಡ ಇತಿಹಾಸವೇ ಇರುವುದನ್ನು ಕಾಣಬಹುದು. ಕಾಡುಗೊಲ್ಲರು ಯಾವುದೇ ಕಾರ್ಯ ಮಾಡಿದರೂ ಕರಾರುವಕ್ಕಾಗಿ ಮಾಡುತ್ತಿದ್ದರು.

ಕಾಡುಗೊಲ್ಲರಲ್ಲಿ ಹಿಂದೆ ಎರಡು ಕುಲಗಳಿರುವುದು ಮತ್ತು ಎರಡು ಕಟ್ಟೆಮನೆಗಳಿರುವುದು ತಿಳಿದುಬಂದಿದೆ. ಆದರೆ ಇಲ್ಲಿ ಇನ್ನೊಂದು ಹೊಸ ಕುಲ ಸೇರ್ಪಡೆಯಾಗುವುದರ ಜೊತೆಗೆ ಹೊಸದೊಂದು ಕಟ್ಟೆಮನೆ ಸೃಷ್ಟಿಯಾಗಿದೆ. ಆ ಕುಲವೇ ರಾಮಮುತ್ತಿ. ಇವರ ಕಟ್ಟೆಮನೆ ರಾಮೇನಹಳ್ಳಿಯಲ್ಲಿದೆ. ಪ್ರಸ್ತುತ ಕಾಡುಗೊಲ್ಲರ ಕಟ್ಟೆಮನೆಗಳು ಮೂರು ಇರುವುದನ್ನು ಗಮನಿಸಬಹುದು

೧. ಚಿತ್ತಮುತ್ತಿ(ಸೂರ್ಯವಂಶ) ಕರಿಓಬೇನಹಳ್ಳಿ ಕಟ್ಟೆಮನೆ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನಲ್ಲಿದೆ.

೨. ಚಂದಮುತ್ತಿ(ಚಂದ್ರವಂಶ) ತಾಳವಟ್ಟಿ ಕಟ್ಟೆಮನೆ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನಲ್ಲಿದೆ.

೩. ರಾಮಮುತ್ತಿ(ರಾಮವಂಶ) ರಾಮೇನಹಳ್ಳಿ ಕಟ್ಟೆಮನೆ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನಲ್ಲಿದೆ.

ಇನ್ನೊಂದು ವಿಶೇಷವೆಂದರೆ ಈ ಮೂರು ಕಟ್ಟೆಮನೆಗಳು ಕಂಡುಬರುವುದು ಚಿತ್ರದುರ್ಗ ಜಿಲ್ಲೆಯಲ್ಲಿ. ಹಾಗಾಗಿ ಚಿತ್ರದುರ್ಗ ಜಿಲ್ಲೆಯನ್ನು ಕಾಡುಗೊಲ್ಲರ ತವರೂರು ಎಂದು ಕರೆದರೆ ತಪ್ಪಾಗಲಾರದು. ಕರ್ನಾಟಕ ಮತ್ತು ಆಂಧ್ರದ ಯಾವ ಮೂಲೆಯಲ್ಲಿ ಕಾಡುಗೊಲ್ಲರು ವಾಸವಾಗಿದ್ದರೂ ಅವರು ಈ ಮೂರು ಕಟ್ಟೆಮನೆಗಳಿಗೆ ಸೇರಿದವರಾಗಿರುತ್ತಾರೆ. ಹಾಗಾಗಿ ಕಾಡುಗೊಲ್ಲರಲ್ಲಿ ಮೂರು ಪ್ರಮುಖ ಕುಲಗಳು ಕಂಡುಬರುತ್ತವೆ.

**ಚಿತ್ತಮುತ್ತಿ ಕುಲದ ಬೆಡಗುಗಳು**

**ಕರಡಿಗೊಲ್ಲರು:** ಇವರು ಕರಿಓಬೇನಹಳ್ಳಿ ಕಟ್ಟೆಮನೆಗೆ ಸೇರಿದವರು. ಕರಡಿಗೊಲ್ಲರ ಉಪಬೆಡಗುಗಳು ಕೂಡ ಈ ಕಟ್ಟೆಮನೆಗೆ ಸೇರುತ್ತಾರೆ.

**ಸನ್ನೆಯಗೊಲ್ಲರು:** ಇವರ ಕಟ್ಟೆಮನೆ ತಾಳವಟ್ಟಿ. ಪ್ರಸ್ತುತ ಈ ಕಟ್ಟೆಮನೆಯೂ ನಶಿಸಿಹೋಗಿ ಇವರ ಕಟ್ಟೆಮನೆಯನ್ನು ಯರಬಳ್ಳಿ ಗೊಲ್ಲರಹಟ್ಟಿಗೆ ಬದಲಾಯಿಸಿಕೊಂಡಿದ್ದಾರೆ. ಇದರ ಉಪ ಬೆಡಗುಗಳು ಕೂಡ ಈ ಕಟ್ಟೆಮನೆಗೆ ಸೇರುತ್ತದೆ.

**ಹರಿನ ಮತ್ತು ಮೆರನ ಗೊಲ್ಲರು:** ಇವರು ರಾಮೇನಹಳ್ಳಿ ಕಟ್ಟೆಮನೆಗೆ ಸೇರಿದವರು. ಪ್ರಸ್ತುತ ಈ ಹಳ್ಳಿ ಕೂಡ ನಾಶ ಹೊಂದಿ ಕಟ್ಟೆಮನೆಯನ್ನು ಮರಡಿಹಳ್ಳಿ ಗೊಲ್ಲರಹಟ್ಟಿಗೆ ಬದಲಾಯಿಸಿಕೊಂಡಿದ್ದಾರೆ.

ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ ಕರಿಓಬೇನಹಳ್ಳಿ ಕಟ್ಟೆಮನೆಗೆ ಸೇರಿದವರೊಂದಿಗೆ ತಾಳವಟ್ಟಿ ಕಟ್ಟೆಮನೆಯವರು ಮತ್ತು ರಾಮೇನಹಳ್ಳಿ ಕಟ್ಟೆಮನೆಯವರು ವೈವಾಹಿಕ ಸಂಬಂಧವನ್ನು ನಡೆಸಬಹುದು. ಆದರೆ ತಾಳವಟ್ಟಿ ಕಟ್ಟೆಮನೆಯವರು ರಾಮೇನಹಳ್ಳಿ ಕಟ್ಟೆಮನೆಯೊಂದಿಗೆ ವೈವಾಹಿಕ ಸಂಬಂಧ ನಿಷೇಧವಾಗಿದೆ. ಕಾರಣ ಸನ್ನೆಯಗೊಲ್ಲರು ತಮ್ಮ ಪ್ರಮುಖ ಆರಾಧ್ಯ ದೈವವಾದ ಕಾಟಮಲಿಂಗವನ್ನು ಹರಿನ ಮತ್ತು ಮೆರನ ಗೊಲ್ಲರಿಗೆ ಬಿಟ್ಟುಕೊಟ್ಟದ್ದಾರೆ. ಹಾಗಾಗಿ ಇವರ ದೇವರು ಒಂದೆಯಾಗುವುದರಿಂದ ವೈವಾಹಿಕ ಸಂಬಂಧ ಏರ್ಪಡುವುದಿಲ್ಲ.

ಕಾಡುಗೊಲ್ಲರಲ್ಲಿ ಕಟ್ಟೆಮನೆಯ ವ್ಯವಸ್ಥೆಯನ್ನು ಜಾರಿಗೆ ತಂದವ ಎತ್ತಪ್ಪನೆಂದು ಹೇಳಬಹುದು. ಕಾಡುಗೊಲ್ಲರ ಸಾಂಸ್ಕೃತಿಕ ನಾಯಕನಾದ ಕಾರಣ ಕಾಡುಗೊಲ್ಲರು ಯಾವ ರೀತಿ ಜೀವನ ನಡೆಸಬೇಕು ಎಂಬುದನ್ನು ಕುರಿತು ಕಾನೂನು ಮಾಡಿ ವ್ಯವಸ್ಥಿತವಾದ ಜೀವನಕ್ರಮಕ್ಕೆ ಕಾರಣಕರ್ತನಾಗಿದ್ದಾನೆ. ಇವನಲ್ಲಿ ನ್ಯಾಯ ತೀರ್ಮಾನ ಮಾಡುವ ಮತ್ತು ಶಿಕ್ಷೆ ವಿಧಿಸುವ ಸಾಮರ್ಥ್ಯಗಳಿದ್ದವು. ಅವನು ಹೇಳಿರುವ ನಿಯಮಗಳನ್ನು ಕಾಳೇಗೌಡ ನಾಗವಾರ ಈ ರೀತಿ ಉಲ್ಲೇಖಿಸಿದ್ದಾರೆ. "ನಿಯಮಗಳನ್ನು ಮೀರಿ ಇತರ ಜಾತಿಗಳೊಡನೆ ಬೆರೆಯುವುದು, ಅಶುದ್ಧವೆಂದು ಪರಿಗಣಿಸಲಾಗಿರುವ ಕೆಲಸ ಕಾರ್ಯಗಳಲ್ಲಿ ತೊಡಗುವುದು, ಗಂಡ ಹೆಂಡಿರು ದುಡುಕಿ ಬೇರಾಗುವುದು, ಹಾದರ, ಕಳ್ಳತನ - ಮುಂತಾದ ಹಲವು ಬಗೆಯ ತಪ್ಪುಗಳಿಗೆ ಎತ್ತಪ್ಪ ಆಯಾ ಅಪರಾಧದ ಪ್ರಮಾಣವನ್ನು ಅನುಸರಿಸಿ ಅನೇಕ ರೀತಿಯ ದಂಡ ಮತ್ತು ಶಿಕ್ಷೆಯ ವಿಧಾನಗಳನ್ನು ಸೂಚಿಸಿದ್ದಾನೆ.

**ಕಟ್ಟೆಮನೆಗಳ ಪ್ರಾಮುಖ್ಯತೆ:** ಕಟ್ಟೆಮನೆಗಳು ಕಾಡುಗೊಲ್ಲರಲ್ಲಿ ಮತ್ತು ಮ್ಯಾಸಬೇಡರಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿವೆ ಎಂದು ಹೇಳಬಹುದು. ಏಕೆಂದರೆ ಹಿಂದೆ ಕಟ್ಟೆಮನೆಗಳ ತೀರ್ಪು ಸುಪ್ರೀಂ ಕೋರ್ಟಿನ ತೀರ್ಪಿಗೆ ಸಮನಾಗಿತ್ತು. ಈ ಕಟ್ಟೆಮನೆಗಳಿಂದಾಗಿ ಕಾಡುಗೊಲ್ಲರು ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬರುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದವೆಂದು ಹೇಳಬಹುದು.

ಓದು ಬರಹ ಅರಿಯದ ಹೊತ್ತಿನಲ್ಲಿ ಮಾತಿಗೆ ಪ್ರಮುಖ ಸ್ಥಾನವನ್ನು ಕಾಡುಗೊಲ್ಲರು ಕೊಟ್ಟಿದ್ದರು. ಅಷ್ಟೇ ಅಲ್ಲ ಆಗ ಅಧಿಕಾರ ವಹಿಸಿಕೊಂಡಿದ್ದ ಗೌಡ, ಪೂಜಾರಿಗಳು ಯಾವುದೇ ಪಕ್ಷಪಾತವಿಲ್ಲದೆ ನ್ಯಾಯ ತಿರ್ಮಾನ ಮಾಡುತ್ತಿದ್ದರು ಎನ್ನುವುದು ಕಂಡುಬರುತ್ತದೆ. ಏಳು ಹಳ್ಳಿಯ ಗೌಡರು ಒಂದು ಸ್ಥಳದಲ್ಲಿರುವ ಕಟ್ಟೆಮನೆಯಲ್ಲಿ ಸೇರುತ್ತಿದ್ದರು. ಕಟ್ಟೆಮನೆಯ ಗೌಡರು ಕೊಡುವ ತೀರ್ಪು ಅಂತಿಮವಾದ ತೀರ್ಪಾಗಿರುತಿತ್ತು.

‘ಇಂದಿಗೂ ಕೂಡ ಬಹುತೇಕ ಕಾಡುಗೊಲ್ಲರು ಪೊಲೀಸ್ ಠಾಣೆ ಮತ್ತು ಕೋರ್ಟ್‌ಗಳನ್ನು ನೋಡಿಲ್ಲವೆಂದೇ ಹೇಳಬೇಕು. ಅಷ್ಟರಮಟ್ಟಿಗೆ ಈ ಸಮುದಾಯದ ಜನರು ಮುಗ್ಧರು, ಪರಸ್ಪರ ಪ್ರೀತಿಯುಳ್ಳವರು.’[೩೦]

**ಕಟ್ಟೆಮನೆಯ ಪ್ರಮುಖ ಉದ್ದೇಶ:** ತಾವು ಪರಂಪರೆಯಿಂದ ನಂಬಿಕೊಂಡು ಬಂದಿರುವ ದೇವರಿಗೆ ತಮಗೆ ಮೈಲಿಗೆ ತಗುಲಬಾರದು ಒಂದು ವೇಳೆ ಮೈಲಿಗೆಯಾದರೆ ಯಾವ ರೀತಿ ಶುದ್ಧಿ ಕಾರ್ಯ ಕೈಗೊಳ್ಳಬೇಕು ಎಂಬುದನ್ನು ಕಟ್ಟೆಮನೆಯ ಗೌಡರು ನಿರ್ಧರಿಸುತ್ತಿದ್ದರು.

‘ಬುಡಕಟ್ಟು ಸಂಪ್ರದಾಯದಂತೆ ಕಾಡುಗೊಲ್ಲರ ನ್ಯಾಯ ಪಂಚಾಯಿತಿಗಳು ನ್ಯಾಯ ನಿರ್ಣಯಗಳನ್ನು ತೆಗೆದುಕೊಳ್ಳುತ್ತವೆ. ನ್ಯಾಯ ನಿರ್ಣಯಗಳು ಹಟ್ಟಿಗಳ ವ್ಯವಹಾರ, ವ್ಯಾಜ್ಯ, ಮದುವೆ, ಹಬ್ಬ, ಜಾತ್ರೆ ಮುಂತಾದ ವಿಷಯಗಳಿಗೆ ಸಂಬಂಧಿಸಿದವುಗಳಾಗಿರುತ್ತದೆ.[೩೧]

ಕಾಡುಗೊಲ್ಲರು ಅನೈತಿಕ ಸಂಬಂಧವನ್ನು ಇಟ್ಟುಕೊಂಡಿರುವುದು ಮತ್ತು ಹಿರಿಯರ ಮಾತನ್ನು ಮೀರಿದಂತಹ ಸಮಯದಲ್ಲಿ ಅವರನ್ನು ಊರಿನಿಂದ ಹೊರಗೆ ಹಾಕಲು ಕಟ್ಟೆಮನೆಗಳು ಆಜ್ಞೆ ಮಾಡುತ್ತಿದ್ದವು. ಕಾಡುಗೊಲ್ಲರಲ್ಲಿ ಚಪ್ಪಲಿಯಿಂದ ಹೊಡೆಸಿಕೊಳ್ಳುವುದು ಮತ್ತು ಹೊಡೆಯುವುದು ಎರಡು ಕೂಡ ಅಪರಾಧವಾಗಿರುತ್ತದೆ. ಹಾಗಾಗಿ ಚಪ್ಪಲಿಯಿಂದ ಹೊಡೆದವನು ಕಟ್ಟೆಮನೆಗೆ ದಂಡವನ್ನು ಕಟ್ಟಿ ಇನ್ನು ಮುಂದೆ ಈ ರೀತಿ ಮಾಡುವುದಿಲ್ಲ ಎಂದು ದೇವರ ಮತ್ತು ಗೌಡರ ಮುಂದೆ ಪ್ರಮಾಣ ಮಾಡಬೇಕಿತ್ತು.

ಅಂತರಜಾತಿಯ ವಿವಾಹವು ಕಾಡುಗೊಲ್ಲರಲ್ಲಿ ನಿಷಿದ್ಧ. ಆದರೂ ಅಂತರ ಜಾತಿ ವಿವಾಹ ಇತ್ತೀಚೆಗೆ ಸಾಮಾನ್ಯವಾಗಿ ಕಾಡುಗೊಲ್ಲರಲ್ಲಿ ನಡೆಯುತ್ತಿರುವುದನ್ನು ನೋಡಬಹುದಾಗಿದೆ. ಅಣ್ಣ ತಮ್ಮಂದಿರ ಜಗಳ, ಗಂಡ ಹೆಂಡತಿಯರ ಜಗಳ, ಹೊಲ, ಮನೆ, ಮುಂತಾದ ಎಲ್ಲಾ ನ್ಯಾಯ ತೀರ್ಮಾನಗಳನ್ನು ಕಟ್ಟೆಮನೆಗಳೇ ಇತ್ಯರ್ಥ ಮಾಡುತ್ತಿದ್ದವು. ಈ ಕಾರಣಕ್ಕಾಗಿ ಗೊಲ್ಲ ಸಮುದಾಯದ ಮೇಲೆ ತಮ್ಮ ಹಿಡಿತವನ್ನು ಇಟ್ಟುಕೊಂಡಿದ್ದವು.

**ಪ್ರಸ್ತುತ ದಿನಗಳಲ್ಲಿ ಕಟ್ಟೆಮನೆಗಳ ಸ್ಥಿತಿಗತಿ:** ಇಂದಿನ ಜಾಗತೀಕರಣ ಹಾಗೂ ಶಿಕ್ಷಣ ಇವು ಅಭಿವೃದ್ಧಿ ಹೊಂದುತ್ತಿದ್ದಂತೆಯೇ ಕಟ್ಟೆಮನೆಗಳು ತಮ್ಮ ಪ್ರಾಮುಖ್ಯತೆ ಕಳೆದುಕೊಳ್ಳತೊಡಗಿದವು. ಇವತ್ತಿನ ಜಗತ್ತಿನಲ್ಲಿ ಬಾಯಿಮಾತಿಗಿಂತ ಬರಹಕ್ಕೆ ಹೆಚ್ಚು ಪ್ರಾಮುಖ್ಯತೆ ಸಿಕ್ಕಿರುವುದರಿಂದ ಕಟ್ಟೆಮನೆಗಳು ಹೆಸರಿಗೆ ಮಾತ್ರ ಕಟ್ಟೆಮನೆಗಳಾಗಿ ಉಳಿದಿವೆ. ಅವುಗಳ ಕೆಲಸಗಳಿಗೆ ಯಾರೂ ಪ್ರಾಮುಖ್ಯತೆ ಕೊಡುವುದಿಲ್ಲ. ಕಾರಣ ಕಾಡುಗೊಲ್ಲರ ಬದುಕು ಬದಲಾಗಿದೆ. ಮೂರು ಕುಲಗಳಲ್ಲಿ ೨೭ ಬೆಡಗುಗಳಾಗಿವೆ. ಹಿರಿಯರು ಹಿರಿತನವನ್ನು ಉಳಿಸಿಕೊಂಡಿಲ್ಲ. ಕಿರಿಯವರು ಹಿರಿಯರನ್ನು ಗೌರವಿಸುತ್ತಿಲ್ಲ. ಆ ಕಾರಣ ಸಂಸ್ಕೃತಿಯಲ್ಲಿ ಬದಲಾವಣೆಯಾಗಿದೆ. ಸಂಪ್ರದಾಯವನ್ನು ಮುರಿದು ಹೊಸದೊಂದು ಪರಂಪರೆಯನ್ನು ಕಟ್ಟುವ ತಾಕತ್ತು ಯುವಕರಿಗೆ ಇದೆ. ಹಾಗಾಗಿ ಕಟ್ಟೆಮನೆಯ ಮೊರೆ ಹೋಗದೆ ಕೋರ್ಟು ಕಛೇರಿಗಳ ಮೂಲಕ ನ್ಯಾಯ ಇತ್ಯರ್ಥ ಮಾಡಿಕೊಳ್ಳುತ್ತಿದ್ದಾರೆ. ಕಾಡುಗೊಲ್ಲರು ಕಾಡಿನಿಂದ ನಾಡಿನ ಕಡೆಗೆ ಮುಖ ಮಾಡಿರುವುದರಿಂದ ಜಗತ್ತಿನ ಮಾಹಿತಿಗಳು ಅವರಿಗೆ ತಿಳಿಯುತ್ತಿವೆ. ವಿದ್ಯಾವಂತರು ಹಟ್ಟಿಯ ವ್ಯವಸ್ಥೆಯನ್ನು ವಿರೋಧಿಸುವುದರಿಂದ ಹಟ್ಟಿಯ ಸ್ಥಿತಿಗಳು ಬದಲಾಗುತ್ತಿವೆ. ದೇವರ ಮತ್ತು ಧರ್ಮದ ಬಗ್ಗೆ ನಂಬಿಕೆ ಇಲ್ಲದಂತಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಸಮೂಹ ಮಾಧ್ಯಮಗಳ ಪ್ರಭಾವದಿಂದ ಕಾಡುಗೊಲ್ಲರು ತಮ್ಮ ಜೀವಂತಿಕೆಯನ್ನು ಕಳೆದುಕೊಳ್ಳುತ್ತಿದ್ದಾರೆಂದು ಹೇಳಬಹುದು. ಬಂಧುಗಳಿಂದ ದೂರ ಹೋಗಿ ತಾನೂ ಬದುಕಿದರಾಯಿತು ಎಂಬ ಸಂಕುಚಿತ ಭಾವನೆ ಕೆಲವರಲ್ಲಿ ಆವರಿಸಿರುವುದನ್ನು ಕಾಣಬಹುದು. ಯುವಕರು ಕಾಡುಗೊಲ್ಲರ ಕಟ್ಟೆಮನೆಗಳ ನ್ಯಾಯ ತೀರ್ಮಾನಗಳನ್ನು ಪ್ರಶ್ನಿಸುವುದರ ಮೂಲಕ ಕೋರ್ಟು ಕಛೇರಿಗಳ ಮೂಲಕ ನ್ಯಾಯ ಪಡೆಯುತ್ತಿದ್ದಾರೆ.

### ಕಾಡುಗೊಲ್ಲರ ಗುಡಿಕಟ್ಟುಗಳು

ಕಾಡುಗೊಲ್ಲರಲ್ಲಿ ಗುಡಿಕಟ್ಟು ಎಂಬ ಪದ ಬಳಕೆಯಲ್ಲಿದೆ. ಗುಡಿಕಟ್ಟು ಸಂಪ್ರದಾಯವನ್ನು ಬುಡಕಟ್ಟು ಸಮುದಾಯಗಳಲ್ಲಿ ಮಾತ್ರ ಗುರುತಿಸಲು ಸಾಧ್ಯವಾಗಿದೆ. ಗುಡಿಕಟ್ಟುಗಳು ಪ್ರಮುಖ ಕಾರಣವೆಂದರೆ ತನ್ನ ಅನನ್ಯತೆ ಮತ್ತು ಸಂಸ್ಕೃತಿ ಹೊಂದಾಣಿಕೆಯನ್ನು ನೆಲೆಗೊಳಿಸುವ ಕಾರಣಕ್ಕಾಗಿ ಗುಡಿಕಟ್ಟು ರೂಪಿತವಾಗಿರುವುದನ್ನು ಗಮನಿಸಬಹುದು. ಗುಡಿ ಎಂದರೆ ದೇವಾಲಯ, ಕಟ್ಟು ಎಂದರೆ ಬಂಧನ ಎಂದು, ಆದರೆ ಈ ರೀತಿ ಒಡೆದು ಈ ಅರ್ಥ ತೇಲಿಕೆಯ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಆದರೆ ಕಾಡುಗೊಲ್ಲರ ಅಭಿಪ್ರಾಯದ ಪ್ರಕಾರ ಗುಡಿಕಟ್ಟೆ ಎಂದರೆ ಇಡೀ ಒಂದು ಸಮುದಾಯ ಒಂದು ಕಡೆ ತನ್ನ ಕಷ್ಟ ಸುಖ ಸಂಪ್ರದಾಯ ಸಂಸ್ಕೃತಿ ಆಚಾರ–ವಿಚಾರ ಮತ್ತು ಅವರ ಅನನ್ಯತೆಯನ್ನು ಸಾರುವಂತಹದ್ದು.

ಆಂಧ್ರದ ಗಡಿಭಾಗದವರು ಕೂಡ ಹಿಂದೆ ಕರ್ನಾಟಕದಲ್ಲಿರುವ ಕಟ್ಟೆಮನೆಗಳಿಗೆ ಬಂದು ಹೋಗುತ್ತಿದ್ದರು. ಆದರೆ ಯಾವುದೋ ಒಂದು ಸಮುದಾಯದಲ್ಲಿ ಬಹಳ ಹಿಂದೆ ನಡೆಯುವ ಪರಂಪರೆ ಜಾರಿಯಲ್ಲಿದ್ದ ಕಾಲದಲ್ಲಿ ನಡೆದುಕೊಂಡು ಕಟ್ಟೆಮನೆಗೆ ಬರುವಾಗ ವಿಪರೀತ ಮಳೆಯಾಗಿ

ಆ ಕಡೆಯಿಂದ ಈ ಕಡೆಗೆ ಬರಲು ನದಿಯ ನೀರು ಅಡ್ಡವಾದ ಕಾರಣ ನಾವು ತಾತ್ಕಾಲಿಕವಾಗಿ ಮದ್ದನಕುಂಟೆಯನ್ನು ಕಟ್ಟೆಮನೆಯನ್ನಾಗಿ ಮಾಡಿಕೊಂಡಿದ್ದೇವೆ ಎಂದು ಹೇಳುತ್ತಾರೆ. ಆದರೆ ವಾಸ್ತವವಾಗಿ ಮೂರು ಕಟ್ಟೆಮನೆಗಳು ಅನೇಕ ಗುಡಿಕಟ್ಟುಗಳನ್ನು ಒಳಗೊಂಡಿವೆ. ಈ ಹಿಂದೆ ಒಂದೊಂದು ಕಟ್ಟೆಮನೆ ಏಳು ಗುಡಿಕಟ್ಟುಗಳನ್ನು ಹೊಂದಿದ್ದವು. ಆದರು ಇತ್ತೀಚೆಗೆ ಜನಸಂಖ್ಯೆ ಹೆಚ್ಚಾಗಿರುವುದರಿಂದ ಗುಡಿಕಟ್ಟೆಗಳ ಸಂಖ್ಯೆಯು ಅಧಿಕವಾಗಿವೆ. ಕಾಡುಗೊಲ್ಲರ ಬೆಡಗುಗಳಿಗೆ ಅನುಗುಣವಾಗಿ ಅವರ ಕಟ್ಟೆಮನೆಗಳು ಸೃಷ್ಟಿಯಾಗಿವೆ. ಇದರ ಜೊತೆಗೆ ಗುಡಿಕಟ್ಟುಗಳು ಸೃಷ್ಟಿಯಾಗಿವೆ.

### ೩.೯. ಕಾಡುಗೊಲ್ಲರ ಸಂಸ್ಕೃತಿ ದೈವ ಮತ್ತು ಆಚರಣೆಗಳು

**ಕಾಡುಗೊಲ್ಲರ ಬುಡಕಟ್ಟು ದೇವರುಗಳು:** ಕಾಡುಗೊಲ್ಲರಲ್ಲಿ ಲೆಕ್ಕವಿಲ್ಲದಷ್ಟು ದೇವರುಗಳಿವೆ. ಆದರೆ ಸಂಶೋಧಕರ ಕಣ್ಣುಗಳು ಕೇವಲ ಜುಂಜಪ್ಪ, ಎತ್ತಪ್ಪ, ಕಾಟಯ್ಯ, ಚಿತ್ತಯ್ಯ, ಮಾರಕ್ಕ, ಕ್ಯಾತಪ್ಪ ಮತ್ತು ಪಾತಪ್ಪ ದೇವರುಗಳನ್ನಷ್ಟೆ ಗುರುತಿಸಿವೆ. ಆದರೆ ಇನ್ನು ಸಂಶೋಧನೆಗೆ ಒಳಗಾಗಿರುವ ಸಾಕಷ್ಟು ದೇವರುಗಳಿವೆ. ಉದಾ: ವೀರ ಮಂಚಣ್ಣ, ವೀರ ಕೆಂಪಣ್ಣ, ವೀರ ಚಿಕ್ಕಣ್ಣ, ವೀರ ನಾಗಣ್ಣ, ವೀರಬಡಪ್ಪ, ವೀರಸಾತಣ್ಣ, ವೀರಯರ್ರಣ್ಣ, ವೀರ ಬೊಮ್ಮಣ್ಣ, ವೀರ ಜಂಪಣ್ಣ, ವೀರ ಗಟ್ಟಪ್ಪ, ಕರಡಿಬುಳ್ಳಪ್ಪ, ವೀರ ಓಬಣ್ಣ ವೀರಸಿಂಪಣ್ಣ, ವೀರ ತಿಮ್ಮಣ್ಣ, ಬೆಮ್ಮರೆ ಹೇಳುವುದಾದರೆ ಹಟ್ಟಿಗೆ ಒಬ್ಬ ಈರಗಾರ ಸಿಗುತ್ತಾನೆ. ಈ ಎಲ್ಲಾ ಈರಗಾರರು ಸಾಂಸ್ಕೃತಿಕ ನಾಯಕರಾಗಿದ್ದಾರೆ. ಹಾಗಾಗಿ ಕಾಡುಗೊಲ್ಲರ ಬಗ್ಗೆ ಇನ್ನೂ ಸಾಕಷ್ಟು ರೀತಿಯ ಅಧ್ಯಯನಗಳಿಗೆ ಅವಕಾಶಗಳಿವೆ. ಈ ದೇವರುಗಳಲ್ಲಿ ಆಡಂಬರದ ದೇವರುಗಳಿಲ್ಲ ಅವುಗಳಿಗೆ ಐಶಾರಾಮಿಯ ಹೂವುಗಳು ಬೇಕಿಲ್ಲ ತಂಕಟೆ ಗಿಡ ಹೂವಾದರೂ ಸರಿಯೆ, ಎಕ್ಕಗಿಡದ ಹೂವಾದರೂ ಸರಿಯೆ. ಕಾಡುಗೊಲ್ಲರು ಯಾರಿಂದಲಾದರೂ ಬದಲಾದರೂ ತಮ್ಮ ಸಾಂಸ್ಕೃತಿಕ ವೀರರ ಮೌಲ್ಯಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವುದಿಲ್ಲ.

**ಕಾಟಯ್ಯ:** ಕಾಡುಗೊಲ್ಲರ ಮೂಲಪುರುಷರಲ್ಲಿ ಮೊದಲನೆಯವನು. ಸಂದಮುಕ್ತಿ ವಂಶಕ್ಕೆ ಅಮಾವಾಸ್ಯೆಯ ದೇವರಾಗಿದ್ದನೆ. ಕಾಡುಗೊಲ್ಲರಲ್ಲಿ ಹಿಂದೆ ಎರಡು ಬೆಡಗುಗಳಿದ್ದವು. ಅವುಗಳೆಂದರೆ ಸಂದಮುಕ್ತಿ ಚಂದ್ರನ ವಂಶಸ್ಥರು, ಚಿತ್ತಮುಕ್ತಿ ಸೂರ್ಯನ ವಂಶಸ್ಥರು. ಈ ಇಬ್ಬರು ಮೂಲ ಪುರುಷರು. ಆಂಧ್ರದ ಬೆಸ್ತರಹಳ್ಳಿ ಕಾವಲಿನಲ್ಲಿ ಜನ್ಮ ತಾಳುತ್ತಾರೆ. ಇವರ ಜನನ ಕೂಡ ಶಿವನ ವರದಿಂದ ಆಗುತ್ತದೆ. ಬೆಸ್ತರಹಳ್ಳಿ ಕಾವಲಿಗೆ ಬೆಂಕಿಬಿದ್ದಂತಹ ಸಮಯದಲ್ಲಿ ಆ ಬೆಂಕಿಯನ್ನು ನಂದಿಸಲು ಬಂದ ಶಿವನ ಬೆವರಿನಿಂದ ಕಾಡುಗೊಲ್ಲರ ಮೂಲಪುರುಷರಾದ ಕಾಟಯ್ಯ, ಚಿತ್ತಯ್ಯ ಮತ್ತು ಓಬಳಪತಿ ಈ ಮೂರು ಜನರ ಜನನವಾಗುತ್ತದೆ. ಆನಂತರ ಈ ಮೂರು ಜನರಿಗೆ ಶಿವನು ಚಿತ್ತದುರ್ಗದ ದೊರೆಯಾಗುವಂತೆ ಮಾಡುತ್ತಾನೆ. ಕಾಟಯ್ಯ ಮತ್ತು ಓಬಳಪತಿ ಮದುವೆ ಆಗದೆ ಬ್ರಹ್ಮಚಾರಿಗಳಾಗಿ ಉಳಿಯುತ್ತಾರೆ. ಚಿತ್ತಯ್ಯನಿಗೆ ಚಿತ್ರಗಿರಿಯ ರಾಜ್ಯದ ಪಟ್ಟಾಭಿಷೇಕ ಮಾಡಿ ಬ್ರಾಹ್ಮಣ ಬಮ್ಮಯ್ಯನ ಮಗಳಾದ ಗಂಗರಮಳಮ್ಮನನ್ನು ಚಿತ್ತಯ್ಯನಿಗೆ ಮದುವೆ ಮಾಡುತ್ತಾರೆ. ನಂತರ ಕಾಡುಗೊಲ್ಲರ ಸಂಪ್ರದಾಯದ ಪ್ರಕಾರ ಬೇಟೆ ಆಡಲು ಹೋದಂತಹ ಸಮಯದಲ್ಲಿ ಶಿವ ಪಾರ್ವತಿಯರು ಕೊಟ್ಟಿರುವ

ಬಂಗಾರದ ಗೊಡಗು(ಛತ್ರಿಕೆ) ತಿರುಗಿಣಿ ಪಟ್ಟಣವನ್ನು ಆಳುವ ಯರಿಜಿನ್ನಿ, ಮರಿಜಿನ್ನರ ಪಾಲಾಗುತ್ತದೆ. ಅವರ ಮೇಲೆ ಯುದ್ಧ ಮಾಡಿ ಪುನಃ ಗೊಡಗು ಪಡೆದುಕೊಂಡು ತಿರುಗಿಣಿ ಪಟ್ಟಣವನ್ನು ಹಾಳು ಮಾಡುತ್ತಾರೆ. ಆ ನಂತರ ಬೇಟೆಯಾಡಲು ಜರಿಮಲೆಗೆ ಹೋಗುತ್ತಾರೆ. ಅಲ್ಲಿ ಮಂಡಕಪ್ಪೆ ಇವರ ಜೂಲು ನಾಯಿಗಳನ್ನು ತಿನ್ನುತ್ತದೆ. ಏಳು ಊರಿಗೆ ವಿಸ್ತಾರವಾಗಿ ಮಲಗಿಕೊಂಡಿರುತ್ತದೆ. ಅದರ ಜೊತೆಗೆ ಯುದ್ಧ ಮಾಡುವುದು ಕಷ್ಟವಾಗುತ್ತದೆ. ಆಗ ಕಾಟಯ್ಯ ಉಪಾಯ ಮಾಡಿ ಕಪ್ಪೆಯನ್ನು ನೀರಿನಿಂದ ಹೊರಗೆ ಬರುವಂತೆ ಮಾಡಿ ಅದು ನೀರಿಲ್ಲದೆ ಒದ್ದಾಡುತ್ತಿರುವಾಗ ಅದನ್ನು ಕೊಲ್ಲುತ್ತಾರೆ. ಇದಾದ ನಂತರ ಯರಮಲ ಬೇಟೆಯಾಡಲು ಹೋದಾಗ ಅದು ಮೂನ್ನುರು ಎಕರೆ ಗದ್ದೆಯನ್ನು ಒಂದೇ ಬಾರಿಗೆ ಮೇಯುತ್ತದೆ. ನಾಲ್ಕು ಕೆರೆಯ ನೀರನ್ನು ಒಂದೆ ಬಾರಿಗೆ ಕುಡಿಯುತ್ತದೆ. ಇಂತಹ ಪೌರುಷ ಹೊಂದಿರುವ ಮೊಲ ಅದಾಗಿರುತ್ತದೆ. ಅದನ್ನು ಬೇಟೆ ಆಡುವುದು ಕಷ್ಟವಾಗುತ್ತದೆ. ಅನಂತರ ಗಂಗೆಮಾಳಮ್ಮ ಸಾಕಿಕೊಂಡಿರುವ ಮೂಳು ನಾಯಿ ಮತ್ತು ಗಿಡುಗಗಳು ಬಂದು ಚಿತ್ತಯ್ಯನಿಗೆ ಜಯ ತಂದುಕೊಡುತ್ತವೆ. ಇದರಿಂದ ಚಿತ್ತಯ್ಯನಿಗೆ ಸಂತೋಷವಾಯಿತು ಎನ್ನುವುದಕ್ಕಿಂತ ಕೋಪವೇ ಹೆಚ್ಚಾಯಿತು. ಏಕೆಂದರೆ ಬೇಟೆಗೆ ಹೊರಟಂತಹ ಸಮಯದಲ್ಲಿ ಗಂಗೆಮಾಳಮ್ಮ ಆರತಿ ಬೆಳಗಲು ಎದುರು ಬಂದರೆ ಕರೆತರಲು ಅಪಶಕುನ ಎಂದು ತಿಳಿದು ಆಕೆಯ ತಲೆಗೆ ಸುಳಾಗಾಯಿಂದ ಹೊಡೆದು ಬಂದಿರುತ್ತಾನೆ. ಅವಳ ಬಗ್ಗೆ ತುಚ್ಛವಾಗಿ ಮಾತನಾಡುತ್ತಾನೆ ಆದರೆ ಈಗ ಏಳು ಗೂಡಿನ ನಾಯಿಗಳು ಬಂದು ಮೊಲದ ಆಹಾರವಾಗಿವೆ ಇಂತಹ ಸಮಯದಲ್ಲಿ ಮಾಳಮ್ಮ ಸಾಕಿರುವ ನಾಯಿ ಗಿಡುಗ ಮೊಲವನ್ನು ಬೇಟೆ ಆಡಿವೆ. ಇದರಿಂದ ಅಸಮಾಧಾನಗೊಂಡಿರುತ್ತಾನೆ. ಚಿತ್ತಯ್ಯನಂತಹ ತಮ್ಮ ಊರಿಗೆ ಬಂದು ಮಾಳಮ್ಮನನ್ನು ಅವಳ ತವರಿಗೆ ಕಳುಹಿಸುತ್ತಾನೆ. ಹೆಂಡತಿಯೊಂದಿಗೆ ಸಂಸಾರವನ್ನು ಮಾಡುವುದಿಲ್ಲ ಚಿತ್ತಯ್ಯ ಆನಂತರ ತಮ್ಮ ವಂಶವನ್ನು ಉದ್ಧಾರ ಮಾಡುವ ಸಲುವಾಗಿ ಹಸುವಿನ ಹೊಟ್ಟೆಯಲ್ಲಿ ಕಾಡುಗೊಲ್ಲರ ಜನನವಾಗುತ್ತದೆ. ಇವರೆ ಮುಂದೆ ಸನ್ನಮುಕ್ತಿಯಾಗಿ ಮತ್ತು ಚಿತ್ತಮುಕ್ತಿಯಾಗಿ ಕಾಟಯ್ಯ ಮತ್ತು ಚಿತ್ತಯ್ಯನನ್ನು ಅಮಾವಾಸ್ಯೆ ದೇವರಾಗಿ ಮಾಡಿಕೊಂಡರು.

**ಎತ್ತಪ್ಪ:** ಎತ್ತಪ್ಪ ಎತ್ತು ತುಪ್ಪದಲ್ಲಿ ಹುಟ್ಟಿದ ಎತ್ಯೆಗೌಡ ಎಂದು ಕರೆಯುತ್ತಾರೆ. ಈತನ ಸಮಾಧಿ ತಳುಕಿನ ಗುಡ್ಡದಲ್ಲಿದೆ. ಕಾಡುಗೊಲ್ಲರಿಗೆ ನೇಮಗಳನ್ನು ಕಲಿಸಿದವನು ಎತ್ತಪ್ಪ. ಮಾರನಗೊಲ್ಲರ ಬೆಡಗಿಗೆ ಸೇರಿದ ಎತ್ತಪ್ಪ. ಹೆಜ್ಜೆ ಹಾಕಲು ಮಲ್ಲಮ್ಮನನ್ನು ಮದುವೆಯಾಗುತ್ತಾನೆ. ಎತ್ತಪ್ಪನ ತಂದೆ ತಾಯಿಗಳ ವಿವರ ತಿಳಿದುಬಂದಿಲ್ಲ. ಶಿವನ ಕಾಮಧೇನು ಹಸುವಿನ ತುಪ್ಪದಲ್ಲಿ ಹುಟ್ಟಿದನೆಂದು ತಿಳಿವಳಿಕೆದಾರರು ಹೇಳುತ್ತಾರೆ. ಆ ನಂತರ ಅಂಬೇರಾಯರು ಮತ್ತು ತುಂಬೆರಾಯರು ತಮ್ಮ ದನಗಳನ್ನು ಎತ್ತಪ್ಪನಿಗೆ ಬಿಟ್ಟುಕೊಟ್ಟು ಕೈಲಾಸ ಸೇರಿಕೊಳ್ಳುತ್ತಾರೆ. ನಂತರ ದನಗಳನ್ನು ಕಾದುಕೊಂಡಿದ್ದ ಎತ್ತಪ್ಪನಿಗೆ ಬರಗಾಲ ಒದಗಿದುದರಿಂದ ದನಗಳನ್ನು ಸಾಕಿಕೊಳ್ಳುವುದು ಕಷ್ಟವಾಗುತ್ತದೆ. ಇದರಿಂದಾಗಿ ದನಗಳನ್ನು ಸೊಂಡೂರು ಕಾವಲಿಗೆ ಹೊಡೆಯುತ್ತಾನೆ. ಅಪ್ಪಿ ಸೊಂಡೂರು ಬಮ್ಮನ ಸೂಳೆ ಗುಡ್ಡದ ಬೋರಿ ಎತ್ತಪ್ಪನನ್ನು ಇಷ್ಟ ಪಡುತ್ತಾಳೆ. ಅವಳ ಬಯಕೆಗಳನ್ನು ತಿರಸ್ಕರಿಸುತ್ತಾನೆ. ಇದರಿಂದ ಕೋಪಕೊಂಡ

ಗುಡ್ಡದ ಬೋರಿ ಸೊಂಡೂರು ಬಮ್ಮನಲ್ಲಿ ಎತ್ತಪ್ಪನ ತಲೆಯನ್ನು ತೆಗೆದುಕೊಂಡು ಬರಬೇಕೆಂದು ಆಜ್ಞೆ ಮಾಡುತ್ತಾಳೆ ಸೊಂಡೂರಿನ ಮ್ಯಾಸಬೇಡರೆಲ್ಲ ಒಂದಾಗಿ ಯುದ್ಧಕ್ಕೆ ಬಂದರೂ ಎತ್ತಪ್ಪ ಸೋಲುವುದಿಲ್ಲ. ಇನ್ನೇನು ಯುದ್ಧ ಮುಗಿಯಿತು ಎಂದು ತಿಳಿದು ಹಳ್ಳದಲ್ಲಿ ನೀರು ಕುಡಿಯುವಂತಹ ಸಮಯದಲ್ಲಿ ಎತ್ತಪ್ಪನ ತಲೆಯನ್ನು ಸೊಂಡೂರ ಬಮ್ಮ ಕಡಿಯುತ್ತಾನೆ. ನಂತರ ಎತ್ತಪ್ಪನ ತಲೆಯನ್ನು ತೆಗೆದುಕೊಂಡು ಹೋಗಿ ಗುಡ್ಡದ ಬೋರಿಗೆ ಕೊಟ್ಟಾಗ ಗುಡ್ಡದ ಬೋರಿಯು ಎತ್ತಪ್ಪನ ತಲೆಯನ್ನು ಬಚ್ಚಲಲ್ಲಿ ಇಟ್ಟುಕೊಂಡು ಸ್ನಾನ ಮಾಡುತ್ತಾಳೆ. ಎತ್ತಪ್ಪನ ಮರಣ ವಾರ್ತೆಯನ್ನು ದನಗಳಿಂದ ತಿಳಿದ ಎತ್ತಪ್ಪನ ಅಳಿಯ ವಲಗಾನಿ ಸೊಂಡೂರಿಗೆ ಹೋಗಿ ಗುಡ್ಡದ ಬೋರಿಯಿಂದ ತಲೆಯನ್ನು ತೆಗೆದುಕೊಂಡು ಬಂದು ಮುಂಡಕ್ಕೆ ಸೇರಿಸಿದಾಗ ಎತ್ತಪ್ಪ ಮಾತನಾಡುತ್ತಾನೆ. ತಳುಕಿನ ಗುಡ್ಡದಲ್ಲಿ ಸಮಾಧಿ ಮಾಡುವಂತೆ ತನ್ನ ಅಳತಯನಿಗೆ ಹೇಳುತ್ತಾನೆ. ಅದರಂತೆ ವಲಗಾನಿ ತಳುಕಿನ ಗುಡ್ಡದಲ್ಲಿ ಎತ್ತಪ್ಪನ ಸಮಾಧಿಯನ್ನು ಮಾಡಿದನು. ಅಂದಿನಿಂದ ಇಂದಿನವರೆಗೂ ಎತ್ತಪ್ಪನ ಒಕ್ಕಲು ಶಿವರಾತ್ರಿ ತಿಂಗಳಲ್ಲಿ ತಳುಕಿನ ಗುಡ್ಡಕ್ಕೆ ಎತ್ತಪ್ಪನನ್ನು ಮಂಚದಲ್ಲಿ ಕೂರಿಸಿಕೊಂಡು ತೆಗೆದುಕೊಂಡು ಹೋಗಿ ಪೂಜೆ ಮಾಡುತ್ತಾರೆ. ಎತ್ತಪ್ಪನ ಮಂಚ ಹೊರುವುದಕ್ಕೆ ಸೊನ್ನೆಯ ಗೊಲ್ಲರ ಹುಡುಗ ಇರಲೇಬೇಕು.

**ಜುಂಜಪ್ಪ:** ಎತ್ತಪ್ಪನ ನಂತರ ಮಾರನಗೊಲ್ಲರ ಸಾಂಸ್ಕೃತಿಕ ನಾಯಕ ಜುಂಜಪ್ಪ. ಜುಂಜಪ್ಪನದು ಮೂರು ತಲೆಮಾರಿನ ಜೀವನ ಚರಿತ್ರೆ. ಈತನದು ಒಂದು ಮಹಾಕಾವ್ಯವು ಇದೆ. ಮೊದಲನೆಯ ತಲೆಮಾರಿನಲ್ಲಿ ದೇವರ ದಯಮಾರನದು, ಎರಡನೆಯ ಕೆಂಗುರಿ ಮಲೆಗೊಂಡನದು, ಮೂರನೆಯದು ವೀರ ಜುಂಜಪ್ಪನದು. ಮೊದಲನೆಯ ತಲೆಮಾರಿನ ನಾಯಕನಾದ ದೇವರ ದಯಾಮಾರನಿಗೆ ಮುಪ್ಪು ಬಂದರೂ ಮದುವೆ ಆಗಿರಲಿಲ್ಲ, ಹಾಗೆ ಇವನಿಗೆ ಮದುವೆ ಆಗದ ಹೊರತು ಅವನ ಆರು ಜನ ಅಣ್ಣಂದಿರಿಗೆ ಮಕ್ಕಳಾಗುವುದಿಲ್ಲ ಎಂದು ಗೌರಸಮುದ್ರದ ಮಾರಮ್ಮ ಕಣಿ ಹೇಳುತ್ತಾಳೆ. ಇದರಿಂದಾಗಿ ಆರು ಜನ ಅಣ್ಣಗಳು ದೇವರ ದಯಾಮಾರನ ಹಾವಿನ ಗೂಡಿನ ಹತ್ತಿರ ಹೋಗಿ ಮದುವೆಗೆ ಒಪ್ಪಿಸಿ ಬರುತ್ತಾರೆ. ಕಂಬಕ್ಕ ಎನ್ನುವ ಹೆಣ್ಣನ್ನು ಯರಬಳ್ಳಿ ಗೊಲ್ಲರಹಟ್ಟಿಯಲ್ಲಿ ಗೊತ್ತು ಮಾಡಿರುತ್ತಾರೆ. ಮದುವೆ ಆಗಲೆಂದು ಬಂದ ದೇವರ ದಯಾಮಾರ ತನ್ನ ಬಾಕು ಬಿಟ್ಟು ರಾತ್ರೋರಾತ್ರಿ ಹೊರಟು ಹೋಗಿರುತ್ತಾನೆ. ಅವನ ಬಾಕಿಗೆ ಕಂಬಕ್ಕನನ್ನು ಮದುವೆ ಮಾಡುತ್ತಾರೆ. ಮದುವೆಯಾದ ನಂತರ ಕಂಬಕ್ಕ ತನ್ನ ಗಂಡನಾದ ದೇವರ ದಯಾಮಾರನ ಹಾವಿನ ಗೂಡಿನಲ್ಲಿ ವಾಸವಾಗಿರುವಂತಹ ಸಮಯದಲ್ಲಿ ಕಂಬಕ್ಕ ಗರ್ಭ ಧರಿಸುತ್ತಾಳೆ. ಆರು ಮೂರು ಒಂಬತ್ತು ತಿಂಗಳು ತುಂಬಿದ ನಂತರ ಕೆಂಗುರಿ ಮಲೆಗೊಂಡನನ್ನು ಈ ಭೂಮಿಗೆ ಬಿಟ್ಟು ಗಂಡ ಹೆಂಡತಿಯರು ಸತ್ತುಹೋಗುತ್ತಾರೆ. ಇದರಿಂದಾಗಿ ಮಗು ಕಾಡಿನಲ್ಲಿ ತಬ್ಬಲಿಯಾಗುತ್ತದೆ ನಂತರ ಗೌರಸಮುದ್ರದ ಮಾರಮ್ಮ ಕಣಿ ಹೇಳಲು ಬಂದು ದೇವರ ದಯಾಮಾರನ ಮಗ ಅಡವಿಯಲ್ಲಿ ತಬ್ಬಲಿಯಾಗಿರುವ ಬಗ್ಗೆ ಹೇಳುತ್ತಾಳೆ. ಅದರಿಂದ ಸಮಾತೋಷಗೊಂಡ ದೇವರ ದಯಾಮಾರನ ಅಣ್ಣಂದಿರು ಮತ್ತು ಅವನ ತಂಗಿ ಚಿತ್ತಮ್ಮ ಅಡವಿಯಲ್ಲಿ ಮಗುವನ್ನು ಹುಡುಕುತ್ತಾ ಬರುತ್ತಿರುತ್ತಾರೆ. ಆಗ ಆಲದ ಮರದ ಕೊಂಬೆಯ ಮೇಲೆ ಮಗು ಇರುವುದು ಕಂಡುಬರುತ್ತದೆ. ಆ ಮಗು ಬಡ ಚಿತ್ತಮ್ಮ ಎತ್ತಿಕೊಂಡ ನಂತರ ಅವಳಿಗೆ

ಮೊಲೆಯಲ್ಲಿ ಹಾಲು ಉಕ್ಕಿಹರಿಯುತ್ತವೆ. ಆ ಮಗುವಿಗೆ ಚಿತ್ರದೇವರ ಗುಡಿಯ ಮುಂದೆ ಜೆನ್ನಿಗೆ ಹೊಯ್ದು ಕೆಂಗುರಿ ಮಲೆಗೌಡ ಎಂದು ಕರೆದರು. ಕೆಂಗುರಿ ಮಲೆಗೌಡ ಹಟ್ಟಿ ಸೇರಿಕೊಂಡ ನಂತರ ಅವನ ದೊಡ್ಡಪ್ಪರಿಗೆ ಆರು ಜನರಿಗೂ ಮಕ್ಕಳಾಗುತ್ತವೆ. ಆಗ ಅವರು ಕೆಂಗುರಿ ಮಲೆಗೌಡನನ್ನು ಕಾಡಿನಲ್ಲಿ ಬಿಟ್ಟು ಹೋಗುತ್ತಾರೆ. ಆ ಮಗು ಕಾಡಿನ ವಾಸಿಗಳಾದ ಅಂಬೆರಾಯ ತುಂಬೆರಾಯರಿಗೆ ಸಿಗುತ್ತದೆ. ಆ ಹುಡುಗನ್ನು ಎತ್ತಿಕೊಂಡು ದನುವಿನ ಗೂಡಿಗೆ ಬಂದರೆ ಅಲ್ಲಿ ದನಗಳು ಮಾಯವಾಗಿರುತ್ತವೆ. ಆ ದನಗಳನ್ನು ಹುಡುಕಿಕೊಂಡು ಬರುವಂತಹ ಸಮಯದಲ್ಲಿ ಆ ದನಗಳು ಹೊನ್ನಟ್ಟಿ ಹಾಲೇಗೌಡನ ಅವರೆ ಹೊಲವನ್ನು ಮೇಯುತ್ತಿದರಿಂದ ಹೊನ್ನಟ್ಟಿ ಹಾಲೇಗೌಡನ ಆಳುಗಳು ಅವುಗಳನ್ನು ದೊಡ್ಡಿಗೆ ಕೂಡಿರುವ ವಿಷಯ ತಿಳಿದುಬರುತ್ತದೆ. ಹಾಗಲವಾಡಿಗೆ ಹೋಗಿ ಹೊನ್ನಟ್ಟಿ ಹಾಲೇಗೌಡನನ್ನು ದನಗಳು ಬಿಟ್ಟುಕೊಂಡುವಂತೆ ಕೇಳಿದಾಗ ಹೊನ್ನಟ್ಟಿ ಹಾಲೇಗೌಡನಿಗೆ ಮಕ್ಕಳಿರುವುದಿಲ್ಲ ಹಾಗಾಗಿ ಇವರ ಬಳಿ ಇರುವ ಮಲೆಗೌಡನನ್ನು ಕೇಳುತ್ತಾನೆ. ಅವನನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನಾಗಿ ನೋಡಿಕೊಂಡರೆ ಕೊಡುವುದಾಗಿ ಹೇಳುತ್ತಾರೆ. ಅದಕ್ಕೆ ಹೊನ್ನಟ್ಟಿ ಹಾಲೇಗೌಡ ಮತ್ತು ಜಾನಕಲ್ಲು ದೊಡ್ಡಕ್ಕ ಗೊಲ್ಲ ಪರಿವರ್ತಿತರಾಗುತ್ತಾರೆ. ಆಗ ಆ ಹುಡುಗನ್ನು ಹೊನ್ನಟ್ಟಿ ಹಾಲೇಗೌಡ ಮತ್ತು ದೊಡ್ಡಕ್ಕನ ಮಡಿಲಿಗೆ ಹಾಕಿ ಅಲ್ಲಿಂದ ದನಗಳನ್ನು ಹೊಡೆದುಕೊಂಡು ಬರುತ್ತಾರೆ. ಈ ಕಡೆ ಕೆಂಗುರಿ ಮಲೆಗೌಡ ದಿನಕ್ಕೊಂದು ಚಂದವಾಗಿ ತಂದೆ ತಾಯಿಯ ಹಾರೈಕೆಯಲ್ಲಿ ಬೆಳೆಯುತ್ತಿರುತ್ತಾನೆ. ಆಗ ದೊಡ್ಡಕ್ಕ ಗರ್ಭ ಧರಿಸಿ ದೊಡ್ಡಾಲ ಕಿರಿಹಾಲರಿಗೆ ಜನ್ಮ ನೀಡುತ್ತಾಳೆ ಇವರು ಹುಟ್ಟಿದ ಮೂರು ವರ್ಷಕ್ಕೆ ದೊಡ್ಡಾಲಮ್ಮ ಮತ್ತು ಸಣ್ಣಾಲಮ್ಮ ಹುಟ್ಟುತ್ತಾರೆ. ಆ ಸಮಯಕ್ಕಾಗಲೇ ಕೆಂಗುರಿ ಮಲೆಗೌಡ ದನಗಳನ್ನು ಹೊಡೆದುಕೊಂಡು ದೇಶಾಂತರ ಹೊರಟು ಹೋಗುತ್ತಾನೆ. ಆಗ ದೊಡ್ಡಾಲ ಚಿಕ್ಕಾಲರು ಪ್ರಾಯಕ್ಕೆ ಬರುತ್ತಾರೆ. ಆಗ ಊರಿನವರೆಲ್ಲ ಹೊನ್ನಟ್ಟಿ ಹಾಲೇಗೌಡನಿಗೆ ಮಕ್ಕಳಿಗೆ ಮದುವೆ ಮಾಡುವಂತೆ ಹೇಳುತ್ತಾರೆ. ಇದರಿಂದಾಗಿ ಹೊನ್ನಟ್ಟಿ ಹಾಲೇಗೌಡ ದೊಡ್ಡ ಮಗನಿಗೆ ಮದುವೆ ಮಾಡುವವರೆಗೆ ಚಿಕ್ಕ ಮಕ್ಕಳಿಗೆ ಮದುವೆ ಮಾಡುವುದಿಲ್ಲ ಎಂದು ಹೇಳಿ ಕಂಬೇರಹಟ್ಟಿಗೆ ಹೋಗಿ ಚೆನ್ನಮ್ಮನೊಂದಿಗೆ ಕೆಂಗುರಿ ಮಲೆಗೌಡನ ಮದುವೆ ಮಾಡಿಸುತ್ತಾನೆ. ಗೌರಸಮುದ್ರದ ಮಾರಮ್ಮ ಕೊಟ್ಟಿರುವ ವರದಿಂದಾಗಿ ಜುಂಜಪ್ಪ, ಮಾರಣ್ಣ, ಮೈಲಣ್ಣ ಮತ್ತು ಮಾರಕ್ಕ ಎಂಬ ನಾಲ್ಕು ಜನ ಮಕ್ಕಳು ಹುಟ್ಟುತ್ತಾರೆ. ಈ ಮಕ್ಕಳು ಹುಟ್ಟಿ ತಾಯಿ ಚೆನ್ನಮ್ಮನನ್ನು ಅನುಮಾನ ಪಟ್ಟಾಗ ತಾನು ಪತಿವ್ರತೆಯೆಂದು ಸತ್ತಿರುವ ಗಂಡನಿಂದ ಕರೆಸಿಕೊಳ್ಳುತ್ತಾಳೆ. ಅನಂತರ ಜುಂಜಪ್ಪ ಮತ್ತು ಅವರ ಸೋದರ ಮಾವಂದಿರ ನಡುವೆ ದ್ವೇಷಾಸೂಯೆಗಳು ಶುರುವಾಗುತ್ತವೆ. ಇದಕ್ಕೆ ಕಾರಣ ಜುಂಜಪ್ಪನಿಗೆ ಸೋದರಮಾವಂದಿರು ಕೊಟ್ಟಿರುವ ದನಗಳು ಏಲು ಗೂಡಿನ ದನಗಳಾಗಿರುತ್ತವೆ. ಆದರೆ ಅವನ ಸೋದರಮಾವಂದಿರ ದನಗಳು ಮಾತ್ರ ಹೆಚ್ಚುವಳಿಯಾಗಿರುವುದಿಲ್ಲ. ಇದರಿಂದಾಗಿ ಪಾಪಿ ಪರದೇಶಿ ನಿಮ್ಮ ತಂಗಿಯೆಂದು ಏಳು ಕರುಗಳನ್ನು ಕೊಟ್ಟರೆ ಜುಂಜಪ್ಪ ನಮ್ಮ ದನಗಳನ್ನೆಲ್ಲಾ ತಮ್ಮವೆಂದು ಹೇಳುತ್ತಾನೆಂದು ಜುಂಜಪ್ಪನ ದನಗಳಿಗೆ ಸಾಣಿಕೆರೆಯ ಪುಟ್ಟಣ್ಣನಿಂದ ಮಾಟ ಮಾಡಿಸುತ್ತಾರೆ. ಆಗ ಗೌರಸಮುದ್ರದ ಮಾರಮ್ಮ ಎಲ್ಲಾ ಮಾರಿಯರನ್ನು ಕರೆದುಕೊಂಡು ಬಂದು ಕೆರೆಗೆ ಕಡಗಾಲು ಹಾಕಿ ಕಡೆದು ವಿಷವನ್ನು ಹೊರತೆಗೆದು

ನೀರನ್ನು ಶುದ್ಧೀಕರಿಸುತ್ತಾರೆ. ನಂತರ ಬರಗಾಲ ಬಂದು ತಮ್ಮ ದನಗಳನ್ನು ನಿಡಗಲ್ಲಿ ದೊರೆಯಾದ ರಂಗಣ್ಣನ ಕಾವಲಿಗೆ ಬಿಟ್ಟಾಗ ಸೋದರ ಮಾವಗಳ ಛಾಡಿಮಾತಿನಿಂದಾಗಿ ಜುಂಜಪ್ಪ ಇಲ್ಲದ ಸಮಯದಲ್ಲಿ ಬಡಮೆಲನನ್ನು ಚೇಳೂರ ಕೋಟೆಯಲ್ಲಿ ಕಟ್ಟಿ ಹಾಕುತ್ತಾರೆ. ವಿಷಯವನ್ನು ಕನಸಿನಿಂದ ತಿಳಿದ ಜುಂಜಪ್ಪ ಕೆಂಡಗಣ್ಣು ಬಿಟ್ಟುಕೊಂಡು ಬಂದು ಚೇಳೂರನ್ನು ನೋಡಿದರೆ ಚೇಳೂರೆ ನಿಂದು ಉರಿಯುತ್ತದೆ ಅಷ್ಟೊಂದು ಕೋಪದವನು ಆದರೂ ಕೋಪವನ್ನು ಸಹಿಸಿಕೊಂಡು ತನ್ನ ಬಸವ ಬಡಮ್ಯೆಲನನ್ನು ಕರೆಯುವ ರೀತಿ ತುಂಬಾ ಸೊಗಸಾಗಿದೆ.

ಕೆಂದಹಾವಿನ ಹಾಲು ಮೂರು ತಿಂಗಳು

ಕುಡಿದಲ್ಲೊ ಆ ಕಂಬನಿನಗೆ ಹಡವೇನೂ

ಬಡಮ್ಯೆಲ ಗೆದ್ದು ಬಾರೊ ನನ್ನ ಗೂಡಿಗೆ

ಬಿಳಿಯ ಹಾವಿನಾಲು ಏಳು ತಿಂಗಳು

ಕುಡಿದಲ್ಲೊ ಆ ಕಂಬನಿನಗೆ ಹಡವೇನೂ

ಬಡಮ್ಯೆಲ ಗೆದ್ದು ಬಾರೊ ನನ್ನ ದನುವಿಗೆ

ಎಂದು ಪುಳುಗಾಯಿ ಊದಿದ ತಕ್ಷಣ ಬಡಮ್ಯೆಲ ತನ್ನ ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಬೆನ್ನ ಮೇಲೆ ಬಾಲ ಹಾಕಿಕೊಂಡ ಕಟ್ಟಿರುವ ಸರಪಳಿಯನ್ನು ಕಿತ್ತುಕೊಂಡು ಜುಂಜಪ್ಪನ ಅಪ್ಪಣೆ ಪಡೆದುಕೊಂಡು ಒಂದು ಬಾರಿ ಉಡ್ರಿಕೆ ಹಾಕಿದ ತಕ್ಷಣ ತೊಟ್ಟಿಲಲ್ಲಿರುವ ಮಕ್ಕಳು ಕಿಟ್ಟನೆ ಕಿರುಚಿ ಪ್ರಾಣ ಬಿಡುವಂತೆ ಇದನ್ನು ಗಮನಿಸಿದ ಚೇಳೂರ ರಂಗಣ್ಣ ಜುಂಜಪ್ಪನೊಂದಿಗೆ ಪಗಡೆ ಆಟದಲ್ಲಿ ಸೋತು ಆರು ತಿಂಗಳುಗಳ ಕಾಲ ಚೇಳೂರಿನ ದೊರೆಯಾಗಿ ಆಳ್ವಿಕೆ ಮಾಡಿ ಅನೇಕ ಕೆರೆಗಳನ್ನು ಕಟ್ಟಿಸಿ ನಂತರ ಅವರ ರಾಜ್ಯವನ್ನು ಅವರಿಗೆ ಬಿಟ್ಟು ಕೊಟ್ಟು ವಾಪಸ್ಸು ಬರುತ್ತಾನೆ. ಇದನ್ನು ಕಂಬೇರ ಗೊಲ್ಲರು ಸಹಿಸದಾದರು. ನಂತರ ಉಪಾಯ ಮಾಡಿ ದಂಡಿನ ದುರುಗಿಯ ಸ್ನೇಹ ಬೆಳೆಸಿ ಅವಳಿಗೆ ಜುಂಜಪ್ಪನ್ನು ಬಲಿ ಕೊಡಲು ಪ್ರಯತ್ನಿಸುತ್ತಾರೆ. ಪುರಲಳ್ಳಿ ಭೂತಪ್ಪನ ಸಹಾಯದಿಂದ ಜುಂಜಪ್ಪನ ದಂಡಿನ ದುರುಗಿಯನ್ನು ಸೋಲಿಸಿತ್ತಾನೆ. ಅಲ್ಲಿಂದ ನೆರವಾಗಿ ಹಾಗಲವಾಡಿಗೆ ಬಂದು ಜಾನಕಲ್ಲು ದೊಡ್ಡಕ್ಕ ಹಾಗೂ ಸಿರಾದ ರಂಗಣ್ಣನಿಗೆ ಬುದ್ಧಿ ಕಲಿಸುತ್ತಾನೆ. ಜುಂಜಪ್ಪನ ಪ್ರಗತಿಯನ್ನು ಸಹಿಸದ ಕಂಬೇರ ಗೊಲ್ಲರು ಇವನು ಯಾರಿಂದಲೂ ಸಾಯುವ ಮಗನಲ್ಲ ಇವನನ್ನು ನಾವೇ ಕೊಲ್ಲಬೇಕೆಂದು ಬಯಸಿ ತನ್ನ ತಂಗಿಯ ಬಳಿಗೆ ಬಂದು ಹಳೆಯ ದ್ವೇಷವನ್ನೆಲ್ಲಾ ಮರೆತು ಇನ್ನು ಮುಂದಾದರೂ ಚೆನ್ನಾಗಿರುವುದನ್ನು ಕಲಿಯೋಣ ಎಂದು ಹೇಳಿ ದೀಪಾವಳಿ ಹಬ್ಬಕ್ಕೆ ಅಳಿಯಂದಿರನ್ನು ಕಳಿಸಬೇಕೆಂದು ಜುಂಜಪ್ಪನ ತಾಯಿಯಾದ ಚಿನ್ನಮ್ಮನಿಂದ ಮಾತು ತೆಗೆದುಕೊಂಡು ಹೋಗುತ್ತಾರೆ. ಜುಂಜಪ್ಪನಿಗೆ ಮಾವಂದಿರು ಉರಿಮದ್ದು ಇಕ್ಕುವುದರ ಬಗ್ಗೆ ಮುಂಗನಸು ಬಿದ್ದಿರುತ್ತದೆ. ಆದರೂ ತಾಯಿಯ ಮಾತನ್ನು ಮೀರಲಾರದೆ ಕಂಬೇರಹಟ್ಟಪ ಕಾನಿಹಟ್ಟಿಗೆ ಜುಂಜಪ್ಪ ತಮ್ಮಂದಿರನ್ನು ಕರೆದುಕೊಂಡು ಹೋಗುತ್ತಾನೆ. ಕಂಬೇರ ಗೊಲ್ಲರು ಕುಂಬಾರನಿಗೆ ಹೇಳಿ ಒಂದು ಮಡಕೆಯಲ್ಲಿ ಏಳು ಪದರು ಮಾಡಿಸಿರುತ್ತಾರೆ. ದೀಪಾವಳಿ

ಹಬ್ಬದ ಅಡಿಗೆಯಲ್ಲಿ ಒಂದು ಪದರದಲ್ಲಿ ಉರಿಮದ್ದನ್ನು ತಂಗಿ ಮಾರಕ್ಕನ ಕೈಯಲ್ಲಿ ಇಡಿಸಿರುತ್ತಾರೆ. ಜುಂಜಪ್ಪ ಮತ್ತು ಮಾರಣ್ಣ ಮೈಲಣ್ಣ ವಿಷದ ಅಡಿಗೆಯನ್ನು ಊಟ ಮಾಡಿ ಉರಿ ತಾಳಲಾರದೆ ಸೆಪ್ಪೆಯ ಬಣವೆಯನ್ನು ಉಜ್ಜಿದಾಗ ಬಣವೆ ಬೆಂಕಿ ಹತ್ತಿಕೊಂಡು ಉರಿಯುತ್ತದೆ. ಮೂರು ಜನ ಸೋದರರು ಸತ್ತಿರುವುದನ್ನು ನೋಡಿ ತಂಗಿ ಗೋಳಾಡುತ್ತಿದ್ದರೆ ಕಂಬೇರ ಗೊಲ್ಲರು ಕೋಲಾಟ ಹಾಡುತ್ತಾರೆ. ಆಗ ಜುಂಜಪ್ಪ ಸತ್ತು ಮಾರನೆಯ ದಿನಕ್ಕೆ ಸ್ವರ್ಗಕ್ಕೆ ಹೋಗಿ ಶಿವನಿಂದ ಅಪ್ಪಣೆ ಪಡೆದು ಮರಳಿ ಬಂದು ಕಂಬೇರ ಹಟ್ಟಿಯನ್ನು ಸುಟ್ಟು ಹಾಕುತ್ತಾನೆ. ಕಂಬೇರಗೊಲ್ಲರಲ್ಲಿ ತಂಗಿ ಒಬ್ಬಳನ್ನು ಬಿಟ್ಟು ಉಳಿದಂತೆ ಎಲ್ಲರನ್ನು ನಾಶ ಮಾಡಿ ತನ್ನ ತಾಯಿಯ ಬಳಿಗೆ ಬಂದು ನನಗೆ ಶಿವ ಅವಧಿ ಕೊಟ್ಟದ್ದು ಹದಿನಾಲ್ಕು ವರ್ಷಗಳು ಮಾತ್ರ ಹಾಗಾಗಿ ನಿನ್ನ ಮಗ ವೀರನಾಗಿಯೇ ಮಡಿದಿದ್ದೇನೆ. ನನ್ನದು ಮತ್ತು ನನ್ನ ತಮ್ಮಂದಿರದು ಹಲಗು ಕಡಿಸಿ ಮಾರನ ಗೊಲ್ಲರು ಪೂಜೆ ಮಾಡುವಂತೆ ಹೇಳುತ್ತಾನೆ. ಜೊತೆಗೆ ತನ್ನನ್ನು ಯಾವ ರೀತಿ ಆರಾಧನೆ ಮಾಡಬೇಕೆಂದು ಹೇಳುತ್ತಾನೆ. ಅವನ ನೈವೇದ್ಯಕ್ಕೆ ಹಸಿಯ ಕಾಳುಗಳಷ್ಟೆ, ಹಾಲಿನ ನೈವೇದ್ಯವನ್ನು ಇಷ್ಟ ಪಡುತ್ತಾನೆ. ಬೇಯಿಸಿದ ಅಡಿಗೆಯನ್ನು ಎಂದಿಗೂ ಇಷ್ಟಪಡುವುದಿಲ್ಲ. ಹಾಗೆಯೇ ಮಡಿ ಮೈಲಿಗೆಯನ್ನು ಕಟ್ಟು ನಿಟ್ಟಾಗಿ ಅಚರಣೆ ಮಾಡಬೇಕೆಂದು ಹೇಳುತ್ತಾನೆ. ಋತುಶಾಂತಿಯಾದವರು ಹಟ್ಟಿಯಿಂದ ೯ ದಿನಗಳ ಕಾಲ ಹೊರಗಿರಬೇಕು, ಹೆರಿಗೆಯಾದವರು ಒಂದು ತಿಂಗಳ ಕಾಲ ಹಟ್ಟಿಯಿಂದ ದೂರವಿರಬೇಕು. ನೂರು ತಪ್ಪಿಗೆ ಒಂದು ಚೇಳು ಸಾವಿರ ತಪ್ಪಿಗೆ ಒಂದು ಹಾವು, ನಡೆ ನುಡಿಗಳು ಒಂದೇ ಆಗಿರಬೇಕೆಂದು ಹೇಳುತ್ತಾನೆ.

**ವೀರ ಮಿಂಚಣ್ಣ:** ಈತ ಅದಿನರ ವಂಶದವನು. ಸಿಡಿಲು ಮಿಂಚುರಾಯನ ಮಗ ತನ್ನ ತಂದೆಯು ಸಿಡಿಲು ಹೊಡೆದ ಸಮಯದಲ್ಲಿ ವೀರ ಮಿಂಚಣ್ಣನ ಜನನವಾಗುತ್ತದೆ. ಹುಟ್ಟಿ ಮೂರು ವರ್ಷದ ಮಗನಾಗಿದ್ದಾಗ ತಮ್ಮ ದೊಡ್ಡಪ್ಪಗಳೊಂದಿಗೆ ಅಂದರೆ ನಾಡು ನಾಗೇಗೌಡ, ಹಿರಿಯನ ದಾಸೆಗೌಡ ಪೂಜಾರಿ ಮುದಿಯಣ್ಣ, ಬಾಗುಲು ಪೂಜಾರಿ ದ್ಯಾಮಣ್ಣ ಇಬ್ಬರಿಗೆ ಈ ರೀತಿ ಹೇಳುತ್ತಾನೆ. ನಾನು ನಮ್ಮಪ್ಪ ಆಳಿದಂತಹ ದನಗಳನ್ನು ಆಳಬೇಕೆಂದುಕೊಂಡು ದನಗಳ ಗೂಡಿಗೆ ಹೋಗಲು ಅಪ್ಪಣೆ ಕೊಡಿರಿ ಎಂದು ಕೇಳಿದಾಗ ಅವನ ದೊಡ್ಡಪ್ಪರು ಈ ರೀತಿ ಹೇಳುತ್ತಾರೆ. ದನಗಳನ್ನು ಕಾಯ್ದು ಬದುಕಬೇಕೆಂಬ ಕಷ್ಟ ನಮಗೆ ಬಂದಿಲ್ಲ ಬೇಕಾದಷ್ಟು ಆಸ್ತಿ ಬಂಗಾರ ಇಲ್ಲವೂ ಮೂಲೆ ಮೂಲೆಗೂ ಮುಲುಗುಡುತ್ತೈತೆ ಹಾಗಾಗಿ ನೀನು ವಿದ್ಯಾಭ್ಯಾಸ ಕಲಿತು ಸುಖವಾಗಿರುವಂತೆ ಹೇಳುತ್ತಾರೆ. ಅದಕ್ಕೆ ಆತ ಹೇಳುವ ಉತ್ತರ ಈ ರೀತಿ ಇದೆ.

ಕುರಿಯ ಕಾಯೋರ ಮಕ್ಕಳು ಕುರಿಯ ಕಾಯಬೇಕು

ದನವ ಕಾಯುವ ಮಕ್ಕಳು ದನವ ಕಾಯಬೇಕು

ಬೇಸಾಯ ಮಾಡುವ ಮಕ್ಕಳು ಬೇಸಾಯ ಮಾಡಬೇಕು

ಹಾಗಾಗಿ ನನಗೆ ಅಪ್ಪಣೆ ಕೊಟ್ಟರೆ ಹೋಗುವುದಾಗಿ ಹೇಳುತ್ತಾನೆ. ಅವರು ಏಳು ಅಣ್ಣ ತಮ್ಮಂದಿಗೆ ಉಳಿದಿರುವವನು ಇವನೊಬ್ಬನೆ. ಹಾಗಾಗಿ ಕಳಿಸಲು ಇಷ್ಟವಿರುವುದಿಲ್ಲ. ಆದರೂ ಅಪ್ಪಣೆ ಕೊಡುತ್ತಾರೆ.

ತಾಯಿ ವೀರುಗುಬ್ಬಕ್ಕನ ಆಶೀರ್ವಾದ ಪಡೆದುಕೊಂಡು ಹಾವಿನ ಗೂಡಿಗೆ ಬಂದು ದೇವಲೋಕಕ್ಕೆ ಹೋಗಿರುವ ದನಗಳನ್ನು ಮತ್ತೆ ವಾಪಸ್ಸು ಕರೆಸಿಕೊಳ್ಳುತ್ತಾನೆ. ಹೀಗೆ ದನ ಕಾಯ್ದುಕೊಂಡು ವಾಸ ಮಾಡುತ್ತಿರುವ ಸಮಯದಲ್ಲಿ ಬರಗಾಲ ಬರುತ್ತದೆ. ದನಗಳನ್ನು ಬದುಕಿಸುವುದು ಕಷ್ಟವಾಗುತ್ತದೆ. ಆಗ ನಿಡಿಗಲ್ಲಿ ಕಾವಲಿನಲ್ಲಿ ಹುಲ್ಲು ನೀರು ಇರುವ ವರ್ತಮಾನ ತಿಳಿಯುತ್ತದೆ. ಅಲ್ಲಿಗೆ ದನಗಳನ್ನು ಹೊಡೆದುಕೊಂಡು ಹೋಗುವುದಾಗಿ ತನ್ನ ತಾಯಿ ಮತ್ತು ದೊಡ್ಡಪ್ಪರಿಗೆ ಹೇಳಿದಾಗ ಆವರು ನಿಡಗಲ್ಲಿ ಕಾವಲಿಗೆ ಹೋದ ಯಾವ ವೀರನು ಹಿಂತಿರುಗಿ ಬಂದಿಲ್ಲ. ಅದು ಕಂಕ ಬ್ಯಾಡರ ನಾಡು. ಅಲ್ಲಿಗೆ ಹೋಗುವುದು ಬೇಡ. ದನಗಳಿಗೆ ಮೇವು ಕೊಂಡು ತರುತ್ತೇವೆ. ನೀರಿಗಾಗಿ ಬಾವಿಗಳನ್ನು ತೋಡಿಸುತ್ತೇವೆಂದು ಹೇಳಿದರೂ ಅವರ ಮಾತನ್ನು ಮೀರಿ ನಿಡಗಲ್ಲಿ ಕಾವಲಿಗೆ ದನಗಳನ್ನು ಹೊಡೆದುಕೊಂಡು ವೀರ ಮಿಂಚಣ್ಣ ಹೋಗುತ್ತಾನೆ. ಕಾವಲಿನಲ್ಲಿ ಹುಲ್ಲು ಹುಲುಸಾಗಿ ಬೆಳೆದಿರುತ್ತದೆ. ಆಗ ಚಿನ್ನ ಬೇಲಿ ರನ್ನದ ಬೇಲಿಯನ್ನು ಕಡಿದು ದನಗಳನ್ನು ಕಾವಲಿಗೆ ಬಿಡುತ್ತಾನೆ.ಕಾವಲುಗಾರ ಬಮ್ಮಣ್ಣ ಇವನನ್ನು ಬೈದುಕೊಂಡು ಬಂದಾಗ ಸಿಕ್ಕೋಳು ಸಿಕುರೆಂಬೆ ದ್ಯಾಮಕ್ಕ ದಯಾಮಾರಿ ವಿರಿಯೋಳು ಗೊಡ್ಡು ಗಾಳಿ ಭೂದಾಳು ವೀರ ಚಂದ್ರ ಭುದೇತ್ತು ಬಸವಣ್ಣ ಎಲ್ಲವು ಸೇರಿ ಅವನನ್ನು ಸಾಯಿಸಲು ಪ್ರಯತ್ನಿಸುತ್ತವೆ. ಆಗ ಗೊಲ್ಲಗೌಡನನ್ನು ಬೈದದ್ದು ತಪ್ಪಾಯಿತು ಎಂದು ಕ್ಷಮೆ ಕೇಳಿದಾಗ ಅವನನ್ನು ಬಿಡುತ್ತವೆ. ಆಗ ಬಮ್ಮಣ್ಣ ಮಿಂಚಣ್ಣನ ಬಳಿಗೆ ಬಂದು ಗೊಲ್ಲ ಗೌಡರು ಸತ್ಯವಂತರು ಬೈಯ್ದದ್ದು ತಪ್ಪಾಯಿತೆಂದು ಕ್ಷಮೆ ಕೇಳುತ್ತಾನೆ. ಆಗ ಮಿಂಚಣ್ಣನ ಸೋಮವಾರದ ದಿನ ಬೆಳಗ್ಗೆ ಹುಲ್ಲು ಬಳ್ಳಿ ಕೊಡಲು ನಿಟಗಲ್ಲಿಗೆ ಬರುತ್ತೇನೆ ಎಂದು ಬಮ್ಮಣ್ಣ ಹತ್ತಿರ ಹೇಳಿ ಕಳಿಸಿದರೆ ಬಮ್ಮಣ್ಣ ದೊರೆಗಳಿಗೆ ಅವಮಾನ ಮಾಡಿದ ಯರಿಗೊಲ್ಲ ಎಂದು ಸುಳ್ಳು ಹೇಳಿ ನಿಡಿಗಲ್ಲಿ ದೊರೆಗಳು ಮಿಂಚಣ್ಣನ ಮೇಲೆ ಯುದ್ಧಕ್ಕೆ ಬರುವಂತೆ ಮಾಡುತ್ತಾನೆ. ಆಗ ಮಿಂಚಣ್ಣನ ದನಗಳು ನಿಡಿಗಲ್ಲ ದೊರೆಗಳ ಜೊತೆಗೆ ಯುದ್ಧ ಮಾಡಿ ಗೆಲ್ಲುತ್ತವೆ. ಸೋಲನ್ನು ಒಪ್ಪಿಕೊಂಡ ದೊರೆಗಳು ವೀರ ಮಿಂಚಣ್ಣನ ಬಳಿ ಬಂದು ತಪ್ಪನ್ನು ಒಪ್ಪಿಕೊಳ್ಳುತ್ತಾರೆ. ಆಗ ಅವರನ್ನು ಕ್ಷಮಿಸುತ್ತಾನೇ ವೀರ ಮಿಂಚಣ್ಣ. ನಿಡಿಗಲ್ಲ ದೊರೆಗಳು ವೀರ ಮಿಂಚಣ್ಣನ ಕಾಲನ್ನು ಬಿಗಿಯಾಗಿ ಹಿಡಿದುಕೊಂಡು ಮಕ್ಕಳ ಸಂತಾನ ಬೇಡುತ್ತಾರೆ. ಆಗ ಮಿಂಚಣ್ಣ ನಾವು ಕಾಡುಗೊಲ್ಲರು. ನಾವು ಊರು ಹೊಕ್ಕವರ ಮಗನಲ್ಲ ಕೇರಿ ಹೊಕ್ಕರ ಮಗನಲ್ಲ ಎಂದು ಹೇಳಿದರೂ ಬಲವಂತ ಮಾಡುತ್ತಾರೆ. ನಿಡಿಗಲ್ಲಿಗೆ ಹೋಗಲು ತಯಾರಾಗಿ ನಿಂತಂತಹ ಸಮಯದಲ್ಲಿ ಅವನ ದನಗಳು ಹೋಗದಂತೆ ತಡೆಯುತ್ತವೆ. ಆದರೂ ಅವುಗಳ ಮಾತನ್ನು ಮೀರಿ ನಿಡಿಗಲ್ಲಿ ದೊರೆಗಳಿಗೆ ಮಕ್ಕಳ ಭಾಗ್ಯ ಕೊಡಲು ಹೋಗುತ್ತಾನೆ. ಹೋದಂತಹ ಸಮಯದಲ್ಲಿ ಗುಡ್ಡ ಬೋರಮ್ಮನ ಕಣ್ಣಿಗೆ ಬೀಳುತ್ತಾನೆ. ಅವಳು ಅವನಿಗೆ ಮನಸೋಲುತ್ತಾಳೆ. ಇದರಿಂದಾಗಿ ಅವನನ್ನು ಪಡೆಯಲು ಕಟ್ಟಿಗೆಯ ನೆಪ ಮಾಡಿ ಕಾವಲಿಗೆ ಬರುತ್ತಾಳೆ. ಕಾವಲಿನಲ್ಲಿ ಕಟ್ಟಿಗೆ ಕಡಿದು ಹೊರೆಯನ್ನು ಹೊರಿಸುವಂತೆ ವೀರ ಮಿಂಚಣ್ಣನ್ನು ಕೇಳುತ್ತಾಳೆ. ವೀರ ಮಿಂಚಣ್ಣ ಮೊದಲು ನಿರಾಕರಿಸಿ ಆನಂತರ ಕಟ್ಟಿಗೆ ಹೊರೆಸುತ್ತಾನೆ. ಆಗ ಅವಳು ಕಟ್ಟಿಗೆಯ ಹೊರೆಯನ್ನು ಬಿಟ್ಟು ಇವನನ್ನು ಹಿಡಿದುಕೊಳ್ಳುತ್ತಾಳೆ. ಅವನು ಬೇಡವೆಂದರೂ ಬಿಡುವುದಿಲ್ಲ. ಬೇರೆ ದಾರಿ ಕಾಣದೇ

ಅವಳೊಂದಿಗೆ ಕೂಡುತ್ತಾನೆ. ಇಬ್ಬರು ಕಾವಲಿನಲ್ಲಿಯೇ ಇರುವಂತಹ ಸಮಯದಲ್ಲಿ ನಿಡಿಗಲ್ಲ ದೊರೆಗಳು ಚಿಕ್ಕೋಳು ಸಿಕುರೆಂಬೆಯ ಕರುವನ್ನು ತಿನ್ನಲು ಕೇಳಿದಾಗ ಗುಡ್ಡದ ಬೋರಿ ನಿರಾಕರಿಸಿ ವೀರ ಮಿಂಚಣ್ಣನನ್ನು ಕಾವಲಿನಿಂದ ಊರಿಗೆ ಹೋಗುವಂತೆ ಹೇಳುತ್ತಾಳೆ. ಆದರೆ ಮಚ್ಚರ ಇಟ್ಟ ಮ್ಯಾಸಬೇಡರು ವೀರ ಮಿಂಚಣ್ಣನ ತಲೆಯನ್ನು ಕಡಿದುಕೊಂಡು ಹೋಗಿ ಗುಡ್ಡದ ಬೋರಮ್ಮನಿಗೆ ತೋರಿಸಿದಾಗ, ಗುಡ್ಡದ ಬೋರಮ್ಮ ಅವನ ತಲೆಯನ್ನು ಅವರಿಂದ ತೆಗೆದುಕೊಂಡು ನೇರವಾಗಿ ವೀರ ಮಿಂಚಣ್ಣನನ್ನು ಮಣ್ಣು ಮಾಡುವ ಜಾಗಕ್ಕೆ ಬಂದು ಅವನ ಮುಂಡಕ್ಕೆ ತಲೆಯನ್ನು ಸೇರಿಸಿ ಮಿಂಚಣ್ಣನ ತಾಯಿಗೆ ಮಾತನಾಡಿಸುವ ಮತೆ ಹೇಳಿದರೆ ಅವಳು ಮಾತನಾಡಿಸುತ್ತಾಳೆ. ಆದರೆ ವೀರ ಮಿಂಚಣ್ಣ ಮಾತನಾಡುವುದಿಲ್ಲ. ಅದೇ ರೀತಿ ಯಾರು ಮಾತನಾಡಿಸಿದರೂ ಮಾತನಾಡದ ವೀರ ಮಿಂಚಣ್ಣ ಸೂಳೆ ಬೋರಮ್ಮ ಮಾತನಾಡಿಸಿದಾಗ ಮಾತನಾಡುತ್ತಾನೆ. ನಂತರ ಅವಳು ಗೊಲ್ಲರವಳಾಗಿ ಪರಿವರ್ತನೆಯಾಗಿ ಸತಿ ಸಹಗಮನವಾಗುತ್ತಾಳೆ.

**ವೀರ ಕೆಂಪಣ್ಣನ ಕಾವ್ಯ:** ಕಾಡುಗೊಲ್ಲರ ಸಾಂಸ್ಕೃತಿಕ ನಾಯಕನಾದಂತಹ ವೀರ ಕೆಂಪಣ್ಣ ಮೂರು ತಿಂಗಳ ಮಗು ಜೆನ್ನಿಗೆ ಹೊಯ್ದ ಮಾರನೆದಿನ ಹಾವು ಕಡಿದು ಸಾವನಪ್ಪುತ್ತಾನೆ. ಅಂದರೆ ಇವರ ಊರು ಬಳ್ಳೆಕಟ್ಟೆ. ಬಳ್ಳೆಕಟ್ಟೆ ಈರಣ್ಣ ಇವರ ಮನೆದೇವರು. ದೊಡ್ಡ ತಿಮ್ಮೇಗೌಡ, ಚಿಕ್ಕ ತಿಮ್ಮೇಗೌಡ, ಹಿರಿಯನು ದಾಸೆಗೌಡ, ಪೂಜಾರಿ ಮುದಿಯಣ್ಣ, ದಳವಾಯಿ ಯರಮಗೊಂಡ, ಎತ್ತಿನಮಗ ಚಿಕ್ಕಣ್ಣ ಈ ಏಳು ಜನ ಅಣ್ಣ ತಮ್ಮಂದಿರು ಕಣ್ಣಿಗೆ ಕಾಣುವಷ್ಟು ಆಸ್ತಿ ಮಾಡಿಕೊಂಡಿರುತ್ತಾರೆ. ಯಾವುದಕ್ಕೂ ಕೊರತೆ ಇರದಂತೆ ಕಾಪಾಡಿಕೊಳ್ಳುತ್ತಾರೆ. ಹಾಗಾಗಿ ಇಂತಹ ಹರಿನರ ವಂಶದಲ್ಲಿ ಹುಟ್ಟಿದ ಎತ್ತಿನ ಮಗ ಚಿಕ್ಕಣ್ಣ ಮೂರು ವರುಷದವನು ದನ ಕಾಯಲು ಹಾವಿನ ಗೂಡಿಗೆ ಹೋದವನು ಮನೆಗೆ ಬಂದಿಲ್ಲ. ಹದಿನಾರು ವರ್ಷವಾದರೂ ಮನೆಗೆ ಬಂದಿಲ್ಲ. ಇದರಿಂದಾಗಿ ಅವನಿಗೆ ಮದುವೆ ಮಾಡಬೇಕೆಂದು ಸಿಕ್ಕೋಳು ಚಿಕ್ಕಮ್ಮನಲ್ಲಿ ಮದುವೆ ಮಾಡುತ್ತಾರೆ. ಆನಂತರ ಸಿಕ್ಕೋಳು ಚಿಕ್ಕಮ್ಮ ಗಂಡನ ಮನೆಯಲ್ಲಿದ್ದು ಬಂಡಿಯಂತಹ ಬದುಕು ಮಾಡಿಕೊಂಡಿರುತ್ತಾಳೆ. ವಾರಗಿತ್ತಿಯರು ನೀಡುವ ಅನೇಕ ರೀತಿಯ ಹಿಂಸೆಯನ್ನು ಸಹಿಸುತ್ತಾಳೆ. ಗಂಡನ ಬಳಿಗೆ ಹೋಗಿ ಹೇಳಿದರೆ ಅವನು ಹೆಂಡತಿಯನ್ನು ಬಯ್ದು ಕಳುಹಿಸುತ್ತಾನೆ.

ಇದರಿಂದಾಗಿ ತಂದೆ ತಾಯಿ ಇಲ್ಲದ ಬಂಧು ಬಳಗ ಇಲ್ಲದ ಪರದೇಸಿಯನ್ನು ಯಾರು ಕಾಪಾಡುತ್ತಾರೆ ಎಂದು ಎಲ್ಲಾ ನೋವನ್ನು ಸಹಿಸಿಕೊಂಡು ಇರುವಂತಹ ಸಮಯದಲ್ಲಿ ಅವಳು ಗರ್ಭ ಧರಿಸುತ್ತಾಳೆ. ಇದರಿಂದಾಗಿ ವಾರಗಿತ್ತಿಯರು ಕದ್ದು ಬಸುರಾಗಿದ್ದಾಳೆಂದು ಅನ್ನಬಾರದ ಮಾತುಗಳನ್ನು ಆಡುತ್ತಾರೆ. ಇದರಿಂದಾಗಿ ಅವಳು ಊರ ಬಳಿ ಇರುವ ಬಾವಿಗೆ ಬಿದ್ದು ಸಾಯುವುದಾಗಿ ತೀರ್ಮಾನಿಸುತ್ತಾಳೆ. ಇದನ್ನು ಅರಿತ ಮೂಡಲಗಿರಿ ತಿಮ್ಮಪ್ಪ ಅವಳ ಗಂಡನನ್ನು ಬಳ್ಳೆಕಟ್ಟೆಗೆ ಬರುವಂತೆ ಮಾಡುತ್ತಾನೆ. ಅವಳು ಮನೆ ಹೋಗಿ ಸಾಯಬೇಕೆಂದು ಮನೆಯ ಬಾಗಿಲು ತೆಗೆದಾಗ ಬಾಗಿಲ ಹೊರಗೆ ಗಂಡ ನಿಂತಿರುವುದನ್ನು ನೋಡಿದ ಅವಳು ನಾಚಿಕೆಯಿಂದ ಒಳಗೆ ಹೋಗಿ ಗಂಡನಿಗೆ ಅಡಿಗೆ ಮಾಡಿಟ್ಟು ಮಲಗುತ್ತಾರೆ. ಆನಂತರ ಬೆಳಗ್ಗೆ ಎದ್ದ ವಾರಗಿತ್ತಿಯರು ಎತ್ತಿನ ಮಗ ಚಿಕ್ಕಣ್ಣನನ್ನು ನೋಡಿದವರೇ

ಚಿಕ್ಕಮ್ಮನನ್ನು ಏಳಿಸದೇ ತಾವೇ ಕೆಲಸವನ್ನು ಮಾಡುತ್ತಾರೆ. ಬೆಳಕು ಹರಿದ ತಕ್ಷಣ ಕೊಡಲಿಯನ್ನು ಹೆಗಲ ಮೇಲಿಟ್ಟುಕೊಂಡು ಹಟ್ಟಿಯಲ್ಲಿ ಓಡಾಡಿದಾಗ ಎಲ್ಲರು ಮಾತನಾಡಿಸುತ್ತಾರೆ, ಚಿಕ್ಕಮ್ಮನನ್ನು ಬಯ್ದದ್ದು ತಪ್ಪಾಯಿತು ಎಂದು ಮರುಗುತ್ತಾರೆ. ನಂತರ ತನ್ನ ಪಾಡಿಗೆ ತಾನು ಹಾವಿನ ಗೂಡನ್ನು ಸೇರಿಕೊಳ್ಳುತ್ತಾನೆ. ಆರು ಮೂರು ಒಂಬತ್ತು ತಿಂಗಳು ತುಂಬಿ ಸಿಕ್ಕೋಳು ಚಿಕ್ಕಮ್ಮ ಒಂದು ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಆದರೆ ಅದರ ಹಾರೈಕೆಯನ್ನು ಯಾರೂ ಮಾಡುವುದಿಲ್ಲ. ಬಾಣಂತಿಯಾದರೂ ಮನೆಯ ಕೆಲಸವನ್ನು ಅವಳೇ ಮಾಡಬೇಕು. ಮಗುವಿಗೆ ಮೂರು ತಿಂಗಳಾದಾಗ ವೀರ ಕೆಂಪಣ್ಣ ಎಂದು ನಾಮಕರಣ ಮಾಡುತ್ತಾರೆ. ನಾಮಕರಣ ಮಾಡಿಕೊಂಡು ಮನೆಗೆ ಬರುವುದರೊಳಗಾಗಿ ವಾರಗಿತ್ತಿಯರು ಮನೆಯಲ್ಲಿ ದೀಪ ಹಾರಿಸಿ ಬಾಗಿಲು ಮುಚ್ಚಿಕೊಂಡು ಮಲಗಿರುತ್ತಾರೆ. ಹೇಗೂ ಬಾಗಿಲು ತೆಗೆದುಕೊಂಡು ಒಳಗೆ ಹೋಗಿ ತಾಯಿ ಮಗ ಇಬ್ಬರು ಮಲಗುತ್ತಾರೆ. ಇಬ್ಬರು ಮಲಗಿದ ಸಮಯದಲ್ಲಿ ಮಧ್ಯ ರಾತ್ರಿ ಎದ್ದು ವೀರ ಕೆಂಪಣ್ಣ ತಮ್ಮ ಮನೆಯಲ್ಲಿರುವ ಬೀಜದ ಗೂಳಿಗಳನ್ನು ಹಗ್ಗದಲ್ಲಿ ಬಿಚ್ಚಿ ಬಂದು ತಾಯಿಯ ಬಳಿ ಮಲಗುತ್ತಾನೆ. ಆಗ ಹೋರಿಗಳು ಗೌಡಗಳ ಹೆಂಡತಿಯರ ಮೇಲೆ ಕಾಲು ಇಡುತ್ತವೆ. ಅವರ ಗೋಳಾಟವನ್ನು ಕೇಳಿದ ಗೌಡಗಳು ಎದ್ದು ಆಳುಗಳಿಗೆ ಬಾರುಕೋಲಿನಿಂದ ಹೊಡೆಯುತ್ತಾರೆ. ಆಗ ಆ ಏಟುಗಳು ಅವರ ಹೆಂಡತಿಯರಿಗೆ ಬೀಳುತ್ತದೆ. ನಂತರ ಎತ್ತುಗಳನ್ನು ಕಟ್ಟಿ ಹಾಕಿ ಮಲಗುತ್ತಾರೆ. ಬೆಳಗ್ಗೆ ಸೂರ್ಯ ಹುಟ್ಟುವುದಕ್ಕಿಂತ ಮುಂಚಿತವಾಗಿ ಜೋಳದ ಹೊಲ ಕೊಯ್ಯಲು ಹೋಗುತ್ತಾರೆ. ಚಿಕ್ಕೊಳು ಚಿಕ್ಕಮ್ಮಳು ಹೋಗುತ್ತಾಳೆ. ಮಗುವನ್ನು ಆಲದ ಮರಕ್ಕೆ ಕಟ್ಟಿರುವ ಜೋಲಿಯಲ್ಲಿ ಮಲಗಿಸಿ ಹೊಲ ಕೊಯ್ಯುವಾಗ ಹಾವು ಕಡಿದು ವೀರ ಕೆಂಪಣ್ಣ ಮಡಿಯುತ್ತಾನೆ. ಆಗ ಅವನನ್ನು ಕಳೆದುಕೊಂಡ ತಾಯಿಗೆ ಮತ್ತೆ ಶಿವನಿಂದ ವರವನ್ನು ಪಡೆದುಕೊಂಡು ಬಂದು ದೊಡ್ಡಪ್ಪಗಳ ಸಂಪತ್ತು ನಾಶ ಮಾಡುವುದಾಗಿ ತಾಯಿಗೆ ಮಾತು ಕೊಟ್ಟು ಶಿವನಿಂದ ವರಗಳನ್ನು ಪಡೆದು ಮರಳಿ ಬಂದು ಬಳ್ಳೆಕಟ್ಟೆ ಈರನ ಗುಡಿಯ ಬೇವಿನ ಮರದಲ್ಲಿ ಉಳಿದುಕೊಂಡು ಹಟ್ಟಿಗೆ ಕಾಲರ ಕಾಯಿಲೆಯನ್ನು ಸೃಷ್ಟಿ ಮಾಡಿ ಅವರ ದೊಡ್ಡಪ್ಪಗಳ ಸಂಪತ್ತನೆಲ್ಲ ನಾಶ ಮಾಡುತ್ತಾರೆ. ಇದೇ ತರಹದ ಅನೇಕ ವೀರರ ಕಾವ್ಯಗಳು ಕಾಡುಗೊಲ್ಲರಲ್ಲಿವೆ. ಅವುಗಳನ್ನು ಸಂಗ್ರಹ ಮಾಡುವ ಕೆಲಸ ಜರೂರಾಗಿ ನಡೆಯಬೇಕಾಗಿದೆ.

### ೩.೧೦. ಕಾಡುಗೊಲ್ಲರ ಹಬ್ಬಗಳು

'ಕಾಡುಗೊಲ್ಲರಿಗೆ ವಿಶಿಷ್ಟವಾಗಿರುವ ಯಾವ ಹಬ್ಬವೂ ಇಲ್ಲ. ಅವರು ಜನರೆಲ್ಲರೂ ಆಚರಿಸುವಂತೆಯೇ ಯುಗಾದಿ, ದೀಪಾವಳಿ, ಬಸವನ ಹಬ್ಬ, ಶಿವರಾತ್ರಿ ಹಬ್ಬ, ನಾಗರಹಬ್ಬಗಳನ್ನು ಆಚರಿಸುತ್ತಾರೆ. ಈ ಹಬ್ಬಗಳಲ್ಲಿ ಅವರು ಸ್ನಾನ ಮಾಡಿ ಒಗೆದ ಬಟ್ಟೆಗಳನ್ನು ಧರಿಸಿ, ದೇವರಿಗೆ ಹಣ್ಣುಕಾಯಿ ಮಾಡಿಸುತ್ತಾರೆ. ತಮ್ಮ ಕೈಯಾರೆ ಅಡಿಗೆ ಮಾಡಿ ದೇವರಿಗೆ ಎಡೆ ಇಟ್ಟು ಊಟ ಮಾಡುತ್ತಾರೆ. ಅವರ ಹಬ್ಬಗಳಲ್ಲಿ ವಿಶೇಷವಾದ ಯಾವ ಅಂಶವೂ ಇಲ್ಲ. ಶಿವರಾತ್ರಿ ಹಬ್ಬವನ್ನು ಕಾಳಿನ ಹಬ್ಬ ಎಂದು ಕರೆಯುತ್ತಾರೆ. ಈ ಹಬ್ಬದಲ್ಲಿ ಹುರುಳಿ ಮತ್ತು ನವಣೆಯಿಂದ ಮಾಡಿದ ಅಡುಗೆಯನ್ನು ದೇವರಿಗೆ ಎಡೆ ಮಾಡಿ ಊಟ ಮಾಡುತ್ತಾರೆ.'[೩೩]

**ಮಕರ ಸಂಕ್ರಾಂತಿ:** ಕಾಡುಗೊಲ್ಲರು ಈ ಹಬ್ಬವನ್ನು ತಮ್ಮ ಗ್ರಾಮೀಣ ಭಾಷೆಯಲ್ಲಿ ಸಂಕ್ರಾಂತಿ ಎಂದು ಕರೆಯುತ್ತಾರೆ. ಕಾಡುಗೊಲ್ಲರ ವರ್ಷದ ಮೊದಲ ಹಬ್ಬ ಇದಾಗಿರುತ್ತದೆ. ಮಕರ ಸಂಕ್ರಾಂತಿಯನ್ನು ಭಾರತದಾದ್ಯಂತ ಆಚರಣೆ ಮಾಡಿದರೂ ಕಾಡುಗೊಲ್ಲರು ಈ ಹಬ್ಬವನ್ನು ಭಿನ್ನ ರೀತಿಯಲ್ಲಿ ಆಚರಣೆ ಮಾಡುತ್ತಾರೆ. ಈ ಹಬ್ಬಕ್ಕೆ ಪೂರ್ವ ತಯಾರಿಯಾಗಿ ಕಾಡುಗೊಲ್ಲರು ಮೊದಲು ಕುಂಬಳಕಾಯಿಯನ್ನು ಮತ್ತು ಸಜ್ಜೆಯನ್ನು ಜೋಡಿಸಿಕೊಳ್ಳುತ್ತಾರೆ. ಸಂಕ್ರಾಂತಿ ಹಬ್ಬವು ಜನವರಿ ೧೪ರಂದು ಬರುತ್ತದೆ. ಜನವರಿ ೧೪ರ ಬೆಳಗಿನ ಸಮಯ ನಾಲ್ಕು ಗಂಟೆಗೆ ಹಬ್ಬದ ಸಡಗರವೇರ್ಪಡುತ್ತದೆ. ತಮ್ಮ ಮನೆಯ ಮುಂದಿನ ಅಂಗಳವನ್ನು ಹಸುವಿನ ಸಗಣಿಯಿಂದ ಸಾರಿಸುತ್ತಾರೆ. ಆಮೇಲೆ ತಮ್ಮ ಹಟ್ಟಿಯ ಸುತ್ತಮುತ್ತಲಿನಲ್ಲಿ ದೊರೆಯಬಹುದಾದ ತಂಕಟೆ ಗಿಡದ ಹೂವು ಹಾಗೂ ಬಿಳಿ ಎಕ್ಕೆ ಗಿಡದ ಹೂವನ್ನು ಅಂಗಳದ ತುಂಬ ಹರಡುತ್ತಾರೆ. ತಂಕಟೆ ಗಿಡದ ಹೂವಿನ ವಾಸನೆ ಗಂಜಲದ ವಾಸನೆಯನ್ನು ಕಡಿಮೆ ಮಾಡುತ್ತದೆ ಎಂಬುದು ಅವರ ಅಭಿಪ್ರಾಯ. ಸೂರ್ಯ ಉದಯಿಸುವುದರೊಳಗೆ ಸಗಣಿಯಿಂದ ಬೆನಕನನ್ನು ಮಾಡುತ್ತಾರೆ. ಕಾಡುಗೊಲ್ಲರಿಗೆ ಮಣ್ಣಿನಲ್ಲಿ ಮಾಡಿದ ಬೆನಕನಿಗಿಂತ ಸಗಣಿಯಲ್ಲಿ ಮಾಡಿದ ಬೆನಕನೇ ಶ್ರೇಷ್ಠವಾಗಿ ಕಂಡುಬರುತ್ತಾನೆ. ಹಾಗಾಗಿ ಸಗಣಿಯ ಬೆನಕನಿಗೆ ಮೂರು ಕಡ್ಡಿ ಕರಿಕೆ ಹುಲ್ಲು ಮುಡಿಸಿ ಅರಿಸಿಣ, ಕುಂಕುಮ ಹಚ್ಚಿ ಸೂರ್ಯ ಉದಯಿಸಿದ ತಕ್ಷಣ ಬಾಗಿಲನ್ನು ತೊಳೆದು ಬೆನಕನನ್ನು ಮೊದಲು ಪೂಜೆ ಮಾಡಿ ಆನಂತರ ಸೂರ್ಯನನ್ನು ಪೂಜಿಸುತ್ತಾರೆ. ಏಕೆಂದರೆ ಸೂರ್ಯನಲ್ಲಿ ಹೊಸತನವಿರುವಂತೆ ನಮ್ಮ ಬದುಕಿನಲ್ಲಿ ಹೊಸತನ ಬರುವಂತೆ ಹಾರೈಸು ಎಂದು ಸೂರ್ಯ ದೇವನನ್ನು ಬೇಡಿಕೊಳ್ಳುತ್ತಾರೆ. ಜೊತೆಗೆ ಹಬ್ಬಕ್ಕಾಗಿ ಸಿದ್ಧ ಮಾಡಿಕೊಂಡಿರುವ ಕುಂಬಳ ಕಾಯಿಯನ್ನು ತಲೆಯ ಮೇಲಿಂದ ಮನೆಯ ಹೊಸಲಿನ ಮೇಲೆ ಬೀಳಿಸಿ ಹೊಡೆಯುತ್ತಾರೆ. ಆನಂತರ ಅದನ್ನು ಚೆನ್ನಾಗಿ ಬೇಯಿಸಿ ಅದರ ಜೊತೆ ಬೆಲ್ಲವನ್ನು ಸೇರಿಸಿ ತೊಗೆ ಮಾಡುತ್ತಾರೆ. ಈ ತೊಗೆಯನ್ನು ಸಜ್ಜೆ ರೊಟ್ಟಿಯೊಂದಿಗೆ ಊಟ ಮಾಡುತ್ತಾರೆ. ಕಾಡುಗೊಲ್ಲರ ಸಂಪ್ರದಾಯದ ಪ್ರಕಾರ ಪ್ರತಿಯೊಬ್ಬರು ಒಂದು ತುಂಡು ಕುಂಬಳಕಾಯಿಯನ್ನು ತಿನ್ನಲೇಬೇಕೆಂದು ಹೇಳುತ್ತಾರೆ. ತಿನ್ನದಿದ್ದರೆ ಸಂಕ್ರಮಣ ಶಾಪ ಹಾಕುತ್ತಾನೆಂಬ ಭೀತಿಯು ಅವರನ್ನು ಕಾಡುತ್ತದೆ. ಹಾಗಾಗಿ ಕುಂಬಳಕಾಯಿ ಮತ್ತು ಸಜ್ಜೆ ರೊಟ್ಟಿಯನ್ನು ಸಂಕ್ರಾಂತಿ ಹಬ್ಬದಲ್ಲಿ ಮಾಡಿಯೇ ತೀರಬೇಕು. ಅಷ್ಟೇ ಅಲ್ಲ ಕುಂಬಳಕಾಯಿಯು ಆರೋಗ್ಯಕ್ಕೆ ತುಂಬಾ ಒಳ್ಳೆಯದು ಎಂದು ಜನಪದ ತಜ್ಞರು ಹೇಳುತ್ತಾರೆ.

**ಕಾಳಿನ ಹಬ್ಬ ಅಥವಾ ಗುಗ್ಗರಿ ಹಬ್ಬ:** ಈ ಹಬ್ಬವು ಕಾಡುಗೊಲ್ಲರ ಸಾಂಸ್ಕೃತಿಕ ಅನನ್ಯತೆಯನ್ನು ಸಾರುವಂತಹದ್ದಾಗಿದೆ. ಇದರ ಉದ್ದೇಶ ತಮ್ಮ ಹಿರಿಯರಿಗೆ ತಾವು ಬೆಳೆದ ಧಾನ್ಯಗಳನ್ನು ಗುಗ್ಗರಿಯ ರೂಪದಲ್ಲಿ ಅರ್ಪಿಸುವುದಾಗಿದೆ. ಅವರಿಗಾಗಿ ಆಚರಿಸುವ ಹಬ್ಬ ಇದಾಗಿದೆ. ಶಿಷ್ಟ ಸಮುದಾಯದವರು ಶಿವರಾತ್ರಿ ಹಬ್ಬವನ್ನು ಜಾಗರಣೆಯಾಗಿ ಆಚರಿಸಿದರೆ, ಪರಿಶಿಷ್ಟರಾದ ಕಾಡುಗೊಲ್ಲರು ಹಿರಿಯರ ನೆನಪಿಗಾಗಿ ಆಚರಿಸುವ ಹಬ್ಬವಾಗಿದೆ. ಶಿವರಾತ್ರಿ ತಿಂಗಳಲ್ಲಿ ಎಲ್ಲಾ ಹಬ್ಬಗಳಲ್ಲೂ ಗುಗ್ಗರಿ ಹಬ್ಬ ಮಾಡುವ ಆಚರಣೆಯನ್ನು ಹಮ್ಮಿಕೊಳ್ಳುತ್ತಾರೆ. ಕಾಡುಗೊಲ್ಲರ ಮೂಲಪುರುಷರಾದ ಕಾಟಯ್ಯ,

ಚಿತ್ತಯ್ಯ, ಕ್ಯಾತಯ್ಯ, ಪಾತಯ್ಯ ಹಾಗೂ ರಾಮಲಿಂಗ, ಈ ಪಂಚಲಿಂಗಗಳ ಆರಾಧಕರಾದ ಇವರುಗಳು ತಾವು ಬೆಳೆದ ಧಾನ್ಯಗಳನ್ನು ಮೊದಲು ತಮ್ಮ ಹಿರಿಯರಿಗೆ ಅರ್ಪಿಸಿ ಆನಂತರ ಉಪಯೋಗಿಸಬೇಕು ಎಂಬುದು ಅವರ ಸಂಪ್ರದಾಯ. ಕಾಳಿನ ಹಬ್ಬವನ್ನು ಆಚರಣೆ ಮಾಡಲು ಕಾಟಯ್ಯನ ವಂಶಸ್ಥರು ಸೋಮವಾರವನ್ನು ಆಯ್ಕೆ ಮಾಡಿಕೊಂಡರೆ ಚಿತ್ತಯ್ಯನ ವಂಶಸ್ಥರು ಶನಿವಾರವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಅದಕ್ಕಿಂತ ಮುಂಚಿತವಾಗಿ ಗೌಡ ಪೂಜಾರಿಗಳು ದೇವಸ್ಥಾನದಲ್ಲಿ ಮನೆಗೊಬ್ಬರಂತೆ ಹಟ್ಟಿಯಲ್ಲಿರುವ ಎಲ್ಲಾ ಹಿರಿಯರನ್ನು ಸೇರಿಸಿ ಹಬ್ಬ ಮಾಡುವ ಬಗ್ಗೆ ಚರ್ಚೆ ಮಾಡುತ್ತಾರೆ. ಖರ್ಚು ವೆಚ್ಚವನ್ನು ಕುರಿತು ಮಾತನಾಡುತ್ತಾರೆ. ಆನಂತರ ಆಹ್ವಾನ ಪತ್ರಿಕೆಯನ್ನು ಮಾಡಿಸಿ ಬೇರೆ ಬೇರೆ ಹಳ್ಳಿಗಳಲ್ಲಿರುವ ಎಲ್ಲಾ ಒಕ್ಕಲುಗಳಿಗೆ ವಿಷಯವನ್ನು ಮುಟ್ಟಿಸುತ್ತಾರೆ. ದೇವರ ಕೆಲಸಕ್ಕೆ ಪ್ರತಿಯೊಂದು ಮನೆಯವರು ಒಬ್ಬೊಬ್ಬರಂತೆ ಬಂದು ಪಾಲ್ಗೊಳ್ಳಬೇಕು. ದೇವರ ಕೆಲಸದಲ್ಲಿ ಭಾಗವಹಿಸದಿದ್ದರೆ ದಂಡ ಕಟ್ಟಬೇಕಾಗುತ್ತದೆ. ಕಾಡುಗೊಲ್ಲರು ಆಧುನಿಕತೆಗೆ ಒಳಗಾಗಿದ್ದರೂ ದೇವರ ಕಾರ್ಯಕ್ರಮಗಳಲ್ಲಿ ಆಧುನಿಕತೆಗೆ ಒತ್ತು ಕೊಡದೇ ಪರಂಪರೆಯನ್ನು ಅನುಸರಿಸುತ್ತಾರೆ.

**ಗುಗ್ಗರಿ ಹಬ್ಬದಲ್ಲಿ ಆಚರಿಸುವ ಆಚರಣೆಗಳು**

**೧. ಮೀಸಲು ಹಾಲು ಕರೆಯುವುದು:** ಕಾಳಿನ ಹಬ್ಬವನ್ನು ಆಚರಿಸುವ ಬಗ್ಗೆ ಹಿರಿಯರು ಮಾತು ಕಥೆಯನ್ನು ಮುಗಿಸಿದ ನಂತರ ದೇವರ ಪೂಜಾರಿಯ ಮನೆತನದವರು ಯಾರಾದರೊಬ್ಬರು ತಮ್ಮ ಹಟ್ಟಿಯಲ್ಲಿರುವ ಒಕ್ಕಲುಗಳ ಮನೆಯಲ್ಲಿರುವ ಹಸು ಇಲ್ಲವೇ ಕುರಿ, ಎಮ್ಮೆಯ ಹಾಲುಗಳನ್ನು ಕರೆದುಕೊಂಡು ಬರುತ್ತಾನೆ. ಹಾಲು ಕರೆಯುವಾಗ ಯಾವುದೇ ಕಾರಣಕ್ಕೂ ಇನ್ನೊಬ್ಬರೊಂದಿಗೆ ಮಾತನಾಡುವಂತಿಲ್ಲ. ಅಷ್ಟೇ ಅಲ್ಲ, ಹಾಲು ಕರೆಯುವಾಗ ಬಾಯಿಗೆ ಬಟ್ಟೆಯನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಹಾಲು ಕರೆದುಕೊಂಡು ಹೋದನಂತರ ದೇವರ ಗುಡಿಯಲ್ಲಿ ಹಾಲನ್ನು ಚೆನ್ನಾಗಿ ಕಾಯಿಸಿ ಹೆಪ್ಪು ಹಾಕುತ್ತಾರೆ. ನಂತರ ಮೊಸರು ಮಾಡಿ ಮೊಸರು ಕಡೆದು ಮಜ್ಜಿಗೆ ಮಾಡಿ ಅದರ ಬೆಣ್ಣೆಯಲ್ಲಿ ತುಪ್ಪ ಕಾಯಿಸಿ ಆ ತುಪ್ಪವನ್ನು ದೇವರಿಗೆ ದೀಪ ಹಚ್ಚಲು ಬಳಸುತ್ತಾರೆ. ಮಜ್ಜಿಗೆಯನ್ನು ಕಾಳಿನ ಹಬ್ಬದ ಕೊನೆಯ ದಿನ ದೊಡ್ಡ ಎಡೆ ಎಂದು ಅನ್ನವನ್ನು ಮಾಡಿ ಮೊಸರು ಅನ್ನವನ್ನು ದೇವರಿಗೆ ನೈವೇದ್ಯ ಮಾಡಿ ಆನಂತರ ಭಕ್ತಾದಿಗಳು ಎಡೆಯ ಅನ್ನವನ್ನು ಮೊಸರಿನೊಂದಿಗೆ ಬಾಳೆಹಣ್ಣು ಸೇರಿಸಿಕೊಂಡು ಊಟ ಮಾಡುತ್ತಾರೆ. ಈ ಊಟವನ್ನು ಹೆಣ್ಣುಮಕ್ಕಳಿಗೆ ಹಾಗೂ ಕಲೆಯದವರಿಗೆ ಇಡುವುದಿಲ್ಲ.

**೨. ದೇವರ ಎಡೆಗಾಗಿ ಮೀಸಲು ಅಕ್ಕಿಯನ್ನು ಬೀಸುವುದು:** ಕಾಡುಗೊಲ್ಲರ ದೇವರುಗಳು ಆಧುನಿಕತೆಯನ್ನು ನಿರಾಕರಿಸುತ್ತವೆ ಎನ್ನುವುದಕ್ಕೆ ಇದೊಂದು ಉದಾಹರಣೆಯಾಗಿದೆ. ದೇವರನ್ನು ಗಂಗಾ ದೇವತೆಯ ಬಳಿಗೆ ಕರೆದುಕೊಂಡು ಹೋಗುವುದಕ್ಕಿಂತ ಮುಂಚಿತವಾಗಿ ದೇವರ ಎಡೆಗಾಗಿ ಮೀಸಲು ಅಕ್ಕಿಯನ್ನು ಬೀಸುವ ಕಲ್ಲಿನಲ್ಲಿ ಬೀಸುವುದು ತಲಾತಲಾಂತರದಿಂದ ರೂಢಿಸಿಕೊಂಡು ಬಂದಿರುವುದು ಅವರ ಪದ್ಧತಿ. ಹಾಗಾಗಿ ಮೀಸಲು ಅಕ್ಕಿಯನ್ನು ಬೀಸುವವರು ಮೊದಲು ಬಾಯಿಗೆ ಬಟ್ಟೆಯನ್ನು ಕಟ್ಟಿಕೊಳ್ಳಬೇಕು. ಬೀಸುವುದು ಮುಗಿಯುವವರೆಗೂ ಯಾರೊಂದಿಗೂ ಮಾತನಾಡುವಂತಿಲ್ಲ.

ಮಾತನಾಡಿದರೆ ಎಂಜಲು ಹಿಟ್ಟನಲ್ಲಿ ಸೇರಿಕೊಳ್ಳುತ್ತದೆ. ಎಂಜಲನ್ನು ದೇವರಿಗೆ ಎಡೆಯಾಗಿ ಅರ್ಪಿಸಬಾರದೆಂಬ ಉದ್ದೇಶದಿಂದ ಬಾಯಿಗೆ ಬಟ್ಟೆ ಕಟ್ಟಿಕೊಳ್ಳುತ್ತಾರೆ. 'ಯಂತ್ರಜ್ಞಾನ ಯುಗದಲ್ಲಿ ಬೀಸುವ ಕಲ್ಲಿನ ಅವಶ್ಯಕತೆ ಇದೆಯಾ ಎಂದು ಕೇಳಿದರೆ ಅವರು ಕೊಡುವ ಉತ್ತರ ನಮ್ಮ ದೇವರು ಗಿರಣಿಯಲ್ಲಿ ಹಾಕಿಸಿಕೊಂಡು ಬಂದಿರುವ ಹಿಟ್ಟನ್ನು ಇಷ್ಟ ಪಡುವುದಿಲ್ಲ ಎಂದು ಹೇಳುತ್ತಾರೆ. ಅವರ ಆರಾಧ್ಯ ದೈವಕ್ಕೋಸ್ಕರ ಕಷ್ಟಪಟ್ಟರೆ ಆರೋಗ್ಯ ಚೆನ್ನಾಗಿರುತ್ತದೆ ಎಂಬ ನಂಬಿಕೆಯ ಜೊತೆಗೆ ಅವರ ಹೃದಯ ವೈಶಾಲ್ಯತೆಯನ್ನು ಅದು ಸೂಚಿಸುತ್ತದೆ. ದೇವರ ಕೆಲಸಗಳಲ್ಲಿಯೂ ಮನುಷ್ಯನಲ್ಲಿರುವ ಸಂಕುಚಿತ ಮನೋಭಾವವನ್ನು ಹೋಗಲಾಡಿಸಿ ನಾವೆಲ್ಲರೂ ಒಂದೇ ಎಂಬ ಭಾವನೆಯನ್ನು ಬೆಳೆಸುತ್ತದೆ'.[೩೩]

ಈ ರೀತಿ ಬಾಯಿಗೆ ಬಟ್ಟೆ ಕಟ್ಟಿಕೊಂಡು ಬೀಸಿದಂತಹ ಅಕ್ಕಿ ಹಿಟ್ಟನ್ನು ದೇವರು ಜಲಧಿಯನ್ನು ಬಿಟ್ಟು ಬರುವ ಸಮಯದಲ್ಲಿ ಗಂಗೆಗೆ ಎಡೆ ಹಾಕುತ್ತಾರೆ. ಆನಂತರ ತಮ್ಮ ದೇವರಿಗೂ ಹುರಿಮೆ, ಡೋಲು ಇವುಗಳಿಗೂ ಎಡೆ ಹಾಕಿ ಪೂಜೆ ಮಾಡುತ್ತಾರೆ. ಆನಂತರ ದೇವರ ಹಿಂದೆ ಬಂದಿರುವ ಭಕ್ತಾದಿಗಳಿಗೆಲ್ಲ ಪ್ರಸಾದದ ರೂಪದಲ್ಲಿ ಹಂಚುತ್ತಾರೆ.

**ಹುರಿಮೆ ಬಡಿಯಲು ಆಯಗಾರರನ್ನು ನೇಮಿಸುವುದು:** ಕಾಡುಗೊಲ್ಲರಲ್ಲಿ ಆಯಗಾರಿಕೆ ಇನ್ನೂ ಸಹ ಮುಂದುವರಿದುಕೊಂಡು ಬಂದಿರುವುದನ್ನು ಕಾಣಬಹುದು. ಮಾದಿಗರು, ಕುಂಬಾರರು, ಕಂಬಾರರು, ಅಗಸರು ಹಾಗೂ ಛಲವಾದಿಗಳು ಇಂದಿಗೂ ಕೂಡ ಆಯಗಾರಿಕೆ ವೃತ್ತಿಯನ್ನು ಮಾಡುತ್ತಿದ್ದಾರೆ. ಈ ಆಯಗಾರರು ಎಷ್ಟೇ ಶ್ರೀಮಂತರಾಗಿದ್ದರೂ ತಮ್ಮ ಆಯಗಾರಿಕೆಯನ್ನು ಕಳೆದುಕೊಳ್ಳುವುದಿಲ್ಲ. ಆದರಲ್ಲೂ ಕಾಡುಗೊಲ್ಲರಿಗೂ ಛಲವಾದಿಗರಿಗೂ ಅವಿನಾಭಾವ ಸಂಬಂಧವಿದೆ. ಯಾಕೆಂದರೆ ಛಲವಾದಿಗಳು ಬಂದು ಹುರಿಮೆ ಬಡಿಯದಿದ್ದರೆ ಕಾಡುಗೊಲ್ಲರ ದೇವರು ಹಟ್ಟಿಯಿಂದ ಹೊರಗೆ ಬರುವುದಿಲ್ಲ. ಆ ಕಾರಣದಿಂದ ಛಲವಾದಿಗರು ಸರ್ಕಾರಿ ಕೆಲಸದಲ್ಲಿದ್ದರೂ ಒಂದು ದಿನವಾದರೂ ರಜೆಯನ್ನು ತೆಗೆದುಕೊಂಡು ಬಂದು ದೇವರ ಮುಂದೆ ಹುರಿಮೆಯನ್ನು ಬಡಿಯಬೇಕಾಗುತ್ತದೆ. ಸರ್ಕಾರಿ ಕೆಲಸದಲ್ಲಿದ್ದವರು ಹುರಿಮೆ ಬಡಿಯುವುದನ್ನು ನಿರಾಕರಿಸಿದಂತಹ ಸಮಯದಲ್ಲಿ ದೇವರು ಅವರಿಗೆ ಕಷ್ಟ ಕೊಟ್ಟು ಬರುವಂತೆ ಮಾಡಿಕೊಳ್ಳುತ್ತದೆಂಬ ಭಯ ಛಲವಾದಿ ಸಮುದಾಯದವರಲ್ಲಿದೆ. ಹಿಂದೆ ಆಯಗಾರರಿಗೆ ಕಾಡುಗೊಲ್ಲರು ಒಂದು ವರ್ಷಕ್ಕೆ ಒಂದು ಹಸುವಿನ ಕರು, ಕುರಿಯ ಮರಿ ಇಲ್ಲವೇ ಎಮ್ಮೆಯ ಕರುವನ್ನು ಕೊಡುತ್ತಿದ್ದರು. ಇದು ಕಾಡುಗೊಲ್ಲರು ಪಶುಪಾಲಕರು ಎಂಬುದನ್ನು ಸಾಬೀತುಪಡಿಸುತ್ತದೆ. ಹೀಗೆ ಸಮಾಜ ಅಥವಾ ಕಾಡುಗೊಲ್ಲರು ಪಶುಪಾಲನೆಯಿಂದ ಕೃಷಿಯ ಕಡೆ ಸ್ಥಿತ್ಯಂತರ ಹೊಂದಿದಂತಹ ಸಮಯದಲ್ಲಿ ಪ್ರಾಣಿಗಳ ಬದಲಾಗಿ ಧಾನ್ಯಗಳನ್ನು ಕೊಡುವ ಪದ್ಧತಿಯನ್ನು ರೂಢಿಸಿಕೊಂಡರು.

ಕೃಷಿಯಿಂದ ವ್ಯವಹಾರ ಜ್ಞಾನವನ್ನು ಕಂಡುಕೊಂಡ ಪ್ರಸ್ತುತ ದಿನಗಳಲ್ಲಿ ಆಯಾಗಾರರಿಗೆ ಹಣ ಕೊಡುವ ಪ್ರವೃತ್ತಿಯನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಆಯಗಾರರಿಗೆ ಪ್ರಾಣಿಗಳಾದ

ಕುರಿಯ ಮರಿಯನ್ನು ಅಥವಾ ಹಸುವಿನ ಕರುವನ್ನು ಕೊಡುತ್ತಾರೆ. ಆದರೆ ಧಾನ್ಯಗಳಿಂದ ಒಂದು ಮನೆಗೆ ೨೦ ಸೇರಿನಂತೆ ರಾಗಿ ಇಲ್ಲವೇ ಜೋಳವನ್ನು ಅಳೆದು ಕೊಡುತ್ತಾರೆ. ಹಣದ ರೂಪದಲ್ಲಾದರೆ ಒಂದು ಮನೆಗೆ ೫೦೦ ರೂಪಾಯಿಯನ್ನು ಕೊಡಬೇಕಾಗುತ್ತದೆ. ಈ ಆಯಗಾರಿಕೆ ಹಣವನ್ನು ಸುಗ್ಗಿಯ ಕಾಲದಲ್ಲಿ ಮಾತ್ರ ವಸೂಲಿ ಮಾಡುತ್ತಾರೆ.

**ಹೊಳೆಗೆ ಹೋಗುವುದು ಅಥವಾ ಜಲಧಿ ಮಾಡುವುದು:** ಕಾಡುಗೊಲ್ಲರ ಪ್ರತಿಯೊಂದು ದೇವರು ವರ್ಷದಲ್ಲಿ ಒಂದು ಬಾರಿಯಾದರೂ ಹೊಳೆಗೆ ಹೋಗಿ ಜಲಧಿ ಮಾಡಿಕೊಂಡು ಬರುವುದು ಅವರ ಪದ್ಧತಿ. ದೇವರು ಹೊಳೆಗೆ ಹೊರಡುತ್ತದೆ ಎಂದರೆ ಹುರಿಮೆ ಬಡಿಯುವವರು ಇರಲೇಬೇಕು. ಕಾಲ ಎಷ್ಟೆ ಮುಂದುವರಿದ್ದರೂ ಉರಿಮೆ ಇಲ್ಲದೇ ಕಾಡುಗೊಲ್ಲರ ದೇವರ ಹಟ್ಟಿ ಬಿಟ್ಟು ಹೊರಗೆ ಬರುವುದಿಲ್ಲ. ದೇವರು ಗುಡಿಯಲ್ಲಿರುವ ಎಲ್ಲಾ ವಸ್ತುಗಳನ್ನು ಬಿದಿರಿನ ಗೂಡೆಗೆ ತುಂಬಿಕೊಳ್ಳುತ್ತಾರೆ. ಕಾಡುಗೊಲ್ಲರ ದೇವರುಗಳು ತುಂಬಾ ಸರಳವಾಗಿರುತ್ತವೆ. ಒಂದು ಪೆಟ್ಟಿಗೆ, ಒಂದು ಕುದುರೆ, ಒಂದು ಹಲಗು ಇವುಗಳ ಜೊತೆಗೆ ಗಂಟೆ ಧೂಪಾರ್ತಿಗಳು, ಪೆಟ್ಟಿಗೆಯಲ್ಲಿ ಸಾಲಿಗ್ರಾಮವಿರುತ್ತದೆ. ಇದರ ಜೊತೆಗೆ ಕರೆ ಭೂತಾಳಿ, ಬಿಳಿ ಭೂತಾಳಿ ಮರದ ತುಂಡುಗಳಿರುತ್ತವೆ. ಪೆಟ್ಟಿಗೆಯ ಸುತ್ತಲು ರೇಷ್ಮೆ ಬಟ್ಟೆಯನ್ನು ಸುತ್ತಿರುತ್ತಾರೆ. ಹಲಗಿನ ಸುತ್ತಲು ಕರಿಯ ಕಂಬಳಿಯಲ್ಲಿ ಸುತ್ತುತ್ತಾರೆ. ದೇವರು ಗುಡಿಯಿಂದ ಹೊರಗಡೆ ಬಂದ ತಕ್ಷಣ ಪೂಜಾರಿಯ ಹೆಂಡತಿ ಬಂದು ದೇವರನ್ನು ಹೊತ್ತುಕೊಂಡಿರುವ ಪೂಜಾರಿಯ ಕಾಲು ತೊಳೆದು ಕಾಲು ತೊಳೆದ ನೀರಿನಿಂದ ಮುಖವನ್ನು ತೊಳೆದುಕೊಳ್ಳಬೇಕು, ನಂತರ ಸ್ವಲ್ಪ ನೀರನ್ನು ಕುಡಿಯಬೇಕು. ಇಂತಹ ಕೆಲಸವನ್ನು ಕಾಡುಗೊಲ್ಲರು ಸ್ತ್ರೀಯರಿಂದ ಮಾಡಿಸುತ್ತಾರೆ. ಅದಾದ ನಂತರ ದೇವರು ಹೋಗುವ ದಾರಿಯಲ್ಲಿ ಹೆಣ್ಣುಮಕ್ಕಳು ನೀರು ಸಳೆ ಕೊಡುತ್ತಾರೆ. ಏಕೆಂದರೆ ದಾರಿಯ ಧೂಳು ಮನುಷ್ಯರ ಮೇಲೆ ಬೀಳಬಾರದೆಂದು ದೇವರನ್ನು ಹೊತ್ತುಕೊಂಡ ಪೂಜಾರಿಯಿಂದ ಹಿಡಿದು ಹುರಿಮೆ ಬಡಿಯುವ ವ್ಯಕ್ತಿಯು ಯಾರೊಬ್ಬರೂ ಕಾಲಲ್ಲಿ ಚಪ್ಪಲಿ ಧರಿಸುವಂತಿಲ್ಲ. ಮುಳ್ಳಿರಲಿ ಕಲ್ಲಿರಲಿ ಬರಿಗಾಲಿನಲ್ಲಿ ದೇವರ ಹಿಂದೆ ಹೋಗಬೇಕಾಗುತ್ತದೆ.

**ಒರತೆ ತೆಗೆಯುವುದು:** ಕಾಡುಗೊಲ್ಲರು ದೇವರನ್ನು ಹೊಳೆಗೆ ತೆಗೆದುಕೊಂಡು ಹೋಗಿ ಒಂದು ಕಡೆ ಪಾರಿ ಬೇಲಿ ಹಾಕಿ ಕರಿಯ ಕಂಬಳಿ ಗದ್ದಿಗೆ ಮಾಡಿ ಅದರ ಮೇಲೆ ದೇವರನ್ನು ಕೂರಿಸುತ್ತಾರೆ. ದೇವರ ಹತ್ತಿರ ಬೇರೆ ಜಾತಿಯವರು ಸುಳಿಯದಂತೆ ಎಚ್ಚರಿಕೆ ವಹಿಸುತ್ತಾರೆ. ನಂತರ ಚಿಲುಮೆ ತೆಗೆಯಲು ದೇವರನ್ನು ಕುರುಹು ಕೇಳುತ್ತಾರೆ. ದೇವರು ಹೇಳಿದ ಜಾಗದಲ್ಲಿ ಗುಂಡಿ ತೋಡುತ್ತಾರೆ. ನೀರು ಬಂದರೆ ಮೊದಲು ಗಂಗಮ್ಮನ ಪೂಜೆ ಮಾಡಿ ಆನಂತರ ಆ ನೀರನ್ನು ದೇವರ ವಸ್ತುಗಳನ್ನು ತೊಳೆಯಲು ಬಳಸುತ್ತಾರೆ. ಒಂದು ವೇಳೆ ಚಿಲುಮೆಯಲ್ಲಿ ನೀರು ದೊರೆಯದಿದ್ದರೆ ಎಳನೀರು ಮತ್ತು ಜೇನುತುಪ್ಪದಿಂದ ದೇವರ ಮುಖವನ್ನು ತೊಳೆದು ದೇವರಿಗೆ ಮುಖಪದ್ಮಗಳನ್ನು ಮುಡಿಸುತ್ತಾರೆ. ಆನಂತರ ಮೂಡಲ ಮಣೇವು ಹಾಕಿ ಅಲ್ಲಿ ನೆರೆದಿರುವ ಎಲ್ಲಾ ಭಕ್ತಾದಿಗಳಿಗೆ ಪ್ರಸಾದ ಕೊಟ್ಟು ದೇವರನ್ನು ಹೊತ್ತುಕೊಂಡು ಹಟ್ಟಿಯ ಕಡೆ ಮುಖಮಾಡುತ್ತಾರೆ.

**ಕಾಡುಗೊಲ್ಲರ ಪೂಜಾರಿಗಳ ನಡೆನುಡಿಗಳು:** ಒಂದು ಕಾಲದಲ್ಲಿ ಪೂಜಾರಿಯನ್ನು ನೋಡಿದರೆ ಸಾಕ್ಷಾತ್ ದೇವರನ್ನು ನೋಡಿದಂತಹ ಅನುಭವವಾಗುತ್ತಿತ್ತು. ಆದರೆ ಆಧುನೀಕರಣ, ಜಾಗತೀಕರಣ ಅವರ ಹಟ್ಟಿಯ ಒಳಗೆ ಪ್ರವೇಶ ಮಾಡಿ ವ್ಯಕ್ತಿತ್ವಕ್ಕಿಂತ ದುರಾಸೆಗೆ ಒಳಗಾಗುವಂತೆ ಮಾಡಿದೆ. ಹಿಂದೆ ಪೂಜಾರಿಗಳು ನಿಷ್ಪಕ್ಷಪಾತವಾಗಿದ್ದರೂ ತುಂಬ ಕಟ್ಟುನಿಟ್ಟಿನ ವಿಧಾನಗಳನ್ನು ಅನುಸರಿಸುತ್ತಿದ್ದರು. ಆಧುನಿಕತೆಯಿಂದ ದೂರ ಉಳಿದ್ದರು. ಕಾಲಿಗೆ ಚಪ್ಪಲಿ ಹಾಕುತ್ತಿರಲಿಲ್ಲ. ಸುಳ್ಳು ಹೇಳುತ್ತಿರಲಿಲ್ಲ. ಬಸ್ಸು ಹತ್ತುತ್ತಿರಲಿಲ್ಲ. ಎಲ್ಲಿಗೆ ಹೋದರು ಎತ್ತಿನ ಗಾಡಿ ಇಲ್ಲವೇ ನಡೆದುಕೊಂಡೇ ಹೋಗುತ್ತಿದ್ದರು. ತಮ್ಮ ಮನೆಯಲ್ಲದೇ ಬೇರೆಯವರ ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಕಂಚಿನ ತಟ್ಟೆಯಲ್ಲಿ ಅಲ್ಲದೇ ಬೇರೆ ಯಾವ ಲೋಹದ ತಟ್ಟೆಯಲ್ಲಿ ಊಟ ಮಾಡುತ್ತಿರಲಿಲ್ಲ. ತಮಗೆ ಕುಡಿಯವ ನೀರಿಗೋಸ್ಕರ ಪ್ರತ್ಯೇಕ ಚಿಲುಮೆಯನ್ನು ತೆಗೆದುಕೊಳ್ಳುತ್ತಿದ್ದರು. ಹೋಟೆಲುಗಳಲ್ಲಿ ತಿಂಡಿ ತಿನಿಸುಗಳನ್ನು ಹಾಗೂ ನೀರನ್ನು ಕುಡಿಯುತ್ತಿರಲಿಲ್ಲ. ಮದ್ಯಪಾನ, ವೇಶ್ಯಾವಾಟಿಕೆಗಳಂತ ಕೆಟ್ಟ ಪದ್ಧತಿಗಳನ್ನು ಮಾಡುವಂತಿರಲಿಲ್ಲ. ಕುರಿ, ಮೇಕೆ ಬಿಟ್ಟರೇ ಇತರೆ ಯಾವುದೇ ಪ್ರಾಣಿ ಪಕ್ಷಿಗಳ ಮಾಂಸಹಾರವನ್ನು ಸ್ವೀಕರಿಸುವಂತಿಲ್ಲ. ಈ ರೀತಿಯ ಕಟ್ಟುನಿಟ್ಟಿನ ಜೀವನ ವಿಧಾನಗಳನ್ನು ಅನುಸರಿಸುತ್ತಿದ್ದರು. ಕಾಡುಗೊಲ್ಲರ ಪೂಜಾರಿಗಳು ಆದರೆ ಇಂದು ಕೇವಲ ಬೆರಳೆಣಿಕೆಯಷ್ಟು ಪೂಜಾರಿಗಳು ಮಾತ್ರ ಈ ರೀತಿ ಕಟ್ಟುನಿಟ್ಟಿನ ಜೀವನ ವಿಧಾನವನ್ನು ಅನುಸರಿಸುತ್ತಾರೆ. ಉದಾ: ಕೂಡ್ಲಹಳ್ಳಿಯ ಪಾಥಲಿಂಗೇಶ್ವರ, ಯರಬಳ್ಳಿ ಗೊಲ್ಲರ ಹಟ್ಟಿಯ ಹಾಲಪ್ಪ ದೇವರ ಪೂಜಾರಿ, ಮರಡಿಹಳ್ಳಿ ಗೊಲ್ಲರಹಟ್ಟಿಯ ಕಾಟಮ್ಮದೇವರ ಪೂಜಾರಿ, ಇಕ್ಕನೂರಿನ ಗೊಲ್ಲರಹಟ್ಟಿಯ ಕಾಟಮ್ಮ ದೇವರ ಪೂಜಾರಿ, ಮುಂಗಸವಳ್ಳಿಯ ಗೊಲ್ಲರಹಟ್ಟಿಯ ಕಾಟಮ್ಮದೇವರ ಪೂಜಾರಿಗಳು ಮಾತ್ರ ಕಟ್ಟುನಿಟ್ಟಿನ ನಿಬಂಧನೆಗಳನ್ನು ಅನುಸರಿಸುತ್ತಿದ್ದಾರೆ. ಆದರೆ ಬಹಳಷ್ಟು ಜನ ಪೂಜಾರಿಗಳು ತಮ್ಮ ಬದ್ಧತೆಯನ್ನು ಬಿಟ್ಟುಕೊಟ್ಟಿದ್ದಾರೆ.

**೨. ಅಮಾವಾಸ್ಯೆಯ ಪೂಜಾರಿ:** ಈತನನ್ನು ಕೂಡ ಕಾಡುಗೊಲ್ಲರು ಹೇಳುವ ಪ್ರಕಾರ ದೇವರೆ ಆಯ್ಕೆ ಮಾಡಿಕೊಳ್ಳುತ್ತದೆ. ಈ ಪೂಜಾರಿಯಾಗಲಿಕ್ಕೆ ಕೆಲವರು ಇಷ್ಟ ಪಡುವುದಿಲ್ಲ. ಏಕೆಂದರೆ ಹಿಂಡೆ ಕೂಳು ತಿನ್ನುವುದು ತುಂಬಾನೆ ಕಷ್ಟ ಎಂದು ಅಮಾವಾಸ್ಯೆಯ ಪೂಜಾರಿ ಹೇಳುತ್ತಾನೆ. ಈತನು ಸಹ ದೇವರ ಪೂಜಾರಿಯಷ್ಟೆ ಪ್ರಾಮುಖ್ಯತೆಯನ್ನು ಪಡೆದಿರುತ್ತಾನೆ. ಅಷ್ಟೇ ಕಟ್ಟುನಿಟ್ಟಿನ ಜೀವನವಿಧಾನವನ್ನು ಅನುಸರಿಸುತ್ತಾನೆ. ಈತನ ಕೆಲಸವೆಂದರೆ ದೇವರು ಹೊಳೆಗೆ ಹೋಗಿಬಂದ ದಿನದ ರಾತ್ರಿಯ ತನ್ನ ಕೆಲಸವನ್ನು ಆರಂಭಿಸುತ್ತಾನೆ. ಆ ವರ್ಷದಲ್ಲಿ ಸತ್ತಿರುವ ಪ್ರತಿಯೊಬ್ಬ ವ್ಯಕ್ತಿಯ ಹೆಸರಿನಲ್ಲಿ ವಿಷದ ಕೂಳನ್ನು ತಿನ್ನಬೇಕು. ತಿನ್ನುವುದು ಬಹಳ ಕಷ್ಟ. ಆದರೆ ತಿನ್ನುವುದು ಅನಿವಾರ್ಯ. ಯಾಕೆಂದರೆ ಅದಕ್ಕಾಗಿಯೇ ಆತನನ್ನು ನೇಮಕ ಮಾಡಿರುತ್ತಾರೆ.

**೩. ಕಂಬದ ಪೂಜಾರಿ:** ಈ ಪದ್ಧತಿಯು ಕಾಡುಗೊಲ್ಲರಲ್ಲಿ ಮೊದಲಿರಲಿಲ್ಲ. ಆದರೆ ವೈಷ್ಣವ ಪರಂಪರೆಗೆ ಕಾಡುಗೊಲ್ಲರು ಒಳಗಾದ ನಂತರ ವೈಷ್ಣವರಿಂದ ಬಳುವಳಿಯಾಗಿ ಆಚರಣೆಗೆ ಬಂದಂತಹ ಪದ್ಧತಿ ಇದಾಗಿದೆ. ಕಾಡುಗೊಲ್ಲರ ಎಲ್ಲಾ ಬೆಡಗುಗಳಲ್ಲಿ ಈ ಪದ್ಧತಿ ಕಂಡುಬರುವುದಿಲ್ಲ. ಕೆಲವು ಬೆಡಗುಗಳಲ್ಲಿ

ಮಾತ್ರ ಕಂಡುಬರುತ್ತದೆ. ಈತ ಕಾಳಿನ ಹಬ್ಬದಲ್ಲಿ ಹಟ್ಟಿಯಲ್ಲಿರುವ ಪ್ರತಿಯೊಂದು ಮನೆಗೂ ಹೋಗಿ ಭಿಕ್ಷೆ ಬೇಡಿಕೊಂಡು ಬರಬೇಕಾಗುತ್ತದೆ. ಅವನು ಭಿಕ್ಷೆ ಬೇಡಿಕೊಂಡು ಬಂದ ದವಸ ಧಾನ್ಯಗಳನ್ನು ಆ ದಿನ ಮಾಡುವ ಅರಿಸೇವೆಯಲ್ಲಿ ಸೇರಿಸಿ ಅಡುಗೆ ಮಾಡುತ್ತಾರೆ. ಪ್ರತಿಯೊಂದು ಮನೆಯಲ್ಲಿ ಕೊಟ್ಟಂತಹ ಎಣ್ಣೆಯನ್ನು ದೇವರಗುಡಿಯಲ್ಲಿ ದೀಪ ಹಚ್ಚಲು ಬಳಸುತ್ತಾರೆ. ಈ ಕಾಯಕ ಮಾಡುವ ಸಲುವಾಗಿಯೇ ಕಂಬದ ಪೂಜಾರಿಯನ್ನು ನೇಮಕ ಮಾಡುತ್ತಾರೆ. ಈ ಪದ್ಧತಿ ವಂಶಪಾರಂಪರ್ಯವಾಗಿ ಮುಂದುವರಿಯುತ್ತದೆ. ಆದರೆ ಪಟ್ಟದ ಪೂಜಾರಿ ಒಟ್ಟಾರೆಯಾಗಿ ಹೇಳುವುದಾದರೆ ಕಾಡುಗೊಲ್ಲರ ಬದುಕು ಬದಲಾಗಿರುವುದರಿಂದ ಕಾಡುಗೊಲ್ಲರ ಪೂಜಾರಿಗಳು ಬದಲಾಗಿದ್ದಾರೆ. ಅವರ ಬಗ್ಗೆ ಇರುವ ನಂಬಿಕೆಯನ್ನು ಜನರು ಕಳೆದುಕೊಂಡಿದ್ದಾರೆ. ಪೂಜಾರಿಗಳು ದೈವತ್ವದ ಭಾವನೆಯಿಂದ ಕಳೆದುಕೊಂಡಿದ್ದಾರೆ.

**ಉರುಳಿ ಮತ್ತು ನವಣೆ ಬತ:** ಕಾಡುಗೊಲ್ಲರು ಕಾಲಿನ ಹಬ್ಬದಲ್ಲಿ ಉರುಳಿ ಹಾಗೂ ನವಣೆ ಕಾಳಿನ ಬತವನ್ನು ಹಿಡಿಯುತ್ತಾರೆ. ಕಾಡುಗೊಲ್ಲರ ಪ್ರಮುಖ ಬೆಡುಗಗಳಾದ ಸನ್ನೆಯ ಗೊಲ್ಲರು ಮತ್ತು ಸೋಮನ ಗೊಲ್ಲರು. ಸನ್ನೆಯ ಗೊಲ್ಲರನ್ನು ಪೂರ್ಣಬತದವರೆಂದು ಕರೆಯುತ್ತಾರೆ. ಸೋಮನ ಗೊಲ್ಲರನ್ನು ಅರ್ಧಬತದವರೆಂದು ಕರೆಯುತ್ತಾರೆ.

**ಪೂರ್ಣಬತ:** ಕಾಡುಗೊಲ್ಲರ ಮಾಹಿತಿದಾರರು ಹೇಳುವ ಪ್ರಕಾರ ಕಾಡುಗೊಲ್ಲರ ಸನ್ನೆಗೊಲ್ಲರು ಅಮಾವಾಸ್ಯೆಯ ದೇವರಾದ ಹಾಲುಕುಡಿದಪ ತಮ್ಮ ಭಕ್ತರಿಗೆ ಮನೆಗಳಲ್ಲಿ ಹುರುಳಿ–ನವಣೆ ತಿನ್ನದಿದ್ದರೆ ಬಂಗಾರದ ಹೊಗೆ ಹೊರಡಿಸುನೇನೆಂದು ಹೇಳುತ್ತಾದಂತೆ. ಆ ಕಾರಣದಿಂದ ಒಂದು ವರ್ಷದಲ್ಲಿ ಒಂದು ಬಾರಿ ಮಾತ್ರ. ಕಾಳಿನ ಹಬ್ಬದಲ್ಲಿ ದೇವರಿಗೆ ಮಾತ್ರ ಹುರುಳಿ–ನವಣೆಯಿಂದ ಎಡೆ ಮಾಡಿ ಅರ್ಪಿಸಿದರೆ ಮತ್ತೆ ಯಾವತ್ತು ತಮ್ಮ ಮನೆಗಳಲ್ಲಿ ಹುರುಳಿ–ನವಣೆಯನ್ನು ಬಳಸುವಂತಿಲ್ಲ. ಬಳಸಿದರೆ ದೇವರು ಶಾಪ ಹಾಕುತ್ತಾನೆಂಬ ಭಯದಿಂದ ಯಾರು ತಮ್ಮ ಮನೆಗಳಲ್ಲಿ ಹುರುಳಿ ನವಣೆಯ ಅಹಾರ ಮಾಡುವುದಿಲ್ಲ ಮತ್ತು ತಮ್ಮ ಹೊಲಗಳಲ್ಲಿ ಹುರುಳಿ ನವಣೆ ಧಾನ್ಯಗಳನ್ನು ಬೆಳೆಯುವುದು ನಿಷೇಧಿಸಿಕೊಂಡಿದ್ದಾರೆ. ಅಲ್ಲದೆ ಅವರ ದೇವರು ಸಹ ಹುರುಳಿ–ನವಣೆ ಹೊಲದಲ್ಲಿ ಹಾಕುವುದಿಲ್ಲ. ಅಷ್ಟೇ ಅಲ್ಲದೆ ತಮ್ಮ ಒಕ್ಕಲುಗಳು ಒಲೆಯ ಮೇಲೆ ಹುರುಳಿ ನವಣೆಯನ್ನು ಬೇಯಿಸುವಂತಿಲ್ಲ. ಕರಡಿ ಗೊಲ್ಲರ ಹೆಣ್ಣುಮಕ್ಕಳು ಸನ್ನೆಯ ಗೊಲ್ಲರಿಗೆ ಕೊಟ್ಟು ಮದುವೆ ಮಾಡಿದರೆ ಮದುವೆ ಆದಾಗಿನಿಂದ ಹುರುಳಿ ನವಣೆಯನ್ನು ಊಟ ಮಾಡುವುದಿಲ್ಲ ಹಾಗಾಗಿಯೇ ಇವರನ್ನು ಪೂರ್ಣಬತದವರೆಂದು ಕರೆಯುತ್ತಾರೆ.

**ಅರ್ಧಬತ:** ಸೋಮನ ಗೊಲ್ಲರನ್ನು ಅರ್ಧಬತದವರೆಂದು ಕರೆಯುತ್ತಾರೆ. ಯಾಕೆಂದರೆ ಅವರು ಒಂದು ವರ್ಷದಲ್ಲಿ ಕೆಲವೇ ತಿಂಗಳು ಮಾತ್ರ ೬ ತಿಂಗಳು ಬತ ಹಿಡಿಯುತ್ತಾರೆ. ಅವರು ಅಮರ ಅಮಾವಾಸ್ಯೆಯ ದೇವರಾದ ಕ್ಯಾತಪ್ಪನೊಂದಿಗೆ ಒಪ್ಪಂದ ಮಾಡಿಕೊಂಡಿರುವುದಾಗಿ ಹೇಳುತ್ತಾರೆ. ಕ್ಯಾತಪ್ಪನ ಜಾತ್ರೆಯನ್ನು ಸಾರಿದ ನಂತರ ಮನೆಯಲ್ಲಿರುವ ಹುರುಳಿ–ನವಣೆ ಕಾಳುಗಳನ್ನು ಹಟ್ಟಿಯಿಂದ

ಹೊರಹಾಕಿ ಕೈ ತೊಳೆದುಕೊಳ್ಳುತ್ತಾರೆ. ಜಾತ್ರೆ ಮುಗಿಯುವವರೆಗೆ ಯಾವುದೇ ಕಾರಣಕ್ಕೂ ಹುರುಳಿ ಹಾಗೂ ನವಣೆಯನ್ನು ಮುಟ್ಟುವಂತಿಲ್ಲ ಹಾಗೂ ತಿನ್ನುವಂತಿಲ್ಲ. ಕ್ಯಾತಪ್ಪ ಜಾತ್ರೆಯ ಕೊನೆದಿನವಾದಂತಹ ದಿನದಲ್ಲಿ ಕ್ಯಾತಪ್ಪನೆಗೆ ಹುರುಳಿ ಮತ್ತು ನವಣೆಯ ಪ್ರಸಾದವನ್ನು ಎಡೆ ಹಾಕಿ ಅನಂತರ ಬಂದಿರುವ ಭಕ್ತರೆಲ್ಲರೂ ಪ್ರಸಾದವನ್ನು ಸ್ವೀಕರಿಸಿ ಕೈ ತೊಳೆಯುತ್ತಾರೆ. ಅಲ್ಲಿಗೆ ಅವರ ವ್ರತ ಮುಗಿಯುತ್ತದೆ.

**ದೊಡ್ಡ ಎಡೆ ಪ್ರಸಾದ:** ಕಾಡುಗೊಲ್ಲರು ಗುಗ್ಗರಿ ಹಬ್ಬದ ಮೂರನೆಯ ದಿನ ತಮ್ಮ ದೇವರಿಗೆ ದೊಡ್ಡ ಎಡೆಯನ್ನು ಅರ್ಪಣೆ ಮಾಡುತ್ತಾರೆ. ಈಗಾಗಲೇ ಹಿಂದೆ ಹೇಳಿರುವಂತೆ ಮೀಸಹಾಲು ಕರೆದು ಮೊಸರು ಮಾಡಿ ಮೊಸರಿನಿಂದ ಬೆಣ್ಣೆ ತೆಗೆದು ಬೆಣ್ಣೆಯಿಂದ ತುಪ್ಪ ಕಾಯಿಸಿ ತುಪ್ಪದ ಎಡೆಯನ್ನು ಬೆಳಗಿನ ಸಮಯ ಎಂಟು ಗಂಟೆಗೆ ಎಡೆ ಹಾಕುತ್ತಾರೆ. ಈ ದೊಡ್ಡ ಎಡೆಯನ್ನು ಮಜ್ಜಿಗೆಯೊಂದಿಗೆ ಬಾಳೆಹಣ್ಣು ಬೆರೆಸುತ್ತಾರೆ. ಅನ್ನ ಮಾಡುತ್ತಾರೆ. ನಂತರ ಬಂದಿರುವ ಭಕ್ತರುಗಳಿಗೆ ಊಟಕ್ಕೆ ಬಡಿಸುತ್ತಾರೆ. ಊಟಕ್ಕೆ ಬಡಿಸುವಾಗ ಕಟ್ಟುನಿಟ್ಟಿನ ಕ್ರಮವನ್ನು ಅನುಸರಿಸಬೇಕಾಗುತ್ತದೆ. ಈ ದೊಡ್ಡ ಎಡೆಯನ್ನು ಹೆಂಗಸರಿಗೆ ಬಡಿಸುವಂತಿಲ್ಲ ಹಾಗೂ ತಮ್ಮ ಬೆಡಗಿನೊಂದಿಗೆ ಕಲೆಯದವರಾದ ಸೋಮನಗೊಲ್ಲರಿಗೆ ಬಡಿಸುವಂತಿಲ್ಲ. ಋತುಮತಿಯಾಗದ ಹೆಣ್ಣು ಮಕ್ಕಳು ಸ್ವೀಕರಿಸಬಹುದು.

**ವೆಚ್ಚ – ಖರ್ಚು ವಸೂಲಿ:** ಕಾಳಿನ ಹಬ್ಬದ ಕೊನೆಯ ದಿನ ಎಲ್ಲಾ ಭಕ್ತಾದಿಗಳು ಸೇರಿರುವಂತಹ ಸಮಯದಲ್ಲಿ ದೇವರ ಗೌಡನು ಗುಗ್ಗರಿ ಹಬ್ಬಕ್ಕೆ ಖರ್ಚಾಗಿರುವ ಹಣವನ್ನು ವಸೂಲಿ ಮಾಡುತ್ತಾನೆ. ಮೊದಲು ದೇವರ ಒಕ್ಕಲಿನಲ್ಲಿ ಹಣವನ್ನು ವಸೂಲಿ ಮಾಡಿ ನಂತರ ಅದೇ ಹಟ್ಟಿಯಲ್ಲಿ ವಾಸವಾಗಿರುವ ನೆಂಟರು ಸಹ ತಮ್ಮ ಕೈಲಾದ ಸಹಾಯವನ್ನು ಮಾಡುತ್ತಾರೆ. ದೇವರ ಕೆಲಸಕ್ಕೆ ಬಂದವರಿಗೆ ೫೦೦ ರೂ. ಆದರೆ ದೇವರ ಕೆಲಸಕ್ಕೆ ಬಾರದವರಿಗೆ ೬೦೦ ರೂ. ವಸೂಲಿ ಮಾಡುತ್ತಾರೆ. ದೇವರ ಕೆಲಸಕ್ಕೆ ಬಾರದವರಿಗೆ ೧೦೦ ರೂಪಾಯಿ ದಂಡ ವಿಧಿರುತ್ತಾರೆ. ಯಾರಾದರೂ ಒಕ್ಕಲುಗಳು ದೇವರ ಖರ್ಚಿನ ಬಾಬ್ತು ಕೊಡದಿದ್ದರೆ ದೇವರ ಪೂಜಾರಿಯು ಅವರಿಗೆ ಹಣ್ಣು ಕಾಯಿ ಮಾಡಿಕೊಡಬಾರದೆಂದು ಗೌಡರ ಆಜ್ಞೆಯಾಹಿರುತ್ತದೆ. 'ಕಾಡುಗೊಲ್ಲರು ಎಷ್ಟು ಜಾಣರೆಂದರೆ ತಮ್ಮ ದೇವರನ್ನು ಅಭಿವೃದ್ಧಿ ಮಾಡಲು ತಾವೇ ಚೀಟಿ ಹಾಕಿಕೊಳ್ಳುತ್ತಾರೆ. ಒಂದು ಸಾವಿರ ಚೀಟಿ ಎತ್ತಿಕೊಂಡರೆ ಮತ್ತೊಂದು ಸಾವಿರ ಸೇರಿಸಿ ಮುಂದಿನ ಕಾಳ ಹಬ್ಬದಲ್ಲಿ ಕೊಡುವ ಪದ್ಧತಿ ಬೆಳೆಸಿಕೊಂಡಿದ್ದಾರೆ. ಹೀಗೆ ಬಂದಿರುವ ದುಡ್ಡಿನಿಂದ ದೇವಾಲಯ ಕಟ್ಟಿಸುವುದು. ದೇವರಿಗೆ ಬೇಕಾಗಿರುವ ವಸ್ತುಗಳ ಖರೀದಿ ಮಾಡಲು ಬಳಸುತ್ತಾರೆ'.[೩೪]

**ಯುಗಾದಿ – ಉಗಾದಿ:** ಕಾಡುಗೊಲ್ಲರು ಯುಗಾದಿ ಹಬ್ಬವನ್ನು ಉಗಾದಿ ಎಂದು ಗ್ರಾಮೀಣ ಭಾಷೆಯಲ್ಲಿ ಕರೆಯುತ್ತಾರೆ. ಕಾಡುಗೊಲ್ಲರು ತುಂಬಾ ವಿಶಿಷ್ಟವಾಗಿ ಆಚರಣೆ ಮಾಡುತ್ತಾರೆ. ತಾವು ಪಶುಪಾಲಕರಾಗಿರುವ ಕಾರಣ ತಾವು ದಿನ ನಿತ್ಯ ಉಪಯೋಗಿಸುವ ಎಲ್ಲಾ ವಸ್ತುಗಳು ಪೂಜೆಗಳಿಗೆ ಒಳಗಾಗುತ್ತವೆ. ಕಾಡುಗೊಲ್ಲರ ಯುಗಾದಿ ಹಬ್ಬ ಪ್ರಾರಂಭವಾಗುವುದು ಅಮಾವಾಸ್ಸೆಯ ದಿನ. ಮೊದಲು ಬೆಳಗಿನ ಜಾವ ಆರು ಗಂಟೆಯ ಒಳಗೆ ಮನೆಯನ್ನೆಲ್ಲ ಶುಚಿ ಮಾಡಿ ಮಾವು ಬೇವಿನ

ತೋರಣ ಕಟ್ಟಿ ಸೂರ್ಯ ಉದಯಿಸಿದ ತಕ್ಷಣ ಸೂರ್ಯನ ಪೂಜೆಯನ್ನು ಮಾಡುತ್ತಾರೆ. ಏಕೆಂದರೆ ಕಾಡುಗೊಲ್ಲರಿಗೆ ಯುಗಾದಿಯ ಹಬ್ಬ ಹೊಸ ವರುಷವಾಗಿರುತ್ತದೆ. ಅದೇ ಹಬ್ಬದಲ್ಲಿ ಹೊಸಬಟ್ಟೆ, ಉಡುದಾರ ಎಲ್ಲವೂ ಹೊಸದರಿಂದ ಪ್ರಾರಂಭವಾಗುತ್ತವೆ. ಕತ್ತಲೆಯನ್ನು ಸರಿಸಿ ಬೆಳಕನ್ನು ಸೂರ್ಯನಿಗೆ ಮೊದಲು ಪೂಜೆಯನ್ನು ಸಲ್ಲಿಸಿ ಹಬ್ಬವನ್ನು ಪ್ರಾರಂಭಿಸುತ್ತಾರೆ. ಅನಂತರ ಮನೆಯ ಹೊಸ್ತಿಲು ಪೂಜೆ, ಹಿರಿಯರ ಪೂಜೆ. ಕಾಡುಗೊಲ್ಲರು ಹೆಚ್ಚಾಗಿ ಹಿರಿಯರ ಹಬ್ಬವನ್ನು ಯುಗಾದಿ ಹಬ್ಬದಲ್ಲಿಯೇ ಮಾಡುತ್ತಾರೆ. ತಾವು ತಂದಿರುವ ಹೊಸಬಟ್ಟೆ, ಉಡುದಾರ, ಹೂವು, ಹಣ್ಣು, ಎಲೆ ಅಡಿಕೆ ಮತ್ತು ಹೋಳಿಗೆ ಬೇವು ಬೆಲ್ಲ ಎಲ್ಲವನ್ನು ಹಿರಿಯರ ಗುಡ್ಡೆಯ ಮೇಲೆ ಇಟ್ಟು ಪೂಜೆ ಮಾಡಿದ ನಂತರ ಬೇವು ಬೆಲ್ಲವನ್ನು ತಿಂದು ಹೊಸ ಬಟ್ಟೆ ತೊಟ್ಟುಕೊಂಡು ಭೂಮಿತಾಯಿಯ ಪೂಜೆ ಮಾಡುವಲ್ಲಿ ತೊಡಗಿರುತ್ತಾರೆ. ಇದನ್ನು ಹೊಲವನ್ನು ಮೊದಲು ಉಳುಮೆ ಮಾಡುವ ಶಾಸ್ತ್ರ ಎಂದು ಕರೆಯುತ್ತಾರೆ. ಅಂದರೆ ಆ ದಿನ ತಮ್ಮಲ್ಲಿರುವ ಎತ್ತುಗಳನ್ನು ಚೆನ್ನಾಗಿ ಮೈ ತೊಳೆದು ಅವುಗಳ ಕೋಡುಗಳಿಗೆ ಅರಿಶಿಣ ಕುಂಕುಮ ಹಚ್ಚಿ ನೇಗಿಲನ್ನು ಹೂಡಿ ಮೂರು ಸುತ್ತು ತಮ್ಮ ಹೊಲಗಳಲ್ಲಿ ಬೇಸಾಯ ಹೊಡೆಯುತ್ತಾರೆ. ಮೂರನೆಯ ಸುತ್ತಿನಲ್ಲಿ ಪೂರ್ವಾಭಿಮುಖವಾಗಿ ಬೇಸಾಯ ನಿಲ್ಲಿಸಿ ಮೂರು ಕಲ್ಲಿನ ಬೆನಕಗಳನ್ನಿಟ್ಟು ಒಂದು ಸಗಣಿಯ ಬೆನಕನನ್ನು ಮಾಡಿ ಅದಕ್ಕೆ ಮೂರು ಪಾಸೆ ಗರಿಕೆ ಹುಲ್ಲು ಸಿಕ್ಕಿಸಿ, ಬೋರಲಿಂಗಯ್ಯನವರು ಹೇಳುವಂತೆ ಮೂರು ಕಲ್ಲಿನ ದೇವರುಗಳೆಂದರೆ ಒಂದನೆಯದು ಭೂಮಿತಾಯಿ, ಎರಡನೆಯದು ಮಳೆರಾಯ, ಮೂರನೆಯದು ಆಕಾಶ ದೇವತೆ ಇವುಗಳನ್ನು ಶಾಸ್ತ್ರೋಕ್ತವಾಗಿ ಪೂಜೆ ಮಾಡುತ್ತಾರೆ. ನಂತರ ಪಶುಪಾಲನೆಯನ್ನು ಬಿಂಬಿಸುವಂತಹ ಕಡಗಾಲು ಪೂಜೆ ಮಾಡುತ್ತಾರೆ. ಕಡಗಾಲು ಪೂಜೆಗೆ ಹೋಳಿಗೆ ತುಪ್ಪ, ಅನ್ನ ಸಾರು, ಬಾಳೆಹಣ್ಣು ಮುಂತಾದವುಗಳನ್ನಿಟ್ಟು ಪೂಜಿಸುತ್ತಾರೆ. ಎರಡನೆಯ ಹಬ್ಬದ ದಿನ ಚಂದನ ಪೂಜೆಯನ್ನು ಮಾಡಿ ತಮ್ಮ ಹಟ್ಟಿಯ ದೇವರ ಪೂಜಾರಿಯಿಂದ ಆಶೀರ್ವಾದ ಪಡೆದು ಆನಂತರ ಎಲ್ಲಾ ಹಿರಿಯರ ಕಾಲಿಗೆ ಬಿದ್ದು ಆಶೀರ್ವಾದ ಪಡೆದುಕೊಳ್ಳುತ್ತಾರೆ. ಹಬ್ಬದ ಮೂರನೆಯ ದಿನ ಓಕುಳಿಯಾಡುತ್ತಾರೆ. ಅದಾದ ನಂತರ ಸಂಜೆ ಮಾಂಸಾಹಾವನ್ನು ಮಾಡಿಕೊಂಡು ಊಟ ಮಾಡಿ ಹಬ್ಬಕ್ಕೆ ಮುಕ್ತಾಯ ಹೇಳುತ್ತಾರೆ.

**ಕಾರ ಹುಣ್ಣಿಮೆ ಅಥವಾ ಎತ್ತಿನ ಹಬ್ಬ:** ಕಾರಬ್ಬ ಬಂದಿತೆಂದರೆ ಎತ್ತುಗಳಿಗೆ ಚಿಂತೆ ಬರುತ್ತದೆಂದು ಮಾಹಿತಿದಾರರು ಹೇಳುತ್ತಾರೆ. ಕಾಡುಗೊಲ್ಲರ ಪ್ರಕಾರ ಕಾರಬ್ಬ ಎಲ್ಲಾ ಹಬ್ಬಗಳಿಗೆ ನಾಂದಿ ಹಾಡುತ್ತದೆ. ಶಿಷ್ಟ ಸಮುದಾಯದವರು ಕಾರಹುಣ್ಣಿಮೆಯನ್ನು ಆಚರಣೆ ಮಾಡುವುದು ಬೇರೆ ಪರಿಶಿಷ್ಟರಾದ ಕಾಡುಗೊಲ್ಲರು ಆಚರಣೆ ಮಾಡುವುದು ಬೇರೆ ರೀತಿಯಾಗಿರುತ್ತದೆ. ಕಾಡುಗೊಲ್ಲರಿಗೆ ಎತ್ತುಗಳು ಮುತ್ತಿಗಿಂತ ಬೆಲೆಯುಳ್ಳವಾಗಿವೆ. ಕಾಡುಗೊಲ್ಲರ ಪ್ರಕಾರ ಭೂಮಿತಾಯಿ ಹುಟ್ಟುವುದಕ್ಕಿಂತ ಮೂರು ದಿನ ಮುಂದೆ ಬಸವಣ್ಣ ಹುಟ್ಟಿದ್ದಾನೆಂದು ಹೇಳುತ್ತಾರೆ. ಇನ್ನೊಂದು ಮಾತನ್ನು ಸಹ ಹೇಳುತ್ತಾರೆ. ಎತ್ತಿಲ್ಲದವನಿಗೆ ಎದೆ ಇಲ್ಲವೆಂದು ಹೇಳುತ್ತಾರೆ. ಎತ್ತುಗಳು ಆರ್ಥಿಕತೆಯ ಸಂಕೇತವೆಂದು ಭಾವಿಸುತ್ತಾರೆ. ಹನ್ನೆರಡನೆಯ ಶತಮಾನದ ಬಸವಣ್ಣ ಶಿಷ್ಟ ಸಮುದಾಯವನ್ನು ಬದಲಾಯಿಸಲು ಪ್ರಯತ್ನ ಪಟ್ಟರೆ ಕಾಡುಗೊಲ್ಲರ ಬಸವಣ್ಣ(ಎತ್ತುಗಳು) ಕಾಡುಗೊಲ್ಲರ ಸಂಸ್ಕೃತಿಯ ಹರಿಕಾರನಾಗಿದ್ದಾನೆ. ಅಂತಹ

ಎತ್ತುಗಳನ್ನು ಕಾರಬ್ಬದಲ್ಲಿ ಚೆನ್ನಾಗಿ ಮೈ ತೊಳೆದು ಕೋಡುಗಳನ್ನು ಎರೆದು ಬಣ್ಣ ಬಳಿಯುತ್ತಾರೆ. ಕೋಡಿನ ಹಣಸು, ಕಾಲುಗೆಜ್ಜೆ ಕೋಡಿನ ಕುಚ್ಚು ಮೈಗೆ ಜೂಲು, ಕೊರಳಿಗೆ ಗಂಟೆಸರ ಕಟ್ಟಿ ಸಿಂಗರಿಸುತ್ತಾರೆ. ನಂತರ ಗೊಂದಿಗೆಯನ್ನು ಶಾಸ್ತ್ರೋಕ್ತವಾಗಿ ಪೂಜೆ ಮಾಡಿ ಎತ್ತುಗಳಿಗೆ ಪೂಜೆ ಮಾಡುತ್ತಾರೆ. ಪೂಜೆ ಮುಗಿದ ನಂತರ ಎತ್ತುಗಳಿಗೆ ಎಡೆ ಹಾಕುತ್ತಾರೆ. ಎಡೆಯನ್ನು ಪೂರ್ತಿ ತಿನ್ನಲು ಬಿಡದೆ ಕಸಿದುಕೊಂಡು ಅವುಗಳ ಎಂಜಲು ಎಡೆಯನ್ನು ಮನುಷ್ಯರು ತಿನ್ನುತ್ತಾರೆ. ಇದರಿಂದ ತಿಳಿಯುವುದೇನೆಂದರೆ ಭೂಮಿಯನ್ನು ಉತ್ತು ಬೆಳೆ ತೆಗೆಯಲು ಸಹಕಾರಿಯಾದ ಎತ್ತುಗಳನ್ನು ಬದುಕಿನ ಅವಿಭಾಜ್ಯ ಅಂಗ ಎಂದು ಭಾವಿಸುತ್ತಾರೆ. ಇದಲ್ಲದೆ ತಮ್ಮ ಮನೆಯಲ್ಲಿರುವ ಗೊಂದಿಗೆಗೆ ಸೂರ್ಯ ಚಂದ್ರರ ಚಿತ್ರವನ್ನು ಬರೆಯುತ್ತಾರೆ.

**ಮಾರಮ್ಮನ ಹಬ್ಬ:** ಕಾಡುಗೊಲ್ಲರು ಮೊದಲು ಮಾತೃದೇವತಾ ಆರಾಧಕರಾಗಿದ್ದರು. ಅವರ ಸ್ತ್ರೀದೇವತೆಗಳೆಂದರೆ ಗೌರಸಮುದ್ರದ ಮಾರಮ್ಮ, ಬೇವಿನಹಳ್ಳಿ ಕರಿಯಮ್ಮ, ಯರಬಳ್ಳಿ ಮಾರಕ್ಕ, ಕರಿಓಬ್ಬವ್ವನಹಳ್ಳಿ ಮಾರಕ್ಕ, ಕುಕ್ಕಾಡದಮ್ಮ, ತೋಪಿನಗೊಲ್ಲಳಮ್ಮ, ಗುಂಟನೂರು ದ್ಯಾಮವ್ವ ಮಾಯಸಂದ್ರದ ಕರಿಯಮ್ಮ, ಕಾವಲಮ್ಮ ಮುಂತಾದ ಸ್ತ್ರೀ ದೇವತೆಗಳನ್ನು ಆರಾಧನೆ ಮಾಡುತ್ತಾರೆ.

ಅದರಲ್ಲೂ ಕಾಡುಗೊಲ್ಲರಿಗೂ ಗೌರಸಮುದ್ರದ ಮಾರಮ್ಮನಿಗೂ ಅವಿನಾಭಾವ ಸಂಬಂಧವಿರುವುದು. ಕಾಡುಗೊಲ್ಲರ ಸಾಂಸ್ಕೃತಿಕ ನಾಯಕರಾದ ವೀರಎತ್ತಪ್ಪ, ವೀರಜುಂಜಪ್ಪ, ವೀರಕರಿಯಣ್ಣ, ವೀರಸಾತಣ್ಣ, ವೀರನಾಗಣ್ಣ, ಕ್ಯಾತಪ್ಪ, ಪಾತಪ್ಪ ಮುಂತಾದ ದೇವರುಗಳ ಕಾವ್ಯದಲ್ಲಿ ಅಕ್ಕಳಾಗಿ ಗೌರಸಮುದ್ರದ ಮಾರಮ್ಮ ಬರುತ್ತಾಳೆ. ಜೊತೆಗೆ ಕಾಡುಗೊಲ್ಲರು ಪಶುಪಾಲಕರಾದ ಕಾರಣ ಪಶುಗಳನ್ನು ಎಲ್ಲಾ ಕಾಯಿಲೆಗಳಿಂದ ಕಾಪಾಡುವವಳು ಗೌರಸಮುದ್ರದ ಮಾರಮ್ಮ. ಹಾಗಾಗಿ ಅವಳ ಹಬ್ಬವನ್ನು ಕಾಡುಗೊಲ್ಲರು ಪ್ರತಿ ವರ್ಷ ಮಾಡುತ್ತಾರೆ. ಅದರಂತೆ ಅನೇಕ ಆಚರಣೆಗಳನ್ನು, ಹರಕೆಗಳನ್ನು ತೀರಿಸುತ್ತಾರೆ. ಗೌರಸಮುದ್ರದ ಮಾರಮ್ಮನಿಗೆ ಅಕ್ಕಿಹಿಟ್ಟಿನಾರತಿ ಎಂದರೆ ತುಂಬಾ ಇಷ್ಟವೆಂದು ಅಕ್ಕಿಹಿಟ್ಟಿನ ಆರತಿಯನ್ನು ತಯಾರು ಮಾಡಿಕೊಂಡು ಪ್ರತಿಯೊಬ್ಬ ಸ್ತ್ರೀಯರು ಮಾರಮ್ಮನಿಗೆ ಆರತಿ ಬೆಳಗುತ್ತಾರೆ. ಆರತಿಯನ್ನು ಹೊತ್ತುಕೊಂಡು ನಾರಿಯರೆಲ್ಲ ದೇವರ ಗುಡಿಯ ಸುತ್ತ ತಿರುಗಿದರೆ ಅವರ ಹಿಂದೆ ಜಾನುವಾರ ಸಮೂಹವಿರುತ್ತದೆ. ಅದರ ಹಿಂದೆ ಬೇವಿನ ಸೀರೆ ಹುಟ್ಟವರ ಗುಂಪು ಇರುತ್ತದೆ. ಆ ಬೇವಿನ ಸೊಪ್ಪನ್ನು ಮೇಯುತ್ತಿರುವ ಬಲಿ ಕೊಡಲು ಎಳೆದು ತಂದ ಕುರಿ ಮೇಕೆಗಳಿರುತ್ತವೆ. ವೆಲ್ಲವನ್ನು ಮೂರು ಸುತ್ತು ಗುಡಿಯ ಸುತ್ತಲು ತಿರುಗಿಸಿ ನಂತರ ಬಲಿ ಕೊಡಲು ಪ್ರಾರಂಭಿಸುತ್ತಾರೆ. ಮೊದಲು ಹಟ್ಟಿಯ ಗೌಡನ ಕುರಿಯನ್ನು ಬಲಿ ಕೊಡುತ್ತಾರೆ. ಕುರಿ ತಲೆಯನ್ನು ಕಡಿದು ಒಂದು ಬಲಗಾಲು ಕಡಿದು ಕುರಿಯ ಬಾಯಲ್ಲಿ ಇಟ್ಟು ನೀರು ಹಾಕುತ್ತಾರೆ. ಅದು ಹಾಕಿದ ನೀರನ್ನು ಎಳೆದುಕೊಂಡರೆ ಮಳೆ ಬರುತ್ತದೆಂದು ಇಲ್ಲದಿದ್ದರೆ ದೇವಿ ಮುನಿಸಿಕೊಂಡಿದ್ದಾಳೆಂದು ತಿಳಿದು ಮತ್ತೊಂದು ಬಲಿ ಕೊಟ್ಟು ಅದೇ ರೀತಿ ಮಾಡುತ್ತಾರೆ. ಕಾಡುಗೊಲ್ಲರಲ್ಲಿ ಹಿಂದೆ ನರಬಲಿ ಜಾರಿಯಲ್ಲಿತ್ತು ಎಂಬುದಕ್ಕೆ ಜುಂಜಪ್ಪನ ತಂದೆಯ ಶಿರವನ್ನು ಬಲಿ ಕೊಟ್ಟಿರುವ ಘಟನೆ ಕಾವ್ಯಗಳಲ್ಲಿ ಉಲ್ಲೇಖವಾಗಿದೆ.

ಆ ತಪ್ಪನ್ನು ಮುಚ್ಚಿ ಹಾಕಲು ಕೇಡು ಮಾರಿ ಹುಟ್ಟಿ ತಂದೆಯ ಮರಣಕ್ಕೆ ಕಾರಣವಾದಳೆಂದು ಹೆಣ್ಣು ಮಕ್ಕಳ ಹುಟ್ಟಿನ ಬಗ್ಗೆ ಅಸಮಧಾನಗೊಂಡಿರುವುದು ಕಂಡುಬರುತ್ತದೆ.

ಇತ್ತೀಚೆಗೆ ಬಲಿ ಕೊಡುವುದನ್ನು ಸರ್ಕಾರ ನಿಷೇಧಿಸಿದರೂ, ಸಹ ಕಾಡುಗೊಲ್ಲರು ಮಾತ್ರ ಬಲಿ ಕೊಡುವ ಪದ್ಧತಿಯನ್ನು ಮುಂದುವರಿಸುತ್ತಿದ್ದಾರೆ. ಕಾಡುಗೊಲ್ಲರು ಬಲಿ ಕೊಡುವುದು ಕುರಿ ಮೇಕೆಗಳನ್ನಲ್ಲದೆ ಕೋಣಗಳನ್ನು ಕೋಳಿಗಳನ್ನು ಬಲಿ ಕೊಡುವುದಿಲ್ಲ.

**ಗೂಡಿನ ಹಬ್ಬ:** ಈ ಹಬ್ಬವನ್ನು ದೀಪಾವಳಿ ತಿಂಗಳಲ್ಲಿ  ಮಾಡುತ್ತಾರೆ. ಏಕೆಂದರೆ ಆ ಸಂದರ್ಭದಲ್ಲಿ ಬಹುಪಾಲು ಬೆಳೆಗಳೆಲ್ಲ ತೆನೆ ಬಿಟ್ಟಿರುತ್ತವೆ. ಹಾಗಾಗಿ ಜುಂಜಪ್ಪನಿಗೂ ಸಹ ದೀಪಾವಳಿ ಎಂದರೆ ತುಂಬಾ ಇಷ್ಟ. ಈ ಹಬ್ಬದ ಮತ್ತೊಂದು ಹೆಸರೆಂದರೆ ದಿವಣಿಗೆ ಎಂದು ಕರೆಯುತ್ತಾರೆ. ದಿವಣಿಗೆ ಎಂದರೆ ದೀಪ ಎಂದು ಅರ್ಥ. ಜುಂಜಪ್ಪ ತಮ್ಮ ಹಿರಿಯರಿಗೆ ಅರ್ಪಿಸುವ ಸಲುವಾಗಿ ಜಾನಕಲ್ಲು ದೊಡ್ಡಕ್ಕನನ್ನು ಮೂರು ಗೊನೆ ಅವರೆಕಾಯಿ ಕೇಳಿದಾಗ ಅವಳು ಕೊಡುವುದಿಲ್ಲ ಆಗ ತನ್ನ ನಾಗಪ್ಪನಿಗೆ ಅಪ್ಪಣೆ ಮಾಡಿ ಔಷಧಿ ಹಾಕದಿರುವ ಜಾಗಕ್ಕೆ ಕಚ್ಚುವಂತೆ ಹೇಳುತ್ತಾನೆ. ಅದೇ ರೀತಿ ಹಾವು ತನ್ನ ಕೆಲಸವನ್ನು ಮಾಡುತ್ತದೆ. ಸಿರಾದ ರಂಗಣ್ಣನಿಂದ ಹಿಡಿದು ಎಲ್ಲಾ ಮಂತ್ರವಾದಿಗಳು ಬಂದರೂ ಯಾರಿಂದಲೂ ದೊಡ್ಡಕ್ಕನ್ನನ್ನು ಬದುಕಿಸಲು ಆಗುವುದಿಲ್ಲ. ಅನಂತರ ಜುಂಜಪ್ಪ ಬಂದು ಬದುಕಿಸುತ್ತಾನೆ. ನಂತರ ದೊಡ್ಡಕ್ಕನಿಗೆ ತನ್ನ ತಪ್ಪಿನ ಅರಿವಾಗಿ ಒಳ್ಳೆಯವಳಾಗುತ್ತಾಳೆ. ಹೀಗೆ ಕಾಡುಗೊಲ್ಲರು ಗೂಡಿನ ಹಬ್ಬದಲ್ಲಿ ಅನೇಕ ರೀತಿಯ ಗಿಡಗಳನ್ನು ಕಡಿದು ರಾಶಿ ಹಾಕುತ್ತಾರೆ. ನಂತರ ತಮ್ಮ ಎತ್ತುಗಳಿಗೆ ಶೃಂಗಾರ ಮಾಡಿ ಅವುಗಳನ್ನು ಗೂಡು ಇರುವ ಜಾಗಕ್ಕೆ ಮೆರವಣಿಗೆಯ ಮೂಲಕ ಎತ್ತುಗಳನ್ನು ಹೊಡೆದುಕೊಂಡು ಹೋಗುತ್ತಾರೆ. ಅಲ್ಲಿಗೆ ಹೋಗಿ ಶಾಸ್ತ್ರೋಕ್ತವಾಗಿ ಪೂಜೆಯನ್ನು ಮಾಡಿ ಕಳ್ಳಿಯ ರಾಶಿಗೆ ಬೆಂಕಿ ಇಟ್ಟು ಅದರ ಸುತ್ತಲು ದನಗಳನ್ನು ತಿರುಗಿಸುತ್ತಾರೆ. ಆ ಬೆಂಕಿಯನ್ನು ನೋಡಿ ದನಗಳು ಬೆದರುತ್ತವೆ. ಅವುಗಳು ಬೆದರಿದಷ್ಟು ಖುಷಿ ಪಡುತ್ತಾರೆ. ಕಾಡುಗೊಲ್ಲರು ಪಶುಪಾಲನೆಯ ಸಂಕೇತವಾಗಿ ಈ ಹಬ್ಬವನ್ನು ಮಾಡುತ್ತಾರೆ. ಅವರು ಹಚ್ಚಿರುವ ಬೆಂಕಿ ಸುತ್ತಲೂ ಏಳು ಹಳ್ಳಿಗೆ ಕಾಣುತ್ತದೆಂದು ಹೇಳುತ್ತಾರೆ.

ಈ ರೀತಿಯಾಗಿ ಕಾಡುಗೊಲ್ಲರು ಆಚರಿಸುವ ಪಾರಂಪರಿಕ ಸಂಪ್ರದಾಯಗಳಾದ ಹುಟ್ಟು-ಸಾವಿನ ಆಚರಣೆಗಳು, ಆಚರಿಸುವ ಹಬ್ಬ ಹರಿದಿನಗಳನ್ನು ಅವರ ಹಟ್ಟಿಗಳಲ್ಲಿ ನಡೆಯುವ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ವಿಧಿವಿಧಾನಗಳನ್ನು ಕಾಣುತ್ತೇವೆ.

**ಅಡಿಟಿಪ್ಪಣಿಗಳು**

೧. ಶಂಕರ ನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨ ಪುಟ-೩೭.

೨. ಮಲ್ಲಿಕಾರ್ಜುನ ಕಲಮರಹಳ್ಳಿ, ಕಾಡುಗೊಲ್ಲರ ಜನಪದ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ-೨೦೦೭ ಪುಟ-೧೦೧.

೩. ಮೀರಾಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲ ಬುಡಕಟ್ಟು ವೀರರು, ೨೦೦೫, ಪುಟ–೭೩.

೪. ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨ ಪುಟ–೩೩

೫. ಗುರುಲಿಂಗಯ್ಯ ಎಂ., ಕರ್ನಾಟಕದ ಗೊಲ್ಲ ಸಮುದಾಯ–ಸಮಾಜೋ–ಸಾಂಸ್ಕೃತಿಕ ಅಧ್ಯಯನ ಪು, ೨೦, ೨೦೦೪

೬. ವೆಂಕಟೇಶ, ಬುಡಕಟ್ಟುಗಳ ಸಾಮಾಜಿಕ ಬದಲಾವಣೆಗಳು, ಶ್ರೀ ಅನ್ನಪೂರ್ಣ ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ಪುಟ – ೮೫ –೨೦೧೭.

೭. ಅದೇ, ಪುಟ–೮೫.

೮. ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ಅಭಿನವ ಪ್ರಕಾಶನ, ಬೆಂಗಳೂರು, ಪುಟ–೪೪, ೨೦೧೩.

೯. ಗಂಗಾಧರ ದೈವಜ್ಞ, 'ಬುಡಕಟ್ಟು ಸಮಾಜ: ಹುಟ್ಟು–ಸಾವಿನ ನಡುವೆ', ಪುಟ ೨, ೨೦೧೫.

೧೦. ವಿರುಪಾಕ್ಷಪ್ಪ ಜಿ., ಕಾಡುಗೊಲ್ಲರ ದೈವಗಳ ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ, ಪು–೧೯, ೨೦೧೯.

೧೧. ಮಹದೇವ ಶಾಸ್ತ್ರಿ ಬಿ.ಎಂ., ಯಾದವರ ಕೈಪಿಡಿ, ಪು–೪, ೧೯೪೦.

೧೨. ಕಲಬುರ್ಗಿ ಎಂ.ಎಂ., ಕನಾಟಕದ ಕೈಫಿಯತ್ತುಗಳು,(ದಿರೋಜಿ ಕೈಪಿಯತ್), ಪು–೪೫೨, ೧೯೯೪.

೧೩. ಅದೇ, ಪು–೪೫೨.

೧೪. ಕಲಬುರ್ಗಿ ಎಂ.ಎಂ., ಕನಾಟಕದ ಕೈಫಿಯತ್ತುಗಳು(ಹಾರ್‍ನಹಳ್ಳಿ ಕೈಪಿಯತ್), ಪು–೧೮೭, ೧೯೯೪.

೧೫. ಕಲಬುರ್ಗಿ ಎಂ.ಎಂ., ಕನಾಟಕದ ಕೈಫಿಯತ್ತುಗಳು(ಕುರುಗೋಡು ಕೈಪಿಯತ್), ಪು–೪೪೧, ೧೯೯೪.

೧೬. ಕಲಬುರ್ಗಿ ಎಂ.ಎಂ., ಕನಾಟಕದ ಕೈಫಿಯತ್ತುಗಳು(ಹತ್ತಿಬೆಳಗಲು ಕೈಪಿಯತ್), ಪು–೫೫೩, ೧೯೯೪.

೧೭. ಕೃಷ್ಣಮೂರ್ತಿ ಹನೂರು, ಸಾವಿರದ ಸಿರಿ ಬೆಡಗು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೨೫, ೨೦೦೫.

೧೮. ಗುರುಲಿಂಗಯ್ಯ ಎಂ., ನಾಗಪ್ಪ ವಿ., "ಕಾಡುಗೊಲ್ಲ," ಪುಟ–೪೨, ಕನ್ನಡ ಪುಸ್ತಕ ಪಾಧಿಕಾರ, ಬೆಂಗಳೂರು, ೨೦೦೮.

೧೯. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲ ಸಂಪ್ರದಾಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮, ಪುಟ–೨೪೧.

೨೦. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ–೫೧, ೨೦೦೮.

೨೧. ಚಿತ್ರಲಿಂಗಯ್ಯ ಖ.ಸಿ., ಇಳ್ಳೇವು, ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್' ಮೈಸೂರು, ಪುಟ–೯೭, ೨೦೧೨.

೨೨. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲ ಪುಟ–೬೦, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.

೨೩. ಹಿ.ಚಿ ಬೋರಲಿಂಗಯ್ಯ, ಬುಡಕಟ್ಟು ದೈವಾರಾಧನೆ, ಪುಟ–೨, ೨೦೧೦

೨೪. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲ, ಪುಟ–೫೦, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.

೨೫. ಶಂಕರನಾರಾಯಣ ತೀ.ನಂ. ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪುಟ–೨೨೭, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೧೭.

೨೬. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲ, ಪುಟ–೭೫ ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮, ಪು–೨೫–೭೭.

೨೮. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು ಪುಟ, ೨೪೧–೨೪೨

೨೯. ಗುರುಲಿಂಗಯ್ಯ ಎಂ. ವಿ., ನಾಗಪ್ಪ ವಿ., "ಕಾಡುಗೊಲ್ಲ" ಪುಟ–೪೨, ಕನ್ನಡ ಪುಸ್ತಕ ಪಾಧಿಕಾರ, ಬೆಂಗಳೂರು, ೨೦೦೮.

೩೦. ಗುರುಲಿಂಗಯ್ಯ ಎಂ., ನಾಗಪ್ಪ ವಿ., 'ಕಾಡುಗೊಲ್ಲ' ಪುಟ–೯೭, ೨೦೦೮.

೩೧. ಅದೇ, ಪುಟ ೯೭.

೩೨. ಅದೇ, ಪುಟ–೯೯.

೩೩. ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪುಟ, –೧೯೫, ೨೦೧೭.

೩೪. ವಿರುಪಾಕ್ಷಪ್ಪ ಜಿ., 'ಕಾಡುಗೊಲ್ಲರ ದೈವಗಳ ಸಾಂಸ್ಕೃತಿಕ ಅಧ್ಯಯನ' ಕನ್ನಡ ವಿಶ್ವವಿದ್ಯಾಲಯ, ಹಂಪಿ ಇಲ್ಲಿಗೆ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ, ಪುಟ–೨೨೮, ೨೦೧೮.

೩೫. ಅದೇ, ಪು–೨೨೮

# ಅಧ್ಯಾಯ : ನಾಲ್ಕು

# ಕಾಡುಗೊಲ್ಲರ ಪಾರಂಪರಿಕ ಕುಲಕಸುಬುಗಳು

# ಅಧ್ಯಾಯ : ನಾಲ್ಕು
# ಕಾಡುಗೊಲ್ಲರ ಪಾರಂಪರಿಕ ಕುಲಕಸುಬುಗಳು

## ೪.೧. ಪೀಠಿಕೆ

ಪ್ರಸ್ತುತ ದಿನಗಳಲ್ಲಿ ಕಾಡುಗೊಲ್ಲರ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಉತ್ತಮವಾಗಿಲ್ಲ ಎಂದು ಹೇಳಬಹುದು. ಇನ್ನೂ ಕೃಷಿ ಕಾರ್ಮಿಕರಾಗಿ ಕಾಡುಗೊಲ್ಲರು ಕೆಲಸ ಮಾಡುತ್ತಿದ್ದಾರೆ. ಕಾಡುಗೊಲ್ಲರಲ್ಲಿ ಬಹುಪಾಲು ಜನರು ಉಳುಮೆ ಮಾಡಲಿಕ್ಕೆ ಜಮೀನು ಇಲ್ಲದೆ ಕೃಷಿ ಕಾರ್ಮಿರಾಗಿ ಕೆಲಸ ಮಾಡುತ್ತಿದ್ದಾರೆ. ಇದು ಇವರು ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗು ಶೈಕ್ಷಣಿಕವಾಗಿ ಹಿಂದುಳಿದಿರುವಿಕೆಯ ಮಾನದಂಡವಾಗಿದೆ. 'ರಾಜ್ಯದ ಮೂರನೇ ಹಿಂದುಳಿದ ವರ್ಗದ ಆಯೋಗವು ರಾಜ್ಯದೆಲ್ಲೆಡೆ ನಡೆಸಿದ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸಮೀಕ್ಷೆಯ ಪ್ರಕಾರ ಕಾಡುಗೊಲ್ಲರ ಸಮುದಾಯವು ಅತ್ಯಂತ ಹೆಚ್ಚಿನ ಭೂರಹಿತ ಮತ್ತು ಜಾಗರಹಿತ ಸಮುದಾಯದಲ್ಲಿ ಒಂದು ಎಂಬುದಾಗಿ ತಿಳಿಸಿದೆ.'[೧] ಬಹುಪಾಲು ಮಂದಿ ಅತಿ ಸಣ್ಣ ರೈತರಾಗಿದ್ದು ಮಳೆಯಾದಾರಿತ ಬೇಸಾಯ ಪದ್ಧತಿಯನ್ನು ನಂಬಿಕೊಂಡಿದ್ದು ಇದೇ ಇವರ ಜೀವನ ನಿರ್ವಹಣೆಯ ಮಾರ್ಗವಾಗಿದೆ. ಭಾರತೀಯ ಕೃಷಿ ಮಾನ್ಸೂನ್‌ನೊಡನೆ ಆಡುವ ಜೂಜಾಟವಾಗಿದ್ದು ಸಕಾಲಕ್ಕೆ ಮಳೆಯಾಗದೆ ಸಂಕಟಕ್ಕೆ ಸಿಲುಕಿದ್ದಾರೆ. ಕೆಲವೊಮ್ಮೆ ಅತಿವೃಷ್ಟಿ ಇವೆರಡರಿಂದಲೂ ಕಾಡುಗೊಲ್ಲ ಸಮುದಾಯದ ಜನರಿಗೆ ನಕಾರಾತ್ಮಕ ಫಲ ದೊರಕುತ್ತದೆ. ಕೃಷಿ ಮೂಲತಃ ದೈಹಿಕ ಶ್ರಮ ಆಧಾರಿತ ವೃತ್ತಿ. ಕಾಡುಗೊಲ್ಲರು ಬಡವರಾಗಿದ್ದು ಆಧುನಿಕ ಯಂತ್ರೋಪಕರಣಗಳನ್ನಾಗಲಿ, ಉತ್ತಮ ತಳಿಯ ಬೀಜ, ಕೀಟನಾಶಕಗಳನ್ನಾಗಲಿ ಬಳಸಲು ಅಶಕ್ತರಾಗಿದ್ದು ತಮ್ಮ ತುಂಡು ಹಿಡುವಳಿ ಜಮೀನಿನಲ್ಲಿ ಹೆಚ್ಚು ಇಳುವರಿಯನ್ನು ಪಡೆಯಲಾಗದೆ ಮತ್ತಷ್ಟು ಬಡವರಾಗುತ್ತ ಸಾಗಿ ಸಾಲ ಎಂಬ ಶೂಲದ ಸಂಕೋಲೆಯಲ್ಲಿ ಸಿಲುಕಿದ್ದಾರೆ.

ಕೃಷಿ ಹಾಗೂ ಕೃಷಿ ಕಾರ್ಮಿಕರಷ್ಟೇ ಅಲ್ಲದೆ ಕೂಲಿ ಕೆಲಸದಿಂದ ಜೀವನ ನಡೆಸುತ್ತಿರುವ ಕಾಡುಗೊಲ್ಲ ಜನರು ಶೇಕಡ ೧೫.೩ರಷ್ಟು ಇರುವುದು ಅಧ್ಯಯನದ ಸಮಯದಲ್ಲಿ ದೃಢಪಟ್ಟಿದೆ. ಸ್ವಂತ ಜಮೀನು ಇಲ್ಲದ ಮತ್ತು ಕೃಷಿ ಕಾರ್ಮಿಕರಾಗಿ ದುಡಿಯುವ ಕೆಲಸದಿಂದ ವಂಚಿತರಾದ ಇವರು ಕೂಲಿಕಾರರಾಗಿ ದುಡಿಯುತ್ತಿದ್ದು ಬಡವರಾಗಿದ್ದಾರೆ. ಹಿಂದೆ ಪಶುಸಂಗೋಪನೆಯನ್ನು ತಮ್ಮ ಮೂಲ ವೃತ್ತಿಯನ್ನಾಗಿಸಿ ಕೊಂಡಿದ್ದ ಇವರ ಪ್ರಮಾಣ ದಿನದಿಂದ ದಿನಕ್ಕೆ ಆ ವೃತ್ತಿಯಿಂದ ಹಿಂದೆ ಸರಿದಿದ್ದಾರೆ. ಪ್ರಸ್ತುತ ಅಧ್ಯಯನದಿಂದ ತಿಳಿದಿರುವುದೇನೆಂದರೆ ಕಾಡುಗೊಲ್ಲ ಜನರು ಪಶುಸಂಗೋಪನೆಯಲ್ಲಿ ತೊಡಗಿರುವುದು

ಕಂಡುಬಂದಿದೆ. ಪಶುಸಂಗೋಪನೆ ಲಾಭದಾಯಕ ವೃತ್ತಿಯಾಗಿದ್ದರೂ ಪ್ರಸ್ತುತ ದಿನಗಳಲ್ಲಿ ಹುಲ್ಲುಗಾವಲುಗಳು ಇಲ್ಲದಿರುವುದು ಮತ್ತು ಪಶುಸಂಬಂಧಿ ಹೊಸ ಹೊಸ ಮಾರಣಾಂತಿಕ ಕಾಯಿಲೆಗಳಿಂದಾಗಿ ಈ ಸಮುದಾಯದವರು ಕೈ ಸುಟ್ಟುಕೊಂಡಿದ್ದಾರೆ. ಪ್ರಸ್ತುತ ದಿನಗಳಲ್ಲಿ ಇವರು ಶೈಕ್ಷಣಿಕವಾಗಿ ಹಿಂದುಳಿದಿರುವಿಕೆಯನ್ನು ಸ್ಪಷ್ಟಪಡಿಸುತ್ತದೆ. ಕುರಿಸಾಕಾಣಿಕೆಯನ್ನು ಸಾಕಷ್ಟು ಜನ ಮುಂದುವರಿಸದೆ ಇರುವುದಕ್ಕೆ ಕಾರಣ ಇಂದು ಹುಲ್ಲುಗಾವಲುಗಳು ಮಾಯವಾಗಿರುವುದು ಕಾಣಬಹುದು. ಇದಕ್ಕೆ ಕಾರಣ ಇಂದಿನ ಆಧುನೀಕರಣ, ಕೈಗಾರೀಕರಣ, ನಗರೀಕರಣ, ಹೊಸಶಿಕ್ಷಣ ಪದ್ಧತಿಗಳು, ಸರ್ಕಾರದ ನೂತನ ಯೋಜನೆಗಳು ಉದಾಹರಣೆಗೆ 'ಚಳ್ಳಕೆರೆ ತಾಲ್ಲೋಕಿನ ಡಿ.ಆರ್.ಡಿ.ಓ. ಸಂಸ್ಥೆಗೆ ೪೨೯೦ ಎಕರೆ, ಭಾರತೀಯ ವಿಜ್ಞಾನ ಸಂಸ್ಥೆಗೆ(ಐ.ಐ.ಎಸ್.ಸಿ)ಗೆ ೧೫೦೦ ಎಕರೆ, ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆಗೆ(ಇಸ್ರೋ) ೪೭೩ ಎಕರೆ ಹಾಗೂ ಬಾಬಾ ಆಟೋಮಿಕ್ ರಿಸರ್ಚ್ ಸೆಂಟರ್‌ಗೆ ೧೮೧೦ ಎಕರೆ ಒಟ್ಟಾರೆಯಾಗಿ ಸುಮಾರು ೭೦೦೦' ಎಕರೆ ಅಮೃತ್ ಮಹಲ್‌ನಂತಹ ಕಾವಲುಗಳನ್ನು ವಶಪಡಿಸಿಕೊಂಡಿರುವುದನ್ನು ಕಾಣುತ್ತೇವೆ. ಅಂದರೆ ಇದನ್ನು ವಶಪಡಿಸಿಕೊಂಡಿರುವುದು ತಪ್ಪು ಎಂದಲ್ಲ, ಆದರೆ ಹೆಚ್ಚು ಕೃಷಿಭೂಮಿಗೆ ಅವಲಂಬಿತರಿರುವ ಸಮುದಾಯಗಳ ಭಾಗದಲ್ಲಿ ಈ ರೀತಿಯ ಯೋಜನೆಗಳು ಅನುಷ್ಠಾನ ಮಾಡಬಾರದು. ಆದರೆ ಸರ್ಕಾರ ದೇಶದ ರಕ್ಷಣೆಯ ಹಿತದೃಷ್ಟಿಯಿಂದ ಇಂತಹ ಯೋಜನೆಗಳಿಗೆ ಸೂಕ್ತ ನೈಸರ್ಗಿಕ ಭದ್ರತೆಯನ್ನು ಕಂಡುಕೊಳ್ಳಬೇಕಾಗುತ್ತದೆ.

ಕೃಷಿಯಿಂದ ಹೊರಬಂದ ಬುಡಕಟ್ಟು ಸಮುದಾಯಗಳು ಕಡುಬಡತನದಿಂದ ಜೀವನ ನಿರ್ವಹಿಸುವುದೇ ಕಷ್ಟವಾಗಿರುವ ಈ ಸಂದರ್ಭದಲ್ಲಿ ವ್ಯಾಪಾರ ಕ್ಷೇತ್ರ ಕೈಗೆಟುಕದ ನಕ್ಷತ್ರ. ಆರ್ಥಿಕವಾಗಿ ಹಿಂದುಳಿದಿರುವ ಈ ಸಮುದಾಯದವರಲ್ಲಿ ಸ್ವಲ್ಪ ಪ್ರಮಾಣದಲ್ಲಿ ಕಾಡುಗೊಲ್ಲ ಸಮುದಾಯದವರು ಇತ್ತೀಚೆಗೆ ಸಣ್ಣಪುಟ್ಟ ವ್ಯಾಪಾರ ಚಟುವಟಿಕೆಗಳಲ್ಲಿಯೂ ಕೂಡ ತೊಡಗಿಸಿಕೊಂಡಿರುವುದನ್ನು ಕಾಣುತ್ತೇವೆ.

ಪಾರಂಪರಿಕವಾಗಿ ಬೆಳೆದು ಬಂದಂತಹ ತಮ್ಮ ಸಾಂಪ್ರದಾಯಿಕ ಕುಲಕಸುಬುಗಳನ್ನು ಮುಂದುವರಿಸಿಕೊಂಡು ಬಂದಿರುವವರೆಂದರೆ ಅದು ಬುಡಕಟ್ಟು ಸಮುದಾಯದಲ್ಲಿ ಮಾತ್ರ. ಪರಂಪರಾಗತವಾಗಿ ಸಾಗಿಬಂದ ಆಚಾರ, ನಂಬಿಕೆ, ಜೀವನವಿಧಾನ, ವೃತ್ತಿ ಇವುಗಳಿಂದ ಅವರು ಸಂಪೂರ್ಣವಾಗಿ ಹೊರಬರಲಾರರು. ಇದಕ್ಕೆ ಪೂರಕ ಎಂಬಂತೆ ಬುಡಕಟ್ಟು ಸಮುದಾಯವಾದ ಕಾಡುಗೊಲ್ಲ ಸಮುದಾಯದ ಜನರು ತಮ್ಮ ಸಾಂಪ್ರದಾಯಿಕ ಕಸುಬಿಗೆ ಕಟ್ಟು ಬಿದ್ದಿರುವುದು ಈ ಅಧ್ಯಯನದಿಂದ ತಿಳಿದುಬಂದಿದೆ. ಇವರ ಈ ಮನೋಭಾವಕ್ಕೆ ಈ ಜನಾಂಗದವರಿಗೆ ಆಧುನಿಕ ಶಿಕ್ಷಣ, ವೈಜ್ಞಾನಿಕ ಮನೋಭಾವ ಇಲ್ಲದಿರುವುದೇ ಕಾರಣವಾಗಿದೆ. ಈ ಪ್ರವೃತ್ತಿಯೇ ಈ ಜನಾಂಗದವರ ಹಿಂದುಳಿದಿರುವಿಕೆಗೂ ಬಹುಪಾಲು ಅನ್ವಯವಾಗುತ್ತದೆ. ಕಾಡುಗೊಲ್ಲರ ಸಾಂಪ್ರದಾಯಿಕ ಕಸುಬುಗಳಾದ ಕೃಷಿ ಮತ್ತು ಪಶುಸಂಗೋಪನೆಗಳು ವೈಜ್ಞಾನಿಕವಾಗಿಲ್ಲದಿರುವುದರಿಂದ ಮತ್ತು

ದೀರ್ಘಾವಧೀಯವುಗಳಾಗಿದ್ದು ಕಡಿಮೆ ವರಮಾನವನ್ನು ತರುತ್ತವೆ. ಹಾಗಾಗಿಯೇ ಇವರು ಹಿಂದುಳಿದವರಲ್ಲಿ ಹಿಂದುಳಿದವರಾಗಿ ಸಮಾಜದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಗೌರವ ಮತ್ತು ಮಾನ್ಯತೆಗಳಿಂದ ಕಡೆಗಣಿಸಲ್ಪಟ್ಟಿದ್ದಾರೆ.

ಕುರಿ ಸಾಕಾಣಿಕೆ ಕಾಡುಗೊಲ್ಲ ಸಮುದಾಯಕ್ಕೆ ವರದಾನವಾಗಿರುವಂತೆ, ಶಾಪವೂ ಆಗಿದೆ. ಇದನ್ನೇ ತಮ್ಮ ಸಾಂಪ್ರದಾಯಿಕ ವೃತ್ತಿಯನ್ನಾಗಿ ಉಳಿಸಿಕೊಂಡು ಬಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ ಕುರಿ ಸಾಕಾಣಿಕೆ ಸಾಮಾಜಿಕ ಗೌರವವನ್ನು ತಂದುಕೊಡುವುದಿಲ್ಲ ಎಂಬುದನ್ನು ಅರಿತ ಆಧುನಿಕ ಮನೋಭಾವ ಮತ್ತು ಜೀವನಶೈಲಿಯನ್ನು ಅನುಸರಿಸಲು ಮುಂದಾಗಿರುವ ಈ ಜನಾಂಗದ ಯುವ ಪೀಳಿಗೆಯು ಈ ವೃತ್ತಿಗೆ ವಿದಾಯ ಹೇಳಲು ತುದಿಗಾಲಲ್ಲಿ ನಿಂತಿದ್ದಾರೆ. ಈ ವೃತ್ತಿಯಿಂದ ವಿಮುಕ್ತಿ ಬಯಸಿದ್ದಾರೆ. ಕುರಿ ಸಾಕಾಣಿಕೆ ಲಾಭದಾಯಕವಾದರೂ ತ್ರಾಸದಾಯಕ. ಕಾವಲು ಇಲ್ಲವಾಗುತ್ತಿರುವುದು, ಹೊಸ ಹೊಸ ಮಾದರಿಯ ರೋಗಗಳು ಹರಡುತ್ತಿರುವುದು, ಸಾಮಾಜಿಕ ಪ್ರತಿಷ್ಠೆ ಮತ್ತು ಗೌರವ ಪಡೆಯಲು ಜೊತೆಗೆ ಆಧುನಿಕ ಸಮಾಜಕ್ಕೆ ನಿಕಟವರ್ತಿಯಾಗಿ ತಮ್ಮ ಸಮುದಾಯವನ್ನು ಮುಂಚೂಣಿಯಲ್ಲಿ ನಿಲ್ಲಿಸುವ ಉದ್ದೇಶಗಳಿಂದ ಶಿಕ್ಷಿತರು, ಪ್ರಜ್ಞಾವಂತರು, ನಾಗರಿಕತೆಗೆ ತವಕಿಸುವ ಇಂದಿನ ಯುವ ಪೀಳಿಗೆಯು ಕುರಿ ಸಾಕಾಣಿಕೆ ವೃತ್ತಿಯಿಂದ ದೂರ ಉಳಿದಿದ್ದಾರೆ.

ಮನುಷ್ಯರು ಮನುಷ್ಯರನ್ನೇ ಪ್ರೀತಿಸುವುದು ಕಷ್ಟವಾಗಿರುವ ಈ ಆಧುನಿಕ ಸಮಾಜದಲ್ಲಿ ಪ್ರಾಣಿಗಳನ್ನು ಪ್ರೀತಿಸುವ ಜನರಿದ್ದಾರೆ ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ಪ್ರಾಣಿಗಳನ್ನು ತಮ್ಮ ಮಕ್ಕಳಂತೆ ಪೋಷಿಸುವ ಗುಣ ನಿಸರ್ಗದ ಮಕ್ಕಳಲ್ಲಿದೆ. ಅವರೇ ಬುಡಕಟ್ಟು ಸಮುದಾಯದವರಾಗಿದ್ದಾರೆ. ಈ ಸಮುದಾಯಗಳಲ್ಲಿ ಕಾಡುಗೊಲ್ಲರು ಸೇರುತ್ತಾರೆ. ಕಾಡುಗೊಲ್ಲ ಸಮುದಾಯವು ಬುಡಕಟ್ಟು ಸಮುದಾಯವಾಗಿದ್ದು ಬುಡಕಟ್ಟು ಜನಸಮುದಾಯದ ಎಲ್ಲ ಗುಣ ಲಕ್ಷಣಗಳು ಇಂದಿಗೂ ಈ ಸಮುದಾಯದವರಲ್ಲಿ ಕಂಡುಬರುತ್ತವೆ. ಬುಡಕಟ್ಟು ಜನರು ಪ್ರತ್ಯೇಕತೆಯನ್ನು ಒಪ್ಪುವ ಮನೋಭಾವದವರು. ಇದಕ್ಕೆ ಪ್ರಧಾನ ಕಾರಣ ಜನಾಂಗದ 'ಪರಿಶುದ್ಧತೆ' ಮತ್ತು ಜನಾಂಗದ 'ಪಾವಿತ್ರತೆ'ಯೇ ಆಗಿದೆ. ಪ್ರಸ್ತುತ ಅಧ್ಯಯನದಲ್ಲಿ 'ಹಟ್ಟಿ'ಯನ್ನು ತಮ್ಮ ವಾಸಸ್ಥಳವಾಗಿ ಆಯ್ಕೆ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಕಾಡುಗೊಲ್ಲರು ಸಾಮಾನ್ಯವಾಗಿ ಇತರೆ ಜನಸಮುದಾಯದವರೊಂದಿಗೆ ವಾಸವಾಗಿರದೆ ಊರಿನವರಿಂದ ಪ್ರತ್ಯೇಕಿತರಾಗಿ ತಮ್ಮ ಜನಸಮುದಾಯದವರೆಲ್ಲ ಒಟ್ಟಾಗಿ ಊರ ಹೊರಹೊಲಯದಲ್ಲಿ ಪ್ರತ್ಯೇಕವಾದ ವಾಸಸ್ಥಳವನ್ನು ನಿರ್ಮಿಸಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಇವರು ವಾಸಮಾಡುವ ಸ್ಥಳವನ್ನು ಅಥವಾ ಭೌಗೋಳಿಕ ಪರಿಸರವನ್ನು 'ಹಟ್ಟಿ' ಎಂದು ಕರೆಯುವುದು ವಾಡಿಕೆ.

ಕಾಡುಗೊಲ್ಲ ಜನಾಂಗದವರು ಮೂಲತಃ ಪಶುಪಾಲನೆ, ಹೈನುಗಾರಿಕೆ, ವ್ಯವಸಾಯ ವೃತ್ತಿಯಲ್ಲಿ ತೊಡಗಿರುವುದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಜಾನುವಾರುಗಳನ್ನು ಹೊಂದಿದ್ದಾರೆ. 'ಪಶುಪಾಲನೆ ಕಾಡುಗೊಲ್ಲರ ಪ್ರಮುಖ ವೃತ್ತಿಯಾಗಿದ್ದರಿಂದ ಮಹಿಳೆಯರೂ ಸಹ ಇದರಲ್ಲಿ ತೊಡಗಿಸಿಕೊಂಡಿದ್ದಾರೆ.

ಗಂಡ ಬೇರೆ ಊರುಗಳಿಗೆ ಹೋಗಿದ್ದ ಸಂದರ್ಭದಲ್ಲಿ ಪಶುಗಳನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಮಹಿಳೆಯರು ನಿರ್ವಹಿಸುವರು.'[೩]

ಕಾಡುಗೊಲ್ಲ ಜನಾಂಗವು ಪ್ರಮುಖವಾಗಿ ಆರ್ಥಿಕ ಮೂಲವಾಗಿ ಪಶುಪಾಲನೆ ಮತ್ತು ವ್ಯವಸಾಯವನ್ನು ಅವಲಂಬಿಸಿಕೊಂಡಿದೆ. ಜಾನುವಾರುಗಳ ಸಹಾಯದಿಂದ ಆರ್ಥಿಕವಾಗಿ ತಮ್ಮ ಆದಾಯದ ಮೂಲವನ್ನು ಕಂಡುಕೊಳ್ಳುತ್ತಿದ್ದಾರೆ. ವ್ಯವಸಾಯದ ಕೆಲಸದಲ್ಲಿ ಯಂತ್ರಗಳನ್ನು ಬಳಸುವುದರ ಬದಲಾಗಿ ತಮ್ಮ ಜಾನುವಾರುಗಳ ಸಹಾಯದಿಂದಲೇ ಕೃಷಿ ಕೆಲಸಗಳಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಆದ್ದರಿಂದ ಜಾನುವಾರುಗಳ ಅವಶ್ಯಕತೆಯು ಅತಿಮುಖ್ಯವಾಗಿದೆ.

'ಕಾಡುಗೊಲ್ಲ ಸಮುದಾಯದಲ್ಲಿ ಧಾರ್ಮಿಕ ಆಚರಣೆಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಹಣ ಖರ್ಚು ಮಾಡುತ್ತಾರೆ. ಇದರಿಂದ ಉಳಿತಾಯ ಮಾಡುವ ಸಂದರ್ಭವೇ ಇವರಿಗೆ ಒದಗಿಬಂದಿಲ್ಲ.'[೪] ಕಾಡುಗೊಲ್ಲ ಸಮುದಾಯದಲ್ಲಿ ಉಳಿತಾಯ ಮನೋಭಾವ ಕಡಿಮೆ. ಆದ್ದರೂ ಸಹ ಬರುವ ಆದಾಯದಲ್ಲೇ ಸ್ವಲ್ಪ ಹಣವನ್ನು ಭವಿಷ್ಯದ ದೃಷ್ಟಿಯಿಂದ ಉಳಿತಾಯ ಮಾಡುತ್ತಿದ್ದಾರೆ. ಕೆಲವು ಸಂದರ್ಭಗಳಲ್ಲಿ ಉಳಿತಾಯ ಮಾಡಿದ ಹಣವು ಸಾಲದೆ ಬೇರೆಯವರಿಂದ ಸಾಲ ಮಾಡುವ ಸ್ಥಿತಿಯು ಸಹ ಈ ಜನಾಂಗದಲ್ಲಿರುವುದನ್ನು ತಿಳಿಯಬಹುದಾಗಿದೆ.

ಕಾಡುಗೊಲ್ಲ ಸಮುದಾಯದಲ್ಲಿ ಬಹುತೇಕ ಕುಟುಂಬಗಳು ಸಾಲದ ಶೂಲಕ್ಕೆ ಸಿಲುಕಿವೆ. ಇವರು ಪ್ರಮುಖವಾಗಿ ಹಬ್ಬ ಹರಿದಿನಗಳಿಗೆ, ಮದುವೆ, ತಲೆಕೂದಲು ತೆಗೆಸಲು, ಋತುಮತಿ ಸಮಾರಂಭ, ಮನೆ ಕಟ್ಟಿಸಲು, ಹುಟ್ಟು ಸಾವಿನ ವಿಧಿಯಾಚರಣೆಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಸಾಲವನ್ನು ಮಾಡುತ್ತಾರೆ.

ಸರಳ ಜೀವನವಿಧಾನವನ್ನು ಅನುಸರಿಸಿಕೊಂಡು ಬಂದಿದ್ದ ಕಾಡುಗೊಲ್ಲರು ತಮ್ಮ ಜೀವನಾವಶ್ಯಕ ವೃತ್ತಿಯಾಗಿ ಪಶುಪಾಲನೆ, ಕುರಿಸಾಕಾಣಿಕೆ, ವ್ಯವಸಾಯವನ್ನು ಅವಲಂಬಿಸಿದ್ದಾರೆ. 'ಹುಲ್ಲುಗಾವಲು ಹೆಚ್ಚಾಗಿದ್ದ ಕಾಲದಲ್ಲಿ ಇವರು ನೂರಾರು ದನಗಳನ್ನು ಸಾಕಿ ಅವುಗಳ ಹಾಲು, ಮೊಸರು, ತುಪ್ಪವನ್ನು ಮಾರಿ ಜೀವನ ಮಾಡುತ್ತಿದ್ದರು. ಇವರ ಪುರಾಣಗಳಲ್ಲಿ ಪಶುಪಾಲನೆಗೆ ಸಂಬಂಧಿಸಿದ ವಿವರಗಳೇ ಹೆಚ್ಚಾಗಿವೆ. ಇವರ ಪುರಾಣಗಳಲ್ಲಿ ಬರುವ ಸಾಂಸ್ಕೃತಿಕ ವೀರರಾದ ಎತ್ತಪ್ಪ ಮತ್ತು ಜುಂಜಪ್ಪ ಗೋಪಾಲಕರು. ಏಳು ಗೂಡಿನ ಎತ್ತುಗಳನ್ನು, ಏಳು ಗೂಡಿನ ಹಸುಗಳನ್ನು ಕಾದವರು. ಈ ಪಶುಪಾಲನೆಯಲ್ಲಿ ವಿಶೇಷವಾಗಿ ಕಷ್ಟಪಟ್ಟವರು, ವಿರೋಧಿಗಳು ಮಾಡಿಸಿದ ಮಂತ್ರ ಮಾಟಗಳನ್ನು ಎಚ್ಚರಿಕೆಯಿಂದ ಹೆದರಿಸಿ ಧೈರ್ಯವಾಗಿ ಮುನ್ನುಗ್ಗಿದವರು.'[೫] ಒಟ್ಟಾರೆ ಪಶುಪಾಲನೆ ಇವರ ಜೀವನಾವಶ್ಯಕ ವೃತ್ತಿಯಾಗಿ ಇವರ ಅರೆಬರೆ ಹೊಟ್ಟೆಯನ್ನು ತುಂಬಿಸುತ್ತಿದ್ದಾರೆ ವಿನಾಃ ಸಾಮಾಜಿಕ ಉನ್ನತ ಸ್ಥಾನಮಾನವನ್ನಾಗಲಿ, ಘನತೆ ಗೌರವವನ್ನಾಗಲಿ ತಂದುಕೊಟ್ಟಿರಲಿಲ್ಲ.

ಪಶುಪಾಲನಾ ವೃತ್ತಿಯಲ್ಲಿ ತೊಡಗಿದ್ದ ಇವರು ತಮ್ಮ ಪಶುಗಳನ್ನು ತುಂಬಾ ಪ್ರೀತಿಸುತ್ತಿದ್ದರು. ತಮ್ಮ ಕುಟುಂಬದ ಸದಸ್ಯರಿಗೆ ತೋರಿಸುತ್ತಿದ್ದ ಆತ್ಮೀಯತೆಯನ್ನು ಇವರು ತಮ್ಮ ಪಶುಗಳಿಗೂ

ತೋರಿಸುತ್ತಿದ್ದರು. ಬೇರೆ ಜನಾಂಗದವರು ಇವರನ್ನು ಪ್ರೀತಿಸಿದ್ದಕ್ಕಿಂತ ಇವರು ಬೇರೆಯವರನ್ನು ನಂಬಿ ನೆಚ್ಚಿಕೊಂಡಿದ್ದಕ್ಕಿಂತಲೂ ಇವರು ತಮ್ಮ ಮಕ್ಕಳಿಗಿಂತಲೂ ಹೆಚ್ಚಾಗಿ ಪಶುಗಳನ್ನು ಪ್ರೀತಿಸಿದ್ದೇ ಹೆಚ್ಚು. ಈ ಕಾರಣದಿಂದ ಮೇಲಿನ ಮಾತು ಸಮಂಜಸವೆನಿಸುತ್ತದೆ. ಕುರಿ ಸಾಕಾಣಿಕೆಯನ್ನು ತಮ್ಮ ಜೀವನಾಧಾರ ವೃತ್ತಿಯನ್ನಾಗಿಸಿಕೊಂಡಿದ್ದ ಇವರು ಕುರಿಗಳನ್ನು ತಮ್ಮ ಕಟುಂಬದ ಸದಸ್ಯರಂತೆ ನೋಡಿಕೊಳ್ಳುತ್ತಾರೆ. ಕುರಿ ಕಾಯವುದನ್ನೇ ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿದ್ದ ಇವರು ಹಗಲೆಲ್ಲ ಕುರಿಯ ಹಿಂದೆ ಕಳ್ಳೆ ಬೇಲಿ ಬೇಲಿಗಳನ್ನು ಸುತ್ತುತ್ತಿದ್ದು ಸಂಜೆ ಸಮಯದಲ್ಲಿ ಜಾಲಿ, ಕಾರೆ, ಬಾರೆ ಕಳ್ಳೆಯಿಂದ ನಿರ್ಮಿಸಿದ ಕೊಟ್ಟಿಗೆಗಳಲ್ಲಿ ಕುರಿಗಳನ್ನು ಕೂಡಿಹಾಕಿ ಅವುಗಳೊಂದಿಗೆ ರಾತ್ರಿ ಕಳೆಯುವ ಮೂಲಕ ಕುರಿಗಳನ್ನು ಜೋಪಾನ ಮಾಡುತ್ತಾರೆ. ಈ ಕುರಿ ಕಾಯುವಿಕೆಯ ಜೊತೆಯಲ್ಲೆ ಬೇಸಾಯವನ್ನು ಸಹ ತಮ್ಮ ಪೃವೃತ್ತಿಯನ್ನಾಗಿ ಮಾಡಿಕೊಂಡಿದ್ದು ಕಾಣಬಹುದು. ಪಶುಸಂಗೋಪನೆ, ಕುರಿಸಾಕಾಣಿಕೆ ಲಾಭದಾಯಕವಾಗಿರುವುದು ನಿಜವಾದರೂ ಬಹಳ ಶ್ರಮದಾಯಕ ಮತ್ತು ಸಮಾಜದ ಪ್ರತಿಷ್ಠೆಯ ದೃಷ್ಟಿಯಿಂದ ಕೆಳಮಟ್ಟದ ಉದ್ಯೋಗಗಳಾಗಿವೆ. ಇದನ್ನರಿತ ಕಾಡುಗೊಲ್ಲ ವಿದ್ಯಾವಂತ ವರ್ಗವು ಕುರಿಸಾಕಾಣಿಕೆ ಮತ್ತು ಪಶುಸಂಗೋಪನೆ ವೃತ್ತಿಗೆ ತಿಲಾಂಜಲಿ ಹೇಳಿ ಮಾನಸಿಕ ಶ್ರಮ ಆಧಾರಿತ ವೃತ್ತಿಗಳತ್ತ ತಮ್ಮ ಮನಸ್ಸುಗಳನ್ನು ಬದಲಾಯಿಸಿಕೊಂಡಿದ್ದಾರೆ.

ಪ್ರಸ್ತುತ ದಿನಗಳಲ್ಲಿ ಶಿಕ್ಷಣಕ್ಷೇತ್ರ ಸೃಷ್ಟಿಸಿರುವ ಹೊಸ ಹೊಸ ಉದ್ಯೋಗಗಳನ್ನು ಹರಸಿ ಗೊಲ್ಲ ವಿದ್ಯಾವಂತ ಜನತೆ ನಗರಗಳತ್ತ ಧಾವಿಸುತ್ತಿವೆ. ಕೈಗಾರೀಕರಣ, ನಗರೀಕರಣ, ಸರ್ಕಾರದ ಮೀಸಲಾತಿಗಳು ದೊರಕಿಸಿ ಕೊಡುತ್ತಿರುವ ಶಿಕ್ಷಣ ಆಧಾರಿತ ವಿವಿಧ ದರ್ಜೆಯ ಉದ್ಯೋಗಗಳನ್ನು ಪಡೆಯುವ ಮೂಲಕ ತಮ್ಮ ಮೂಲವೃತ್ತಿಯಿಂದ ಮುಕ್ತಿ ಹೊಂದುತ್ತಿದ್ದಾರೆ. ಸರ್ಕಾರಿ ಉದ್ಯೋಗ ದೊರಕಿಸಿಕೊಳ್ಳುವ ಮೂಲಕ ಕಾಡುಗೊಲ್ಲ ಜನಾಂಗವು ಪ್ರಸ್ತುತ ದಿನಗಳಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಮಹತ್ತರ ಬದಲಾವಣೆಗೆ ಒಳಪಟ್ಟು ತಮ್ಮ ಜನಾಂಗವನ್ನು ಸಮಾಜದ ಮುಖ್ಯವಾಹಿನಿಗೆ ತರುವಲ್ಲಿ ಭಾಗಶಃ ಸಫಲವಾಗಿದೆ.

ಆದರೂ ಗೊಲ್ಲ ಸಮುದಾಯದವರಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ಎಂಬಂತೆ ಸರ್ಕಾರಿ ಉದ್ಯೋಗ (ವೃತ್ತಿಗಳನ್ನು) ಪಡೆದವರಿದ್ದು ಇದರಲ್ಲಿ ಎ. ಬಿ. ಮತ್ತು ಸಿ. ದರ್ಜೆಯ ಉದ್ಯೋಗದಲ್ಲಿ ೦.೬%ರಷ್ಟು ಉದ್ಯೋಗಗಳನ್ನು ಪಡೆದವರಿದ್ದು ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಗೊಲ್ಲ ಜನಾಂಗದ ಜನಸಂಖ್ಯೆ ೧.೩%ರಷ್ಟು ಜನರು ಸರ್ಕಾರಿ ಉದ್ಯೋಗಿಗಳಾಗಿದ್ದಾರೆ. ಎಂಬುದು ಹೆಮ್ಮೆಯ ಸಂಗತಿಯೇನಲ್ಲ. ಇದನ್ನು ಮನಗಂಡು ಸರ್ಕಾರವು ಕಾಡುಗೊಲ್ಲರ ಜನಾಂಗವನ್ನು ಹಿಂದುಳಿದ ಬುಡಕಟ್ಟು ಜನಾಂಗವೆಂದು ಪರಿಗಣಿಸಿ ಸರ್ಕಾರಿ ಉದ್ಯೋಗಾವಕಾಶಕ್ಕೆ ಸಂಬಂಧಿಸಿದಂತೆ ಕಾಡುಗೊಲ್ಲರಿಗೆ ನಿಗದಿಪಡಿಸುವ ಮೀಸಲಾತಿ ಸೌಲಭ್ಯವನ್ನು ವಿಸ್ತರಿಸಬೇಕಾದ ಅವಶ್ಯಕತೆಯನ್ನು ಮನಗಾಣಬೇಕಿದೆ.[೬]

### ೪.೨. ಬೇಟೆ:

ಬೇಟೆಯು ಕಾಡುಗೊಲ್ಲರ ಪಾರಂಪರಿಕ ಕಸುಬಾಗಿದ್ದು ಕಾಡುಗೊಲ್ಲರ ಇತಿಹಾಸವನ್ನು ಗಮನಿಸಿದರೆ ಅವರು ಹುಟ್ಟು ಬೇಟೆಗಾರರು ಎಂಬುದು ತಿಳಿಯುತ್ತದೆ. ಶಬ್ದ, ಹೆಜ್ಜೆ ಗುರುತು, ಮುರಿದ ಗಿಡ ಮರಗಳು ಹಾಗೂ ವಾಸನೆಯಿಂದ ತಮ್ಮ ಬೇಟೆಯ ಅಂದಾಜು ಮಾಡಿ ಅದರಲ್ಲಿ ಯಶಸ್ವಿಯಾಗುತ್ತಿದ್ದರು. ಆದರೆ ಸರ್ಕಾರಗಳು ಬೇಟೆಯನ್ನು ನಿಷೇಧಿಸಿದ ನಂತರ ಅವರ ಈ ಕಸುಬು ಕಣ್ಮರೆಯಾಗಿದೆ. ಕಾಡುಗೊಲ್ಲರು ಪಶುಪಾಲನೆಗಿಂತ ಮುಂಚಿತವಾಗಿ ಬೇಟೆ ಸಂಪ್ರದಾಯವು ಅವರಲ್ಲಿರುವುದು ಅವರ ಸಾಂಸ್ಕೃತಿಕ ನಾಯಕರಾದ ಕಾಟಯ್ಯ, ಚಿತ್ತಯ್ಯನ ಕಾವ್ಯದಲ್ಲಿ ಉಲ್ಲೇಖ ಆಗಿರುವುದು ಕಂಡುಬರುತ್ತದೆ. ಕಾಡುಗೊಲ್ಲರು ಮುಖ್ಯವಾಗಿ ಮೊಲದ ಬೇಟೆ, ಕಾಡುಹಂದಿ ಬೇಟೆ, ಜಿಂಕೆ ಮರಿಬೇಟೆ, ಉಡದ ಬೇಟೆ ಮುಂತಾದ ಪ್ರಾಣಿಗಳನ್ನು ಬೇಟೆ ಆಡುತ್ತಾರೆ. ಬೇಟೆ ಆಡುವುದು ಸಹ ಆರ್ಥಿಕತೆಯ ಸಬಲತೆಗಾಗಿ ಎಂದು ಹೇಳಬಹುದು. ಯಾವುದೇ ಬೇಟೆಯನ್ನು ಆಡಿದರೂ ಹಟ್ಟಿಗೆ ತಂದು ಕೊಯ್ದು ಭಾಗ ಮಾಡಿ ಪ್ರತಿಯೊಂದು ಮನೆಗೂ ಮಾರಾಟ ಮಾಡುತ್ತಾರೆ. ಒಂದು ಕೆ.ಜಿ.ಗೆ ೧೦೦, ೫೦ ರೂಪಾಯಿ ಬೆಲೆಗೆ ಮಾರಾಟ ಮಾಡುತ್ತಾರೆ. ಇದರಿಂದ ಅವರ ಜೀವನ ನಿರ್ವಹಣೆಗೆ ಸಹಕಾರಿಯಾಗುತ್ತಿತ್ತು. ಕಾಡುಗೊಲ್ಲರ ಮೊದಲ ಸಾಂಸ್ಕೃತಿಕ ನಾಯಕರಾದ ಕಾಟಯ್ಯ ಮತ್ತು ಚಿತ್ತಯ್ಯ ಬೇಟೆ ಆಡಲು ಮೂರು ಸಾವಿರ ಜೂಲು ನಾಯಿಗಳನ್ನು ಬಳಕೆ ಮಾಡಿಕೊಂಡಿರುವುದು ಕಾವ್ಯಗಳಲ್ಲಿ ಉಲ್ಲೇಖವಾಗಿದೆ. ಆರು ಸಾವಿರ ಕರಿ ಕುದುರೆ, ಆರು ಸಾವಿರ ಬಿಳಿ ಕುದುರೆ ಹಾಗೂ ಆರು ಸಾವಿರ ಕಾಲಾಳುಗಳನ್ನು ಒಳಗೊಂಡು ಚಿತ್ರದುರ್ಗದಿಂದ ಜರಿಮಲೆ ಎಂದು ಹೆಸರಾಗಿರುವ ಕೂಡ್ಲಿಗಿ ತಾಲ್ಲೂಕಿನಲ್ಲಿ ಬಂದು ವಜ್ರ ಖಚಿತವಾದಂತಹ ಗೊಡಗು(ಚತ್ರಿಕೆ)ಯನ್ನು ಕಳೆದುಕೊಳ್ಳುತ್ತಾರೆ. ತಿರುಗಿಣಿ ಪಟ್ಟಣದ ಮ್ಯಾಸಬೇಡರನ್ನು ಯುದ್ಧದಲ್ಲಿ ಸೋಲಿಸಿ ನಂತರ ಕಪ್ಪೆ ಮತ್ತು ಯಮಲಲವನ್ನು ಬೇಟೆ ಆಡಿರುವ ಬಗ್ಗೆ ಅನೇಕ ಜನಪದರು ಕಥೆಗಳನ್ನು ಹೇಳುತ್ತಾರೆ. ಅದೇ ಸಂಪ್ರದಾಯವನ್ನು ಇಂದೂ ಕೂಡ ಮುಂದುವರಿಸಿಕೊಂಡು ಬರುತ್ತಿರುವುದನ್ನು ಕಾಣಬಹುದು. ಯುಗಾದಿ ಹಬ್ಬದ ಎರಡನೆಯ ದಿನ ಮುಂಜಾನೆ ಏಳು ಗಂಟೆಗೆ ಹಟ್ಟಿಯಿಂದ ಕಾಡಿಗೆ ಹೋಗಿ ಬೇಟೆ ಆಡಿಕೊಂಡು ಬಂದು ಮಾಂಸ ಆಹಾರ ಮಾಡುವುದು ಕಾಡುಗೊಲ್ಲರ ಸಂಪ್ರದಾಯ. ಇವರು ಬೇಟೆ ಆಡಿಕೊಂಡು ಬರುವವರೆಗೂ ಮ್ಯಾಸಬೇಡರ ದೊರೆಯು ಕಾಯುತ್ತಾ ಕುಳಿತಿರಬೇಕಾಗುತ್ತದೆ.

ಕಾಡುಗೊಲ್ಲರ ಸಂಪ್ರದಾಯದ ಪ್ರಕಾರ ವರ್ಷದಲ್ಲಿ ಒಂದು ಸಲವಾದರೂ ಬೇಟೆಯಾಡುವುದು ಅವರ ಪ್ರವೃತ್ತಿಗಳಲ್ಲೊಂದು. ಮಾಳಮ್ಮನನ್ನು ಮದುವೆಯಾಗಿ ಸುಖವಾಗಿ ಇರಬೇಕಾದಂತಹ ಸಂದರ್ಭದಲ್ಲಿ ಚಿತ್ತಯ್ಯ ಒಂದು ದಿನ ನಿತ್ಯಕರ್ಮ ಮುಗಿಸಿ ಬರುವಂತಹ ಸಮಯದಲ್ಲಿ ಯಾರೋ ಒಬ್ಬ ಹೊಸಬ ಊರಿನ ಹೊರಗೆ ನಾಯಿಗಳನ್ನು ಸಾಲಾಗಿ ಕಟ್ಟಿಕೊಂಡು ಬೀಡು ಬಿಟ್ಟಿರುತ್ತಾನೆ. ಚಿತ್ತಯ್ಯ ಅವನ ಬಳಿಗೆ ಹೋಗಿ ವಿಚಾರಿಸಿದಾಗ ಅವನು ಹಲವಾರು ತಳಿಯ ನಾಯಿಗಳನ್ನು ಸಾಕಿಕೊಂಡಿರುವುದನ್ನು ತಿಳಿಸುತ್ತಾನೆ. ಅಷ್ಟೇ ಅಲ್ಲದೇ ಅನೇಕ ಪ್ರದೇಶಗಳನ್ನು ಸುತ್ತಿಕೊಂಡು ಬಂದರೂ

ಯಾರೂ ಅವುಗಳನ್ನು ಕೊಂಡುಕೊಳ್ಳಲಿಲ್ಲ. ಹಾಗಾಗಿ ಇಲ್ಲಿಗೆ ಬಂದಿರುವೆ. ಇಲ್ಲಿ ಇವುಗಳನ್ನು ಕೊಂಡುಕೊಳ್ಳುವ ದೊರೆಗಳು ಇರುವರೆಂದು ಕೇಳಿಪಟ್ಟೆ ಎಂದು ಹೇಳಿದಾಗ, ಈ ನಾಯಿಗಳನ್ನು ಕೊಂಡುಕೊಳ್ಳುವ ಶಕ್ತಿ ಯಾರಿಗೂ ಇಲ್ಲವೇನೋ ಎಂದು ಹೇಳುವುದನ್ನು ಕೇಳಿಸಿಕೊಂಡ ಚಿತ್ತಯ್ಯ ಅವನ ನಾಯಿಗಳನ್ನು ಕೊಂಡುಕೊಳ್ಳುತ್ತಾನೆ.

ಒಂದು ದಿನ ಕಾಟಯ್ಯ ಚಿಂತಾಮಣಿ ಪುಸ್ತಕವನ್ನು ಬಾವಿಯ ದಡದ ಮೇಲಿಟ್ಟು ಸ್ನಾನ ಮಾಡುತ್ತಿದ್ದ ಸಂದರ್ಭದಲ್ಲಿ ಬಾಮೈದ ಬೊಮ್ಮಯ್ಯ ಚಿಂತಾಮಣಿ ಪುಸ್ತಕ ತೆಗೆದು ಓದಿದ್ದರಿಂದ ಅರಮನೆಯ ನೆಲಮಾಳಿಗೆಯಲ್ಲಿ ಇಟ್ಟಿರುವಂತಹ ಮುತ್ತು, ರತ್ನರಾಶಿ ಮತ್ತು ಮುತ್ತಿನ ಹವಳಗಳನ್ನು ಕಂಡು ಹೊಟ್ಟೆ ಉರಿಯುತ್ತದೆ. ಏನಾದರೂ ಸರಿ ಇವುಗಳು ಕಾಡುಗೊಲ್ಲರ ಬಳಿ ಇರಬಾರದೆಂದು ಉಪಾಯ ಮಾಡಿ ಚಿತ್ತಯ್ಯನ ಬಳಿಗೆ ಬಂದು ನೀವು ಎಷ್ಟು ಶೂರರಾದರೇನು ಬಂತು, ಇಷ್ಟು ವರ್ಷ ಕಳೆದರೂ ಒಂದು ಸಲವಾದರೂ ಬೇಟೆಯಾಡಿಲ್ಲವೆಂದರೆ ನೀವು ಅಸಮರ್ಥ ದೊರೆಗಳಿರಬೇಕೆಂದು ಹೀಯಾಳಿಸುತ್ತಾನೆ, ಇದರಿಂದ ಕೋಪಗೊಂಡ ಚಿತ್ತಯ್ಯ ತನ್ನ ಸಿಟ್ಟು ಕಡಿಮೆ ಮಾಡಿಕೊಂಡು ಬೇಟೆಗೆ ಹೋಗಲು ದಂಡು ತಯಾರುಮಾಡುತ್ತಾನೆ.'[೭] ಈ ರೀತಿಯಾಗಿ ಕಾಡುಗೊಲ್ಲರಲ್ಲಿ ಬೇಟೆಯ ಪ್ರವೃತ್ತಿ ಇರುವುದನ್ನು ಅವರ ಸಂಪ್ರದಾಯದಲ್ಲಿ ಕಾಣಬಹುದಾಗಿದೆ.

ಆದರೆ ಇತ್ತೀಚೆಗೆ ಸರ್ಕಾರ ಬೇಟೆ ಆಡುವುದನ್ನು ನಿಷೇಧಿಸಿರುವ ಕಾಯ್ದೆಯನ್ನು ಜಾರಿಗೆ ತಂದಿರುವುದರಿಂದ ಅಷ್ಟೇ ಅಲ್ಲ, ವನ್ಯ ಜೀವಿಗಳ ಸಂತತಿಯೂ ಕಡಿಮೆಯಾದ ಕಾರಣದಿಂದ ಕಾಡುಗೊಲ್ಲರಲ್ಲಿ ಬೇಟೆ ಆಡುವ ಸಂಪ್ರದಾಯ ಕಣ್ಮರೆಯಾಗಿದೆ ಎಂದು ಹೇಳಬಹುದು.

**೪.೩. ಪಶುಪಾಲನೆ**

ಕಾಡುಗೊಲ್ಲರ ಹೆಸರಿನಲ್ಲಿಯೇ ಅವರ ಸಂಸ್ಕೃತಿ ಅಡಗಿದೆ. ಗೋವುಗಳ ಪಾಲಕ ಗೋಪಾಲ. ಹಾಗಾಗಿ ಕಾಡುಗೊಲ್ಲರು ಬಹಳ ಹಿಂದಿನಿಂದಲೂ ಗೋವುಗಳನ್ನು ಕಾಯುತ್ತಾ ತಮ್ಮ ಬದುಕನ್ನು ರೂಪಿಸಿಕೊಂಡಿದ್ದಾರೆ.

'ಹುಲ್ಲುಗಾವಲುಗಳು ಹೆಚ್ಚಾಗಿದ್ದ ಕಾಲದಲ್ಲಿ ಇವರು ನೂರಾರು ದನಗಳನ್ನು ಸಾಕಿ, ಅವುಗಳ ಹಾಲು, ಮೊಸರು, ತುಪ್ಪವನ್ನು ಮಾರಿ ಜೀವನ ಮಾಡುತ್ತಿದ್ದರು. ಇವರ ಪುರಾಣಗಳಲ್ಲಿ ಪಶುಪಾಲನೆಗೆ ಸಂಬಂಧಿಸಿದ ವಿವರಗಳೇ ಹೆಚ್ಚಾಗಿವೆ. ಇವರ ಪುರಾಣಗಳಲ್ಲಿ ಬರುವ ಸಾಂಸ್ಕೃತಿಕ ವೀರರಾದ ಎತ್ತಪ್ಪ ಮತ್ತು ಜುಂಜಪ್ಪ ಗೋಪಾಲಕರು. ಏಳು ಗೂಡಿನ ಎತ್ತುಗಳನ್ನು ಏಳುಗೂಡಿನ ಹಸುಗಳನ್ನು ಕಾದವರು. ಈ ಪಶುಪಾಲನೆಯಲ್ಲಿ ವಿಶೇಷವಾಗಿ ಕಷ್ಟಪಟ್ಟವರು'.[೮]

ಕಾಡುಗೊಲ್ಲರ ಸೃಷ್ಟಿಪುರಾಣವನ್ನು ಗಮನಿಸಿದರೆ ಮೂಲತಃ ಕಾಡುಗೊಲ್ಲರು ಗೋವಿನ ಹೊಟ್ಟೆಯಲ್ಲಿ ಹುಟ್ಟಿದವರು ಎಂದು ಹೇಳುತ್ತಾರೆ. ಹಾಗಾಗಿ ಅವರು ಪಶುಪಾಲಕರಾದರು. ಪಶುಪಾಲನೆ ಮಾಡುವುದು ಕಷ್ಟವಾದರೂ ಆದರಿಂದ ಆದಾಯ ಕಡಿಮೆ. ಪಶುಪಾಲನೆಯನ್ನು ತಮ್ಮ ಬದುಕಿಗೆ ಆಧಾರವಾಗಿ

ನೋಡಿಕೊಂಡಿದ್ದಾರೆ. ಕಾಡಿನಲ್ಲಿಯೇ ಅವರ ವಾಸವಾಗಿರುವುದರಿಂದ ಕಾಡು ಅವರಿಗೆ ಆಶ್ರಯ ತಾಣವಾಗುವುದರ ಜೊತೆಗೆ ಅವರ ಪಾಲನೆ ಪೋಷಣೆಯನ್ನು ಮಾಡಿದೆ. ವೀರ ಕೆಂಪಣ್ಣನ ಕಾವ್ಯದಲ್ಲಿ ಪಶುಪಾಲನೆಯನ್ನು ಕುರಿತಾದ ಪದ್ಯ ಈ ರೀತಿ ಇದೆ.

ದನವ ಕಾಯಾರ ಮಕ್ಕಳು ದನವ ಕಾಯಬೇಕು

ಕುರಿಯ ಕಾಯಾರ ಮಕ್ಕಳು ಕುರಿಯ ಕಾಯಬೇಕು

ಬೇಸಾಯ ಮಾಡರ ಮಕ್ಕಳು ಬೇಸಾಯ ಮಾಡಬೇಕು

ಅಂದರೆ ಅವರವರ ಕಸುಬುಗಳನ್ನು ಅವರವರು ಮಾಡಿಕೊಂಡು ಹೋದರೆ ನಿರುದ್ಯೋಗದ ಸಮಸ್ಯೆ ಎನ್ನುವುದು ಕಾಡುವುದಿಲ್ಲ. ಹಾಗಾಗಿ ಅವರ ಮೀಸಲಾತಿಗೆ ಅನುಗುಣವಾಗಿ ವೃತ್ತಿ ಮಾಡಿಕೊಂಡು ಹೋಗುವುದರಿಂದ ಬೇರೊಬ್ಬರಿಗೆ ತೊಂದರೆ ಆಗದ ರೀತಿಯಲ್ಲಿ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗಬಹುದು.

ಆಧುನೀಕರಣ ಮತ್ತು ಜಾಗತೀಕರಣದಿಂದ ಕಾಡುಗೊಲ್ಲರ ಪಶುಪಾಲನೆ ಮೇಲೆ ದೊಡ್ಡ ಹೊಡೆತ ಬೀಳುತ್ತಿದೆ. ವಿಜ್ಞಾನ ತಂತ್ರಜ್ಞಾನ ಮುಂದುವರಿದಂತೆ ಅವರ ಉತ್ಪಾದನೆಗಳಾದ ಹಾಲು, ಮೊಸರು, ತುಪ್ಪ, ಜಾಗತಿಕ ಮಾರುಕಟ್ಟೆಯಲ್ಲಿ ಸರಿಯಾದ ಬೆಲೆ ನಿಗದಿ ಆಗದೆ ಆರ್ಥಿಕ ನಷ್ಟವನ್ನು ತಂದೊಡ್ಡುತ್ತಿವೆ. ಇದರ ಜೊತೆಗೆ ಹುಲ್ಲುಗಾವಲುಗಳೆಲ್ಲ ಜಮೀನುಗಳಾಗಿ, ಗೋಮಾಳಗಳೆಲ್ಲ ಡಿ.ಆರ್.ಡಿ.ಓ. ಹಾಗೂ ಇನ್ನಿತರ ಕಂಪನಿಗಳು ಕಬಳಿಸಿರುವುದರಿಂದ ಕಾಡುಗೊಲ್ಲರ ಬದುಕು ಅತಂತ್ರ ಸ್ಥಿತಿಯನ್ನು ತಲುಪಿದೆ ಎಂದು ಹೇಳಬಹುದು. ಕೃಷಿಯಲ್ಲಿ ಯಂತ್ರಗಳ ಬಳಕೆಯಿಂದಾಗಿ ಎತ್ತುಗಳೆಲ್ಲಾ ಕಸಾಯಿಖಾನೆ ಸೇರುವ ಸ್ಥಿತಿಯನ್ನು ತಲುಪಿದೆ. ಬೇಸಾಯಕ್ಕಾಗಿ ಎತ್ತುಗಳನ್ನು ಈಗ ಯಾರೂ ಸಹ ಬಳಸುತ್ತಿಲ್ಲ. ಮಳೆಯು ಸಹ ಕಾಡುಗೊಲ್ಲರ ಬದುಕಿನೊಂದಿಗೆ ಆಟವಾಡುತ್ತಿದೆ. ಹಾಗಾಗಿ ಕಾಡುಗೊಲ್ಲರಿಗೆ ಪಶುಪಾಲನೆ ಕಷ್ಟವಾಗುತ್ತಿದೆ. ಚಿತ್ರದುರ್ಗ ಬಯಲು ಪ್ರದೇಶವಾದುದರಿಂದ ಕಾಲಕ್ಕೆ ಸರಿಯಾಗಿ ಮಳೆಯಾಗುವುದಿಲ್ಲ. ಹಾಗಾಗಿ ಮೇವಿನ ಅಭಾವ ಎದುರಾದ ಕಾರಣದಿಂದ ಕಾಡುಗೊಲ್ಲರು ಪಶುಪಾಲನೆ ವೃತ್ತಿಗೆ ಪೂರ್ಣ ವಿರಾಮ ಇಡುವಂತಾಗಿದೆ.

ಕುಲಕಸುಬು ಬಿಡಭಾರದೆಂಬ ಕಾರಣದಿಂದ ಕೆಲವರು ತಮ್ಮ ಮನೆಗಳಲ್ಲಿ ಎತ್ತುಗಳನ್ನು ಇಲ್ಲವೆ ಹಸುಗಳನ್ನು ಸಾಕಿಕೊಂಡಿರುವುದು ಅಧ್ಯಯನದಿಂದ ತಿಳಿದುಬಂದಿದೆ. ಇದರಿಂದ ಆದಾಯ ಬರುತ್ತದೆ ಎಂಬ ಉದ್ದೇಶವನ್ನಂತು ಮರೆತಂತೆ ಇದೆ. ಇದರ ಜೊತೆಗೆ ಅವರ ಪರಂಪರೆ ಸಂಪ್ರದಾಯ ಮತ್ತು ಬುಡಕಟ್ಟು ಸಂಸ್ಕೃತಿ ಪಶುಪಾಲನೆಯನ್ನು ಮುಂದುವರಿಸುವಂತೆ ಮಾಡಿದೆ.

'ಸಾಮಾನ್ಯವಾಗಿ ಇವರಿಗೆ ದನಕರುಗಳ ಬಗ್ಗೆ ಎಷ್ಟು ಕಾಳಜಿ ಮತ್ತು ಪ್ರೀತಿ ಇರುತ್ತದೆ ಎಂದರೆ ಇವರಿಗೆ ತಿನ್ನಲು ಊಟವಿಲ್ಲದಿದ್ದರೂ ದನಕರುಗಳಿಗೆ ಹೊಟ್ಟೆ ತುಂಬಾ ಮೇವನ್ನು ಕೊಟ್ಟು ತಾವು ಉಪವಾಸ ಮಲಗುತ್ತಾರೆ. ಇಂತಹ ಸಂದರ್ಭವನ್ನು ಬರಗಾಲದ ಸಮಯದಲ್ಲಿ ನೋಡಬಹುದು.

ಕ್ಷಾಮ ತಲೆದೋರಿದಾಗ ಹಟ್ಟಿಯ ಜನರು ಮನೆಗೊಬ್ಬರಂತೆ ತಮ್ಮ ಹಸುಗಳೊಂದಿಗೆ ಬೇರೆ ಹುಲ್ಲುಗಾವಲುಗಳಿರುವ ಪ್ರದೇಶಗಳಿಗೆ ವಲಸೆ ಹೋಗಿ ತಮ್ಮ ದನಕರುಗಳನ್ನು ಸಾಕಿ ಸಲಹಿಕೊಂಡು ಬರುತ್ತಾರೆ. ಪಶುಸಂಪತ್ತನ್ನೇ ನಂಬಿ ಬದುಕುವ ಈ ಸಮುದಾಯ ತನ್ನ ಆರಾಧ್ಯ ದೈವವಾಗಿ ಎತ್ತು ದನಗಳನ್ನು ಪೂಜಿಸುತ್ತಾ ಬಂದಿದೆ. ಇಲ್ಲವೇ ದನಗಾಹಿಗಳನ್ನು ತಮ್ಮ ವಂಶದ ನಾಯಕರೆಂದು ಭಾವಿಸಿ ಪೂಜಿಸುವುದನ್ನು ಕಾಣಬಹುದಾಗಿದೆ.[೯]

ಕಾಡುಗೊಲ್ಲರಿಗೆ ಪಶುಗಳು ಮತ್ತು ಮನುಷ್ಯನು ಒಂದೇ. ಮಾನವರನ್ನು ಯಾವ ರೀತಿ ಕಾಳಜಿಯಿಂದ ನೋಡಿಕೊಳ್ಳುತ್ತಾರೋ ಹಾಗೆ ತಾವು ಸಾಕುವ ಪ್ರಾಣಿಗಳನ್ನು ನೋಡಿಕೊಳ್ಳುತ್ತಾರೆ. ಪಶುಪಾಲನೆಯಿಂದ ಜೀವನ ಸಾಗಿಸುತ್ತಿದ್ದ ಕಾಡುಗೊಲ್ಲರು ಅವರ ಆರಾಧ್ಯ ದೈವಗಳಿದ್ದಂತೆ ದನಗಳಿಗೆ ತಮ್ಮ ಪ್ರಾಣವನ್ನು ಅರ್ಪಣೆ ಮಾಡಿರುವುದು ತಿಳಿದುಬಂದಿದೆ. ಎತ್ತಪ್ಪ ಜುಂಜಪ್ಪ ವೀರ ಕೆಂಪಣ್ಣ ವೀರ ಮಿಂಚಣ್ಣ ಮುಂತಾದ ಸಾಂಸ್ಕೃತಿಕ ನಾಯಕರು ಬದುಕಿನುದ್ದಕ್ಕೂ ದನಗಳಿಗಾಗಿ ತಮ್ಮ ಪ್ರಾಣವನ್ನರ್ಪಿಸಿದ್ದಾರೆ.

### ೪.೪. ದೈವದ ರೊಪ್ಪಗಳು

ಕಾಡುಗೊಲ್ಲರು ಅತಿಯಾದ ದೈವಭಕ್ತರು. ಹಾಗಾಗಿ ತಮ್ಮ ಅಭಿವೃದ್ಧಿಗಿಂತ ಮುಖ್ಯವಾಗಿ ದೇವರನ್ನು ಅಭಿವೃದ್ಧಿಪಡಿಸುವುದು ಮುಖ್ಯವಾಗಿರುತ್ತದೆ. ಹೊಟ್ಟೆಗೆ ಊಟವಿಲ್ಲದಿದ್ದರೂ ದೇವರ ಸಂಭ್ರಮವನ್ನು ಸವಿಯಲು ಮುಂದಾಗಿರುತ್ತಾರೆ. ತಾವುಗಳು ಪಶುಪಾಲಕರಾದ ಕಾರಣ ತಾವು ಸಾಕಿಕೊಂಡಿರುವ ದನಗಳು, ಕುರಿಗಳು, ಮೇಕೆಗಳು ಮತ್ತು ಕೋಳಿಗಳು ರೋಗರುಜಿನಗಳಿಗೆ ಒಳಗಾಗಬಾರದೆಂದು ತಮ್ಮ ಆರಾಧ್ಯ ದೈವಗಳಾದ ಚಿತ್ತಯ್ಯ ಕಾಟಯ್ಯ ವೀರ ಯರ್ರಣ್ಣ, ಜುಂಜಪ್ಪ ಮತ್ತು ಎತ್ತಪ್ಪ ಮುಂತಾದ ತಮ್ಮ ದೇವರುಗಳ ಹೆಸರು ಹೇಳಿ ದೇವರಿಗೆ ಮೀಸಲು ಬಿಡುತ್ತಾರೆ. ಅಷ್ಟೇ ಅಲ್ಲ, ತಾವು ಸಾಕಿಕೊಂಡು ಬಂದಿರುವ ಪಶುಗಳನ್ನು ಏನಾದರೂ ಗುರುತು ಮಾಡುವ ಮೂಲಕ ದೇವರಿಗೆ ಬಿಡುತ್ತಾರೆ. ಎಷ್ಟೇ ಕಷ್ಟ ಬಂದರೂ ದೇವರಿಗೆ ಬಿಟ್ಟಿರುವ ಪಶುಗಳನ್ನು ಮಾರುವುದಿಲ್ಲ. ಗಂಡು ದೇವರಿಗೆ ಬಿಟ್ಟಿರುವ ಪಶುಗಳನ್ನು ಅಂದರೆ ಪುರಲಳ್ಳಿ ಭೂತಪ್ಪನನ್ನು ಹೊರತುಪಡಿಸಿ ಉಳಿದ ಯಾವ ದೇವರುಗಳಿಗೂ ಬಲಿ ಕೊಡುವುದಿಲ್ಲ ಬದಲಾಗಿ ಅವುಗಳನ್ನು ವ್ಯಾಪಾರಿಗಳಿಗೆ ಮಾರಿ ಅದರಿಂದ ಬಂದ ಹಣದಿಂದ ದೇವರಿಗೆ ಬೆಳ್ಳಿಯ ಇಲ್ಲವೆ ಬಂಗಾರದ ಆಭರಣಗಳನ್ನು ಮಾಡಿಸುತ್ತಾರೆ. ಇಲ್ಲವೆ ದೇವರ ಕೆಲಸಕ್ಕೆ ಬೇಕಾಗುವ ಯಾವುದಾದರೂ ವಸ್ತುಗಳನ್ನು ತಂದುಕೊಡುತ್ತಾರೆ. ಹೆಣ್ಣು ದೇವತೆಗಳಾದ ಗೌರಸಮುದ್ರದ ಮಾರಮ್ಮ, ಯರಬಳ್ಳಿ ಮಾರಕ್ಕ, ಕರಿ ಓಬೇವನಹಳ್ಳಿ ಮಾರಕ್ಕ, ಬೇವಿನಹಳ್ಳೀ ಕರಿಯಮ್ಮ, ಗೊಲ್ಲಾಳಮ್ಮ ಮುಂತಾದ ದೇವತೆಗಳಿಗೆ ಬಲಿ ಕೊಡುತ್ತಾರೆ. ಕೋಣ ಮತ್ತು ಹೋರಿಗಳನ್ನು ಬಿಟ್ಟರೆ ಬಲಿ ಕೊಡುವುದಿಲ್ಲ ಅವುಗಳು ಬಸವಗಳಾಗುತ್ತವೆ. ದೇವರಷ್ಟೇ ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಅವುಗಳು ಸತ್ತರೆ ದೇವರ ಹೊಲದಲ್ಲಿ ಹೂಳುತ್ತಾರೆ ಹಾಗೂ ದೇವರಂತೆ ಗದ್ದುಗೆ ಪೂಜೆ ಮಾಡುತ್ತಾರೆ. ಕೆಲವು ಸಾರಿ ಮಾರುತ್ತಾರೆ. ಮಾರಿದ ದುಡ್ಡಿನಿಂದ ದೇವರಿಗೆ ಒಡವೆ ಮಾಡಿಸುತ್ತಾರೆ. ದೇವರಿಗೆ ಬಿಟ್ಟಿರುವ ದನಗಳನ್ನು ನೋಡಿಕೊಳ್ಳಲು ಎತ್ತಿನ ಕಿಲಾರಿಗಳನ್ನು ಬಿಟ್ಟಿರುತ್ತಾರೆ. ಅವು ದೇವರ ದನಗಳಾದುದರಿಂದ

ಅವುಗಳು ಬೆಳೆದಷ್ಟು ಇಟ್ಟುಕೊಳ್ಳುತ್ತಾರೆ. ಕೆಲವು ದೇವರುಗಳಿಗೆ ದನಗಳಿದ್ದರೆ ಮಾತ್ರ ಹೊಳೆಗೆ ಹೋಗುತ್ತವೆ. ಇಲ್ಲದಿದ್ದರೆ ಹೋಗುವುದಿಲ್ಲ. ವರ್ಷಕ್ಕೆ ಒಂದು ಬಾರಿ ಶೂನ್ಯದ ಗೂಡು ಎಂದು ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಸೇರಿ ಮಾಡುತ್ತಾರೆ. ಈ ಹಬ್ಬದಲ್ಲಿ ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಒಂದೇ ತಟ್ಟೆಯಲ್ಲಿ ಊಟ ಮಾಡುತ್ತಾರೆ.

ಪ್ರತಿಯೊಬ್ಬ ಕಾಡುಗೊಲ್ಲರ ಮನೆಯಲ್ಲಿ ಎತ್ತುಗಳನ್ನು ಕಟ್ಟುವ ಗೊಂದಿಗೆಗಳಿರುತ್ತಿದ್ದವು. ಅವುಗಳ ಪಕ್ಕದಲ್ಲಿ ಮಂಚವನ್ನು ಹಾಕಿಕೊಂಡು ಹಿರಿಯ ವ್ಯಕ್ತಿಗಳು ಮಲಗುತ್ತಾರೆ. ಜೊತೆಗೆ ರಾತ್ರಿ ಇಡೀ ಅವುಗಳಿಗೆ ಹುಲ್ಲು ಮೇವು ತಿನ್ನಿಸುತ್ತಾರೆ. ಪ್ರತಿನಿತ್ಯ ಅವುಗಳ ಮೈಯನ್ನು ನೇವರಿಸುತ್ತಾರೆ. ಆದರೆ ಆಧುನಿಕತೆಯ ಪ್ರಭಾವದಿಂದಾಗಿ ಮನೆಗಳು ಚೆನ್ನಾಗಿ ಕಾಣಬೇಕೆಂಬ ಉದ್ದೇಶದಿಂದ ಎತ್ತುಗಳನ್ನು ಮನೆ ಬಿಟ್ಟು ತಮ್ಮ ಹೊಲಗಳಲ್ಲಿ ಕಟ್ಟಿಹಾಕುತ್ತಾರೆ. ಹಿಂದೆ ಇದ್ದಂತಹ ಕಾಳಜಿಗಳು ಇವತ್ತು ಕಂಡುಬರುವುದಿಲ್ಲ. ಕಾಡುಗೊಲ್ಲರು ಪ್ರಸಿದ್ಧವಾದ ಪಶುವೈದ್ಯರೆಂದು ಹೇಳಬಹುದು. ಯಾಕೆಂದರೆ ಇವರು ಅಡವಿ ನಿವಾಸಿಗಳಾದ ಕಾರಣದಿಂದ ತಮ್ಮ ಪಶುಗಳಿಗೆ ಏನಾದರೂ ರೋಗ ರುಜಿನಗಳು ಬಂದರೆ ತಾವೇ ವಾಸಿ ಮಾಡಿಕೊಳ್ಳುತ್ತಾರೆ. ಹಾಗಾಗಿ ಸರ್ಕಾರಿ ಪಶು ಚಿಕಿತ್ಸಾಲಯಗಳಿಗೆ ಅವರು ಹೋಗುವುದು ತುಂಬಾ ಕಡಿಮೆ. ಇತ್ತೀಚಿನ ದಿನಗಳಲ್ಲಿ ಗಿಡ ಮೂಲಿಕೆಗಳು ಸರಿಯಾಗಿ ಸಿಗದ ಕಾರಣ ಸರ್ಕಾರಿ ಪಶುಪಾಲನ ಕೇಂದ್ರಗಳಿಗೆ ಹೋಗುವುದನ್ನು ರೂಢಿಸಿಕೊಂಡಿದ್ದಾರೆ.

**೪.೫. ಸಾಂಪ್ರದಾಯಿಕ ಕಸುಬುಗಳು**

ಕಾಡುಗೊಲ್ಲರ ಸಾಂಪ್ರದಾಯಿಕ ಕಸುಬೆಂದರೆ ಪಶುಪಾಲನೆ. ಕಾಡುಗೊಲ್ಲರು ಸೃಷ್ಟಿಗೊಂಡಿರುವುದು ಪಶುಗಳ ಹೊಟ್ಟೆಯಲ್ಲಿ ಎಂದು ಹೇಳುತ್ತಾರೆ. ಅಷ್ಟೇ ಅಲ್ಲ, ಕಾಡುಗೊಲ್ಲರ ಸಾಂಸ್ಕೃತಿಕ ನಾಯಕರಾದ ಕಾಟಯ್ಯ, ಚಿತ್ತಯ್ಯ, ಅಂಬೆರಾಯ, ತುಂಬೆರಾಯ, ಎತ್ತಪ್ಪ ಜುಂಜಪ್ಪ, ವೀರಯರ್ರಣ್ಣ, ವೀರಕೆಂಪಣ್ಣ, ವೀರಮಿಂಚಣ್ಣ, ವೀರ ಸಾತಣ್ಣ, ವೀರ ಕರಿಯಣ್ಣ, ವೀರ ಬಡಪ್ಪ, ವೀರ ಮುದ್ದಣ್ಣ, ವೀರನಾಗಪ್ಪ, ವೀರ ಸಿಂಪಣ್ಣ ವೀರ ಚಿಕ್ಕಣ್ಣ, ವೀರ ಬೊಮ್ಮಣ್ಣ ಮುಂತಾದ ನಾಯಕರು ಪಶುಪಾಲನೆಯನ್ನೇ ಮೂಲಕಸುಬಾಗಿ ಹೊಂದಿದವರಾಗಿದ್ದರು. ಪ್ರತಿಯೊಬ್ಬ ನಾಯಕರು ಬೇರೆ ಸಮುದಾಯವಾದ ಮ್ಯಾಸ ಬೇಡರೊಂದಿಗೆ ಪಶುಗಳಿಗಾಗಿ ಹೋರಾಟ ಮಾಡಿ ಮಡಿದ ದಾಖಲೆಗಳು ಅವರ ಕಾವ್ಯಗಳಲ್ಲಿ ದೊರೆಯುತ್ತವೆ. ವೀರ ಎತ್ತಣ್ಣ ದನಗಳನ್ನು ಮೇಯಿಸಲು ಸೊಂಡೂರಿಗೆ ಕಾವಲಿಗೆ ಹೋದಾಗ ಸಂಡೂರ ಬಮ್ಮನು ಅವನ ತಲೆಯನ್ನು ಕಡಿಯುತ್ತಾನೆ. ಎತ್ತಣ್ಣನು ಹಿರಿಯೂರು, ಸಿರಾ, ತುಮಕೂರು ಹಾಗೂ ಚಳ್ಳಕೆರೆಯ ಬಯಲಿನಲ್ಲಿ ದನಗಳನ್ನು ಕಾದಿರುವುದಕ್ಕೆ ಹಲವಾರು ಕುರುಹುಗಳು ದೊರೆಯುತ್ತವೆ. ಅದೇ ರೀತಿ ಜುಂಜಪ್ಪನ ಮಹಾಕಾವ್ಯವು ಕೂಡು ಜುಂಜಪ್ಪ ಚೇಳೂರು ರಂಗಣ್ಣನ ಕಾವಲು ಗಡಿಯಲ್ಲಿ ದೊರೆಗಳ ಕಾವಲು ಸಿರಾದ ರಂಗಣ್ಣ ಕಾವಲು ಮುಂತಾದ ಕಾವಲುಗಳನ್ನು ಮೇಯಿಸಿ ದನಗಳನ್ನು ಬದುಕಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಇದೇ ರೀತಿಯಾಗಿ ಇಂದು ಸಹ ಇವರ ಕುಲಕಸುಬುಗಳು ಮುಂದುವರಿಯುತ್ತಿವೆ. ಬಯಲು ಪ್ರದೇಶಗಳಲ್ಲಿ ಸರಿಯಾಗಿ ಮಳೆಯಾಗದ

ಕಾರಣದಿಂದ ಅವರುಗಳು ವಲಸೆ ಪ್ರವೃತ್ತಿಯನ್ನು ಮುಂದುವರಿಸಿದ್ದಾರೆ. ಇದರ ಜೊತೆಗೆ ಹುಲ್ಲುಗಾವಲುಗಳೆಲ್ಲ ನಾಶವಾಗಿರುವುದರಿಂದ ಪಶುಪಾಲನೆ ತುಂಬಾ ಕಷ್ಟದಾಯಕವಾಗಿದೆ. ಹುಲ್ಲು ನೀರಿನ ಸಮಸ್ಯೆಗಳು ಕಾಡುವುದರಿಂದ ಪಶುಪಾಲನೆಯ ಬಗ್ಗೆ ತಿರಸ್ಕಾರ ಉಂಟಾಗಿದೆ. ಪಶುಪಾಲನೆಯಿಂದ ಕುಟುಂಬ ನಿರ್ವಾಹಣೆ ಮಾಡುವುದು ಕಷ್ಟವಾಗಿರುವ ಹಿನ್ನೆಲೆಯಲ್ಲಿ ಕೆಲವು ಕಾಡುಗೊಲ್ಲರು ಪಶುಪಾಲನೆಗೆ ಮುಕ್ತಿಯನ್ನು ಒದಗಿಸಿ ತಾವು ಸಂಪೂರ್ಣವಾಗಿ ದಿನಗೂಲಿ ನೌಕರರಾಗಿ ಇಲ್ಲವೇ ಕೃಷಿಯಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ.

ಇತ್ತೀಚೆಗೆ ಕಾಡುಗೊಲ್ಲ ಯುವಕರು ಸಂಪ್ರದಾಯಗಳ ಬಗ್ಗೆ ಸಾಂಪ್ರದಾಯಿಕ ಕಸುಬುಗಳ ಬಗ್ಗೆ ಹಾಗೂ ಸಾಂಸ್ಕೃತಿಕ ನಾಯಕರ ಬಗ್ಗೆ ನಂಬಿಕೆಗಳನ್ನು ಕಳೆದುಕೊಂಡಿದ್ದಾರೆ. ಹಾಗಾಗಿ ಮೂಲ ಕಸುಬುಗಳ್ನು ನಂಬಿಕೊಂಡು ವಿದ್ಯಾಭ್ಯಾಸ ಪಡೆದು ಯಾರಿಗೆ ಯಾವುದರಲ್ಲಿ ಆಸಕ್ತಿ ಇರುತ್ತದೆಯೋ ಆ ಕಸುಬು ಮಾಡಿಕೊಂಡು ಬದುಕುವುದ್ನು ಕಲಿತುಕೊಂಡಿದ್ದಾರೆ. ಸಾಂಪ್ರದಾಯಿಕ ಕಸುಬುಗಳು ಅವರ ಬಯಕೆಗಳನ್ನು ಈಡೇರಿಸುತ್ತಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಕೃಷಿಯು ಮಳೆಯಿಂದಾಗಿ ಆಡುವ ಜೂಜಾಟವಾದುದರಿಂದ ಕಾಡುಗೊಲ್ಲರ ಅಭಿವೃದ್ಧಿಯನ್ನು ಪಶುಪಾಲನೆಯ ಮೂಲಕ ಅಭಿವೃದ್ಧಿಪಡಿಸಿಕೊಳ್ಳಬಹುದು. ಯಾವ ಶಿಕ್ಷಣದ ಅವಶ್ಯಕತೆ ಇಲ್ಲದಿದ್ದರೂ ಕಾಡುಗೊಲ್ಲರು ಮೂಲ ಕಸುಬುಗಳನ್ನು ಮುಂದುವರಿಸಿಕೊಂಡು ಹೋದದ್ದೇ ಆದರೆ ತಮ್ಮ ಸ್ವಾಭಿಮಾನದ ಜೊತೆಗೆ ಗೌರವವನ್ನು ಹೊಂದಬಹುದಾಗಿದೆ.

**ಕುರಿ ಸಾಕಾಣಿಕೆ:** ಕಾಡುಗೊಲ್ಲರು ಗೋಮಾಳಗಳು ಹೊಲಗಳಾಗಿ ಪರಿವರ್ತನೆ ಹೊಂದಿದಾಗ, ಹುಲ್ಲುಗಾವಲುಗಳು ಕಡಿಮೆಯಾದಾಗ ಇವರು ಕುರಿ ಸಾಕಾಣಿಕೆಯ ಕಡೆ ಮುಖ ಮಾಡಿದ್ದಾರೆ. ಇವರು ಕಷ್ಟದಾರಿಗಳಾದ ಕಾರಣ ಗಾಳಿ ಮಳೆ ಬಿಸಿಲೆನ್ನದೆ ನೀರು ಆಹಾರ ತೊರೆದು ಕುರಿ ಕಾಯುತ್ತಾರೆ. ಒಂದು ಕಾಲದಲ್ಲಿ ಪಶುಪಾಲನೆಯ ಮೂಲಕ ಗುರುತಿಸಿಕೊಂಡಿದ್ದ ಇವರು ಪ್ರಸ್ತುತ ದಿನಗಳಲ್ಲಿ ಗೋವುಗಳಿಂದ ಆದಾಯ ಹೆಚ್ಚಾಗಿ ಬರುವುದಿಲ್ಲವೆಂದು ತಿಳಿದುಕೊಂಡಿದ್ದಾರೆ. ಆದುದರಿಯದ ಕುರಿಕಾಯುವ ವೃತಿಯನ್ನು ಮಾಡುತ್ತಿದ್ದಾರೆ. ಕುರಿ ಕಾಯುವುದು ಕುರುಬರ ವೃತ್ತಿಯಾಗಿದ್ದರೂ ಕುರುಬರು ಜಮೀನ್ದಾರರಾಗಿ ಸ್ಥಿತ್ಯಂತರ ಹೊಂದಿರುವ ಕಾರಣ ಕಾಡುಗೊಲ್ಲರು ಕುರಿ ಕಾಯುವ ವೃತ್ತಿಯುನ್ನು ಮಾಡುತ್ತಾರೆ. ಕುರುಬರು ಮತ್ತು ಗೊಲ್ಲರು ಬಹಳ ಹಿಂದೆ ಒಂದೇ ಸಮುದಾಯದವರಾಗಿದ್ದರು ಎಂಬುದಕ್ಕೆ ಹಲವಾರು ನಿದರ್ಶನಗಳು ದೊರೆಯುತ್ತವೆ. ಅಷ್ಟೇ ಅಲ್ಲ, ಕಾಡುಗೊಲ್ಲರಿಗೆ ಹಾಗೂ ಕುರುಬರಿಗೆ ವೈವಾಹಿಕ ಸಂಬಂಧಗಳು ಏರ್ಪಟ್ಟಿರುವುದು ಎತ್ತಪ್ಪನ ಕಾವ್ಯದಲ್ಲಿ ಕಂಡುಬರುತ್ತದೆ. ಎತ್ತಪ್ಪನಿಗೆ ಹಾಲು ಕುರುಬರು ಹಾಗೂ ಹಂಡೆ ಕುರುಬರು ಗೆಜ್ಜೆ ಕಾಲು ಮಲ್ಲಮ್ಮನ ಕೊಟ್ಟು ಮದುವೆ ಮಾಡಿರುವುದು ಕಂಡುಬರುತ್ತದೆ. ಯಾವಾಗ ಕುರುಬರು ನಾಗರಿಕರಣಗೊಂಡರೋ ಆಗ ಅವರ ಮಧ್ಯೆ ವೈವಾಹಿಕ ಸಂಬಂಧಗಳು ನಡೆಯಲಿಲ್ಲ. ಕಾಡುಗೊಲ್ಲರ ಹಿರಿಯರು ಹೇಳುವ ಪ್ರಕಾರ ಹನ್ನೆರಡು ಕೈವಾಡದವರು ಅವಿನಾಭಾವ ಸಂಬಂಧದಿಂದ ಜೀವಿಸುತ್ತಿದ್ದರು. ಉದಾ:

ಕುಂಚಿಟಿಗರು, ಕುರುಬರು, ನಾಯಕರು, ಮಾದಿಗರು, ಕುಂಬಾರರು, ಕಮ್ಮಾರರು, ನೇಕಾರರು, ಬಡಗಿಗಳು, ಅಗಸರು, ಹೊಲೆಯರು, ಹೂಗಾರರು, ಹಾಗೂ ಕಾಡುಗೊಲ್ಲರು ಮೂಲತಃ ಒಂದೇ ಸಮುದಾಯಗಳಾಗಿದ್ದು ಆನಂತರ ಅವರೆಲ್ಲರೂ ಬೇರೆ ಬೇರೆಯಾದರು. ಇವರುಗಳ ಜೀವನ ವಿಧಾನಗಳಲ್ಲಿ ಅಲ್ಪಸ್ವಲ್ಪ ಭಿನ್ನತೆಯೊಂದಿಗೆ ಒಂದೇ ಆಗಿರುವುದು ಕಂಡುಬರುತ್ತದೆ. ಅದರಲ್ಲೂ ಕಾಡುಗೊಲ್ಲರು ಮತ್ತು ಕುರುಬರದು ಅವಿನಾಭಾವ ಸಂಬಂಧ. ಅದು ಯಾವ ರೀತಿ ಎಂದರೆ ಕಾಡುಗೊಲ್ಲರು ಆರು ತಿಂಗಳಿಗೆ ಒಂದು ಬಾರಿ ಕುರುಬರಿಂದ ಕುರಿಯ ಉಣ್ಣೆಯನ್ನು ಕತ್ತರಿಸುತ್ತಾರೆ. ಇಂತಹ ಸಮಯದಲ್ಲಿ ಕಾಡುಗೊಲ್ಲರು ಮತ್ತು ಕುರುಬರು ಒಂದೇ ತಟ್ಟೆಯಲ್ಲಿ ಜೊತೆಗೆ ಕುಳಿತು ಊಟಮಾಡುತ್ತಾರೆ. ತುಪ್ಪಟವನ್ನು ಕತ್ತರಿಸುವುದಕ್ಕಿಂತ ಮುಂಚಿತವಾಗಿ ಕುರುಬರು ಶಾಸ್ತ್ರೋಕ್ತವಾಗಿ ಕತ್ತರಿಯನ್ನು ಮತ್ತು ಉಣ್ಣೆಯನ್ನು ಪೂಜಿಸುತ್ತಾರೆ. ನಂತರ ಆ ಹಟ್ಟಿಯಲ್ಲಿರುವ ಎಲ್ಲ ಕಾಡುಗೊಲ್ಲರಿಗೂ ಎಲೆ ಅಡಿಕೆಯನ್ನು ಕುರುಬರೇ ಕೊಡಬೇಕು. ನೂರು ಕುರಿಗಳಿದ್ದವು ಸಾವಿರ ಕುರಿಗಳಾಗಬೇಕು ಎಂದು ಕುರುಬರು ಹರಸುತ್ತಾರೆ. ಜೊತೆಗೆ ಕುರಿಯ ಹಾಲು ಕುಡಿಯುತ್ತಾರೆ. ಅಷ್ಟೇ ಅಲ್ಲ, ಇವರು ನೆಂಟ ಬಂಟರಂತೆ ತಮಾಷೆ ಮಾಡುತ್ತಾರೆ. ಉಣ್ಣೆ ಕತ್ತರಿಸುವಾಗ ಉಣ್ಣೆಗೆ ಕುರುಬರು ದುಡ್ಡು ಕೊಡುತ್ತಿದ್ದರು. ಇತ್ತೀಚೆಗೆ ಕಾಡುಗೊಲ್ಲರೇ ಒಂದು ಕುರಿಯ ಉಣ್ಣೆ ಕತ್ತರಿಸಿದರೆ ಇಂತಿಷ್ಟು ಎಂದು ದುಡ್ಡು ಕೊಡಬೇಕಾಗುತ್ತದೆ. ಏಕೆಂದರೆ ಇತ್ತೀಚೆಗೆ ಉಣ್ಣೆಯಿಂದ ಕಂಬಳಿ ತಯಾರಿಸಲು ಸಾಧ್ಯವಾಗುತ್ತಿಲ್ಲ ಅಷ್ಟೇ ಅಲ್ಲ, ಇತ್ತೀಚೆಗೆ ಕೈ ಮಗ್ಗದಿಂದ ಎಣೆಯುವ ಕಂಬಳಿಗಳು ಮಾರುಕಟ್ಟೆಯಲ್ಲಿ ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡಿವೆ. ಅದೇ ಕಂಬಳಿಯನ್ನು ಯಂತ್ರದಿಂದ ತಯಾರಿಸಿದರೆ ಅದನ್ನು ಎಲ್ಲರೂ ಕೊಳ್ಳುತ್ತಾರೆ. ಕೈಯಿಂದ ಕಷ್ಟ ಪಟ್ಟು ಹೆಣೆದ ಕಂಬಳಿಯನ್ನು ಯಾರೂ ಕೊಂಡುಕೊಳ್ಳುವುದಿಲ್ಲ. ಕೇವಲ ಧಾರ್ಮಿಕ ಇಲ್ಲವೆ ಸಾಂಸ್ಕೃತಿಕ ಕಾರಣಗಳಿಗಾಗಿ ಮಾತ್ರ ಕಂಬಳಿಯನ್ನು ಬಳಕೆ ಮಾಡುವುದನ್ನು ಕಂಡುಕೊಂಡಿದ್ದಾರೆ. ಹಾಗಾಗಿ ಇತ್ತೀಚೆಗೆ ಕಾಡುಗೊಲ್ಲರು ಮತ್ತು ಕಾಡುಕುರುಬರ ಸಂಬಂಧ ಅಷ್ಟೊಂದು ಚೆನ್ನಾಗಿರುವುದು ಕಂಡುಬರುವುದಿಲ್ಲ.

ಗೊಲ್ಲರು ಮತ್ತು ಕುರುಬರ ಸಂಬಂಧವನ್ನು ಕುರಿತು ದೇಜಗೌ ಅವರು ಈ ರೀತಿ ಅಭಿಪ್ರಾಯ ಪಡುತ್ತಾರೆ. "ಕುಂಚಿಟಿಗರು, ಕುರುಬರು, ಗೊಲ್ಲರು, ಮೂಲತಃ ಒಂದೇ ವಂಶದವರಿರಬೇಕು, ಒಂದೇ ಮನೆಯವರಿರಬೇಕು. ಈ ಮೂರು ಜಾತಿಯವರು ಹೆಚ್ಚು ಕಡಿಮೆ ಒಂದೇ ಸಂಪ್ರದಾಯದವರು. ಅವರ ನಡೆನುಡಿಗಳಲ್ಲಿ ಭೇದವಿಲ್ಲ. ಒಂದೇ ಊರಿನಲ್ಲಿ ಇಂದಿಗೂ ಅಣ್ಣ ತಮ್ಮಂದಿರಂತೆ ವಾಸಿಸುತ್ತಾರೆ. ಅಷ್ಟೇ ಅಲ್ಲ, ಕೊಡು ಕೊಳ್ಳುವದೊಂದನ್ನು ಬಿಟ್ಟು ಇವರಲ್ಲಿ ಭೇದವಾಗಲಿ ಪ್ರತ್ಯೇಕತೆಯಾಗಲಿ ಕಾಣುವುದಿಲ್ಲ. ಮೂಲತಃ ಒಂದೇ ಆಗಿದ್ದ ಜನ ಕಸುಬು ಬೇರೆಯಾದ ಕಾರಣವಾಗಿ ಬೇರೆಯಾದರು. ಬೇರೆಯಾದವರಲ್ಲಿ ಕೊಡುಕೊಳ್ಳುವಿಕೆಯಲ್ಲಿ ಕೆಲವು ದಿನ ಮುಂದುವರಿದಿರಬೇಕು. ಈ ನುಲಿಗೆಡೆಯಿಂದ ಅವರು ಸಂಪೂರ್ಣವಾಗಿ ಬೇರ್ಪಡೆಗೊಂಡರು."[೧೦]

'ಕಾಡುಗೊಲ್ಲರು ವಂಶಪಾರಂಪರಿಕವಾಗಿ ಕಷ್ಟಜೀವಿಗಳು ಆದರೆ ಯಾವುದೇ ರೀತಿಯ ನೆಲೆ ಹಾಗೂ ಆಸ್ತಿಯನ್ನು ಹೊಂದಿರುವುದಿಲ್ಲ. ಯಾವಾಗಲು ಕುರಿ ಕಾಯುವುದರಲ್ಲಿ, ದನ ಕಾಯುವುದರಲ್ಲಿ

ಮತ್ತು ಸಾಕುವುದಲ್ಲಿ ನಿರತರಾಗಿರುತ್ತಾರೆ. ಅಷ್ಟೇ ಅಲ್ಲ, ಹಾಲು ತುಪ್ಪ ಮೊಸರು ಮಾರುವುದರಲ್ಲಿ ಪ್ರಸಿದ್ಧರಾಗಿದ್ದಾರೆ. ವಾಸ್ತವವಾಗಿ ಕಾಡುಗೊಲ್ಲರದು ಬುಡಕಟ್ಟು ಸಮುದಾಯ. ಆದರೆ ಬುಡಕಟ್ಟು ಸಮುದಾಯದಿಂದ ವಂಚಿತರಾಗಿ ಆರ್ಥಿಕವಾಗಿ ಹಿಂದುಳಿದಿದ್ದಾರೆ.'[೧೧]

ಕಾಡುಗೊಲ್ಲರು ಮೂಲತಃ ಕುರಿಗಾಹಿಗಳು ಎಂಬುದನ್ನು ಗುರುತಿಸಿ ಅವರ ಆರ್ಥಿಕತೆಯನ್ನು ಕುರಿಗಳ ಮೂಲಕ ಅಳೆಯುವುದಕ್ಕೆ ಪ್ರಯತ್ನಿಸಿದರು. ಯಾರು ಹೆಚ್ಚು ಕುರಿಗಳನ್ನು ಸಾಕುತ್ತಾರೆ ಎಂಬುದರ ಮೇಲೆ ಅವರ ಶ್ರೀಮಂತಿಕೆ ನಿರ್ಧಾರವಾಗುತ್ತದೆ. ಕುರಿಗಳನ್ನು ಇಷ್ಟಪಟ್ಟು ಸಾಕಿದರೆ ಅವುಗಳಿಂದ ಆದಾಯ ಉಂಟು. ಕಾಡುಗೊಲ್ಲರ ಮಾಹಿತಿದಾರರು ಹೇಳುವ ಪ್ರಕಾರ ಕಾಡುಗೊಲ್ಲರನ್ನು ಸಮೀಕ್ಷೆ ಮಾಡುವಂತಹ ಸಮಯದಲ್ಲಿ ತಾವು ಕುರಿ ಮಾರಿದ ಸಮಯದಲ್ಲಿ ಬಂದ ದುಡ್ಡನ್ನು ಗಟ್ಟಿಯಾಗಿದ್ದರೆ ಉಳಿಯಲಿ ಜಳ್ಳು ಆದರೆ ತೂರಿಹೋಗಲಿ ಎಂದು ಗಾಳಿಯಲ್ಲಿ ತೂರಿದ ಕಾರಣದಿಂದ ಕಾಡುಗೊಲ್ಲರು ಶ್ರೀಮಂತರು. ಹಾಗಾಗಿ ಕುರಿಗಳಿಂದ ಸಾಕಷ್ಟು ಆದಾಯ ಬರುತ್ತದೆಂದು ತಿಳಿದು ಅವರನ್ನು ಇತರೆ ಹಿಂದುಳಿದ ಪಟ್ಟಿಯಲ್ಲಿ ಸೇರಿಸುವಂತೆ ಸರ್ಕಾರಕ್ಕೆ ವರದಿ ಸಲ್ಲಿಸಿದರು. ಇದರಿಂದಾಗಿ ಕಾಡುಗೊಲ್ಲರು ಬುಡಕಟ್ಟಿನ ಸಮುದಾಯದ ಎಲ್ಲಾ ಲಕ್ಷಣಗಳಿದ್ದರೂ ಹಿಂದುಳಿದ ವರ್ಗಗಳಲ್ಲಿ ಗುರುತಿಸಲ್ಪಟ್ಟಿದ್ದಾರೆ. ಚಿತ್ರದುರ್ಗ ಜಿಲ್ಲೆಯನ್ನು ಸಮೀಕ್ಷೆಗೆ ಒಳಪಡಿಸಿದಾಗ ಒಂದು ಮನೆ ಎಂದರೆ ಕನಿಷ್ಠ ಒಂದು ಕುರಿ ಮರಿಯಾದರೂ ಇರಬೇಕು. ಭೂ ಒಡೆತನದಿಂದ ವಂಚಿತವಾದಂತಹ ಸಮುದಾಯವಾದುದರಿಂದ ಅನಿವಾರ್ಯವಾಗಿ ಕುರಿ ಸಾಕಾಣಿಕೆಯ ಮೊರೆ ಹೋಗಿದ್ದಾರೆ.

**ಕುರಿಹಟ್ಟಿಗಳ ಸ್ವರೂಪ:** ಕಾಡುಗೊಲ್ಲರು ಕುರಿಗಳನ್ನು ಕೂಡುವ ಜಾಗವನ್ನು ಕುರಿಯ ಹಟ್ಟಿ ಎಂದು ಕರೆಯುತ್ತಾರೆ. ಕೆಲವು ಕಡೆ ರೊಪ್ಪಗಳೆಂದು ಕರೆಯುತ್ತಾರೆ. ಈ ರೊಪ್ಪ ಅಥವಾ ಕುರಿಹಟ್ಟಿಗಳನ್ನು ಕಾರೆಕಳ್ಳೆ ಜಾಲಿಕಳ್ಳೆ ಮತ್ತು ಲಂಟಾನ ಕಳ್ಳೆಗಳಿಂದ ನಿರ್ಮಾಣ ಮಾಡುತ್ತಾರೆ. ಪ್ರತಿಯೊಬ್ಬರು ಎರಡು ಕುರಿಹಟ್ಟಿಗಳನ್ನು ಮಾಡಿಕೊಂಡಿರುತ್ತಾರೆ. ಮರಿಗಳನ್ನು ಕೂಡಲು ಒಂದು, ದೊಡ್ಡ ಕುರಿಗಳನ್ನು ಕೂಡಲು ಮತ್ತೊಂದು. ಪ್ರತಿಯೊಂದು ಕುರಿಹಟ್ಟಿಯಲ್ಲಿ ಕಲ್ಲಿನ ಕಂಬಗಳ ಆಧಾರದಿಂದ ಒಂದು ಗುಬ್ಬ ನಿರ್ಮಿಸುತ್ತಾರೆ ಆ ಗುಬ್ಬದ ಒಳಗೆ ಒಂದು ಮಂಚಿಗೆಯನ್ನು ನಿರ್ಮಿಸುತ್ತಾರೆ. ಇದು ಸುಮಾರು ನಾಲ್ಕರಿಂದ ಆರು ಅಡಿ ಎತ್ತರವಿರುತ್ತದೆ. ಅದನ್ನು ಹತ್ತುವುದಕ್ಕೂ ವ್ಯವಸ್ಥೆ ಮಾಡಿರುತ್ತಾರೆ. ಇದರ ಸುತ್ತಲು ೨೦ರಿಂದ ೪೦ ಅಡಿ ವಿಸ್ತಾರದಲ್ಲಿ ಕಳ್ಳೆ ಕಟ್ಟಿರುತ್ತಾರೆ. ಈ ಗುಬ್ಬದ ಉದ್ದೇಶ ಮಳೆಗಾಲದಲ್ಲಿ ಕುರಿಗಳು ನೆನೆಯದಂತೆ ಕಾಪಾಡುವುದಾಗಿದೆ. ಮಳೆಗಾಲದಲ್ಲಿ ಮಾತ್ರ ಕುರಿಗಳು ಹೆಚ್ಚಾಗಿ ಕುರಿಹಟ್ಟಿಯಲ್ಲಿರುತ್ತವೆ. ಆನಂತರ ಚಳಿಗಾಲ ಮತ್ತು ಬೇಸಿಗೆ ಕಾಲ ಬಂದಿತೆಂದರೆ ಯಾರಾದರೂ ಹೊಲದಲ್ಲಿ ಮಂದೆ ಬಿಡುತ್ತಾರೆ. ಕಳ್ಳೆ ಹಾಕುವುದರ ಉದ್ದೇಶವೆಂದರೆ ಕುರಿಗಳನ್ನು ಕಳ್ಳಕಾಕರಿಂದ ರಕ್ಷಿಸುವುದು ಹಾಗೂ ತೋಳಗಳ ಹಾವಳಿಯನ್ನು ತಡೆಯುವುದಕ್ಕೆ ಮಾಡುತ್ತಾರೆ. ಈ ಕಳ್ಳೆಯು ಸುಮಾರು ೬ ರಿಂದ ೧೦ ಅಡಿಗಳ ತನಕ ಎತ್ತರವಿರುತ್ತದೆ. ನಾಲ್ಕು ಅಡಿ ಅಗಲದವಾದ ವಿಸ್ತೀರ್ಣವನ್ನು ಹೊಂದಿರುತ್ತದೆ. ಈ ಕಳ್ಳೆಯನ್ನು ಮನುಷ್ಯರು ಮತ್ತು ತೋಳಗಳು ಹಾರಲು ಸಾಧ್ಯವಿಲ್ಲ. ಈ ಕುರಿಗಳ

ರಕ್ಷಣೆಗಾಗಿ ಸದಾ ಎಚ್ಚರದಿಂದ ಇರುವಂತಹ ನಾಯಿಗಳನ್ನು ಸಾಕುತ್ತಾರೆ. ಆ ನಾಯಿಗಳು ರಾತ್ರಿ ಇಡೀ ಮನುಷ್ಯರ ಜೊತೆಗೆ ಕುರಿಯ ಕಾವಲು ಕಾಯುತ್ತವೆ. ಈ ನಾಯಿಗಳು ಒಳ್ಳೆಯ ಬೇಟೆ ನಾಯಿಗಳಾಗಿರುತ್ತವೆ. ಕೆಲವು ನಾಯಿಗಳು ಬೆಳಗಿನ ಸಮಯ ಕುರಿಹಟ್ಟಿಯ ಬಳಿ ಇದ್ದರೆ ಇನ್ನೂ ಕೆಲವು ನಾಯಿಗಳು ಕುರಿಗಳ ಹಿಂದೆ ಹೋಗುತ್ತವೆ. ಆ ನಾಯಿಗಳಿಗೆ ಹೆಸರುಗಳನ್ನು ಇಟ್ಟಿರುತ್ತಾರೆ. ಇವುಗಳು ಒಡೆಯನ ಅನುಮತಿ ಇಲ್ಲದೆ ಯಾವ ಕೆಲಸವನ್ನು ಮಾಡುವುದಿಲ್ಲ. ಇವುಗಳು ತೋಳಗಳ ಮೇಲೆ ಕುಸ್ತಿಯಾಡಿಯಾದರೂ ಕುರಿಗಳನ್ನು ರಕ್ಷಿಸುತ್ತವೆ. ಮಂಚಿಗೆಯ ಮೇಲೆ ಕುರಿಯ ಯಜಮಾನ ಮಲಗಿದ್ದರೆ ಉಳಿದವರು ಸಣ್ಣ ಮಂಚಗಳನ್ನು ಹಾಕಿಕೊಂಡು ಕುರಿಯಟ್ಟಿಯ ಸುತ್ತಲು ಮಲಗಿರುತ್ತಾರೆ. ಇವರು ಕುರಿಹಟ್ಟಿಗಳಿಗೆ ಹಟ್ಟಿಯ ಸುತ್ತಲು ಇರುವ ಗೋಮಾಳಗಳನ್ನು ಬಳಸುತ್ತಾರೆ. ಮನೆಯ ಹತ್ತಿರ ಜಾಗವಿದ್ದರೆ ಮನೆ, ಇಲ್ಲವೇ ಜಮೀನ್ದಾರರಾಗಿದ್ದರೆ ಜಮೀನು ಹಟ್ಟಿಯ ಹತ್ತಿರವಿದ್ದರೆ ಜಮೀನನ್ನು ಬಳಸಿಕೊಳ್ಳುತ್ತಾರೆ. ಕುರಿಗಳು ಮತ್ತು ಕುರಿಹಟ್ಟಿ ದೈವತ್ವದ ಸಮಾನ ಎಂದು ಭಾವಿಸುವುದರಿಂದ ಕೆಲವು ಕೆಳಜಾತಿಗಳನ್ನು ಕುರಿಹಟ್ಟಿಯ ಒಳಗೆ ಸೇರಿಸುವುದಿಲ್ಲ. ಏಕೆಂದರೆ ಕೆಲವು ಕುರಿಗಳನ್ನು ಜನ್ನಿಗೆ ಹಾಲಿಗಾಗಿ ಮೀಸಲು ಬಿಟ್ಟಿರುತ್ತಾರೆ. ಕೆಲವು ಕುರಿಗಳನ್ನು ದೇವರಿಗೆ ಮೀಸಲು ಬಿಟ್ಟಿರುತ್ತಾರೆ. ಹಾಗಾಗಿ ಇತರೆ ಸಮುದಾಯದವರಿಗೆ ಒಳಗಡೆ ಪ್ರವೇಶ ನಿಷೇಧಿಸುತ್ತಾರೆ. ಕುರಿಗಳನ್ನು ಕಾಪಾಡುವುದು ಒಂದೇ ಬಂಗಾರವನ್ನು ಕಾಪಾಡುವುದು ಒಂದೇ ಎಂದು ತಮ್ಮ ಕುರಿಗಳನ್ನು ರಕ್ಷಣೆ ಮಾಡಲು ಇಷ್ಟೆಲ್ಲ ವ್ಯವಸ್ಥೆ ಮಾಡಿಕೊಂಡಿದ್ದರೂ ರಾತ್ರಿ ಇಡೀ ನಿದ್ದೆಕಟ್ಟಿ ಕುರಿಗಳನ್ನು ಕಾಯಬೇಕಾಗುತ್ತದೆ. ಹಗಲಿನಲ್ಲಿಯೂ ಅವುಗಳ ಹಿಂದೆ ತಿರುಗಿದ್ದಲ್ಲದೆ ರಾತ್ರಿ ಇಡೀ ಎಚ್ಚರದಿಂದ ಕಾಯುವುದನ್ನು ಮರೆಯುವಂತಿಲ್ಲ

**ಮಂದೆ ಬಿಡುವುದು:** ಇತ್ತೀಚೆಗೆ ಹುಲ್ಲುಗಾವಲುಗಳು ಹಾಗೂ ಗೋಮಾಳಗಳು ಕಡಿಮೆಯಾದ ಕಾರಣ ಕುರಿಗಳಿಗೆ ಸರಿಯಾದ ಮೇವು ಹಾಗೂ ನೀರಿನ ಸಮಸ್ಯೆ ತಲೆದೋರುತ್ತದೆ. ಇಂತಹ ಸಂದರ್ಭದಲ್ಲಿ ಕಾಡುಗೊಲ್ಲರು ತಮ್ಮ ಸುತ್ತಮುತ್ತ ಇರುವ ಹುಲ್ಲು ಗದ್ದೆಗಳ ತೋಟಗಳನ್ನು ಅವಲಂಬಿಸುತ್ತಾರೆ. ಕೆಲವರು ಬೇರೆ ಬೇರೆ ಪ್ರದೇಶಗಳಿಗೆ ತಮ್ಮ ಕುಟುಂಬಗಳ ಸಮೇತ ವಲಸೆ ಹೋಗುತ್ತಾರೆ ಹಾಗಾಗಿ ಇವರನ್ನು ಅರೆ ಅಲೆಮಾರಿಗಳೆಂದು ಕರೆಯುತ್ತಾರೆ. ವಲಸೆ ಹೋಗುವ ಸಂದರ್ಭಗಳಲ್ಲಿ ಎಳೆಯ ಮರಿಗಳನ್ನು ಹಾಗೂ ಸರಕು ಸರಂಜಾಮುಗಳನ್ನು ಸಾಗಿಸಲು ಕತ್ತೆಗಳನ್ನು ಬಳಸುತ್ತಾರೆ. ಈ ಕತ್ತೆಗಳು ಕುರಿಗಳ ರಕ್ಷಣೆಯಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತವೆ. ಯಾವ ರೀತಿ ಎಂದರೆ ತೋಳಗಳೇನಾದರೂ ಕುರಿಹಟ್ಟಿಗೆ ಮುತ್ತಿಗೆ ಹಾಕಿದಂತಹ ಸಮಯದಲ್ಲಿ ಜೋರಾಗಿ ಕೂಗಿಕೊಳ್ಳುತ್ತವೆ. ಇದರಿಂದಾಗಿ ತೋಳಗಳು ದಿಕ್ಕಪಾಲಾಗಿ ಓಡುತ್ತವೆ. ಕಾಡುಗೊಲ್ಲರು ತೋಟಗಳಲ್ಲಿ ಮಂದೆ ಬಿಟ್ಟರೆ ತೋಟದ ಮಾಲೀಕ ಇಂತಿಷ್ಟು ದುಡ್ಡು ಹಾಗೂ ದವಸ ಧಾನ್ಯಗಳನ್ನು ಕೊಡಬೇಕೆಂದು ಒಪ್ಪಂದವಾಗಿರುತ್ತದೆ. ಕಾರಣ ಇದರಿಂದಾಗಿ ಕಾಡುಗೊಲ್ಲರ ಜೀವನ ಸಾಗುತ್ತದೆ, ಅಷ್ಟೇ ಅಲ್ಲ, ಕುರಿಗೊಬ್ಬರಕ್ಕೆ ಬಹಳ ಬೇಡಿಕೆ ಇದೆ. ಕುರಿಗೊಬ್ಬರ ಮಾತ್ರವಲ್ಲ, ಕುರಿ ಗಂಜಲಕ್ಕೂ ಮಹತ್ವವಿದೆ. ಒಂದು ಬಾರಿ ಕುರಿ ಮಂದೆಯನ್ನು ಹೊಲದಲ್ಲಿ ಬಿಡಿಸಿದರೆ ಗೊಬ್ಬರ ಹಾಕುವುದು ತಪ್ಪುತ್ತದೆ.

ಮಣ್ಣು ಅಷ್ಟೊಂದು ಫಲವತ್ತಾಗುತ್ತದೆ. ಹಾಗಾಗಿ ಮಂದೆ ಬಿಡಿಸುತ್ತಾರೆ. ಒಂದೊಂದು ಹೊಲದಲ್ಲಿ ತಿಂಗಳಿಂದ ಎರಡು ತಿಂಗಳವರೆಗೆ ಇದ್ದು ಆನಂತರ ಮುಂದೆ ಸಾಗುತ್ತಾರೆ. ಈ ಮಂದೆ ಬಿಡಲು ಹಿಂದೆ ಬಿದುರಿನ ತಡಿಕೆಗಳನ್ನು ಬಳಸುತ್ತಿದ್ದರು. ಇತ್ತೀಚೆಗೆ ಬಿದಿರು ದುಬಾರಿಯಾದ ಕಾರಣದಿಂದ ತಂತಿಯ ತಡಿಕೆಗಳನ್ನು ಇಲ್ಲವೇ ಹಗ್ಗದಿಂದ ಮಾಡಿದ ಬಲೆಗಳನ್ನು ಬಳಸುತ್ತಾರೆ. ಹಿಂದೆ ಇದ್ದಷ್ಟು ಕಳ್ಳತನ ಇವತ್ತು ಇರದ ಕಾರಣ ಕುರಿಗಳಿಗೆ ಈ ತಡಿಕೆಗಳೇ ರಕ್ಷಣೆಯಾಗಿವೆ.

**ಅರೆ ಅಲೆಮಾರಿಗಳಾಗಿ ಕಾಡುಗೊಲ್ಲರು:** ಕಾಡುಗೊಲ್ಲರು ಹಿಂದೆ ಸಂಪೂರ್ಣವಾಗಿ ಅಲೆಮಾರಿಗಳಾಗಿದ್ದರು. ಆದರೆ ಇತ್ತೀಚೆಗೆ ಅವರು ಒಂದು ಕಡೆ ನೆಲೆ ನಿಂತಿರುವುದನ್ನು ಕಾಣಬಹುದಾಗಿದೆ. ಏಕೆಂದರೆ ಮಕ್ಕಳ ಶಿಕ್ಷಣ ಹಾಗೂ ಭೂ ಒಡೆತನದಿಂದಾಗಿ ಅರೆ ಅಲೆಮಾರಿ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಹಾಗಾಗಿ ಇವರು ವಾಸವಾಗಿರುವುದು ಬಯಲು ಪ್ರದೇಶವಾದ ಕಾರಣದಿಂದ ಅದರಲ್ಲೂ ಚಿತ್ರದುರ್ಗ ಮತ್ತು ತುಮಕೂರಿನ ಕೆಲವು ಭಾಗಗಳು ನಿರಂತರವಾಗಿ ಬರಗಾಲಕ್ಕೆ ತುತ್ತಾಗಿರುವ ಪ್ರದೇಶವಾಗಿರುವುದರಿಂದ ಬೇಸಿಗೆ ಕಾಲದಲ್ಲಿ ಕುರಿಗಾರರು ಮಲೆನಾಡು, ಮೈಸೂರು, ಹಾಸನ, ಶಿವಮೊಗ್ಗ, ದಾವಣಗೆರೆ ಮುಂತಾದ ಕಡೆಗಳಿಗೆ ವಲಸೆ ಹೋಗುತ್ತಾರೆ. ಹಿಂದೆ ಅವಲಂಬಿಸಿದಂತೆ ಇಂದು ಕುಟುಂಬದ ಎಲ್ಲಾ ಸದಸ್ಯರು ಕುರಿಗಳನ್ನು ಅವಲಂಬಿಸಿಲ್ಲ. ಮನೆಯಲ್ಲಿ ಒಬ್ಬರು ಇಬ್ಬರು ಮಾತ್ರ ಕುರಿಕಾಯುವ ವೃತ್ತಿಯನ್ನು ಮಾಡುತ್ತಿದ್ದಾರೆ ಏಕೆಂದರೆ ಎಲ್ಲರಿಂದಲೂ ಕುರಿ ಕಾಯುವುದು ಸಾಧ್ಯವಿಲ್ಲ. ಅಷ್ಟೇ ಅಲ್ಲ, ಕುರಿ ಕಾಯುವುದು ತುಂಬಾ ಕಷ್ಟದ ಕೆಲಸ. ಅದರಿಂದ ಎಷ್ಟೇ ಲಾಭ ಬರುತ್ತದೆಂದರೂ ಇಂದಿನ ಯುವಕರು ಕುರಿ ಕಾಯಲು ಇಷ್ಟ ಪಡುವುದಿಲ್ಲ. ಅದರಲ್ಲೂ ಶಿಕ್ಷಣ ಕಲಿತವರಂತೂ ಕುರಿಯ ಸಹವಾಸದಿಂದ ದೂರವಿರುತ್ತಾರೆ. ಏಕೆಂದರೆ ಇವರ ದೇಹ ಗಾಳಿ ಮಳೆ ಬಿಸಿಲು ಚಳಿ ಇವುಗಳಿಗೆ ಸ್ಪಂದಿಸುವುದಿಲ್ಲ. ಅಷ್ಟೇ ಅಲ್ಲದೆ ದಿನವಿಡಿ ಉಪವಾಸವಿದ್ದು ಕುರಿ ಕಾಯುವುದನ್ನು ಯಾವ ಯುವಕರು ಇಷ್ಟ ಪಡುವುದಿಲ್ಲ. ಆದರೆ, ಅನಕ್ಷರಸ್ಥರಿಗೆ ಇದು ಅನಿವಾರ್ಯ. ಅವರ ಮಾತಿನಲ್ಲೇ ಹೇಳುವುದಾದರೆ ಸರ್ಕಾರಿ ಕೆಲಸಕ್ಕಾದರೂ ಭಾನುವಾರ ರಜೆ ದೊರಕೀತು. ಆದರೆ ಕುರಿ ಯುವವರ ಮನೆಯ ಮುಂದೆ ಶವವಿದ್ದರೂ ಕುರಿಯನ್ನು ಕಾಯುವುದನ್ನು ತಪ್ಪುವಂತಿಲ್ಲ. ಹಾಗಾಗಿ ಹೆಣ್ಣುಮಕ್ಕಳು ಸಹ ತಮ್ಮ ಎಳೆಯ ಮಕ್ಕಳೊಂದಿಗೆ ಕುರಿಯ ಹಿಂದೆ ವಲಸೆ ಹೋಗುತ್ತಾರೆ. ಏಕೆಂದರೆ ಗಂಡುಮಕ್ಕಳಿಗೆ ಅಡಗೆ ಮಾಡಲು ಅವರ ಬಟ್ಟೆ ಬರೆ ಹೊಗೆಯಲು, ಇದರ ಜೊತೆಗೆ ಎಳೆ ಮರಿಗಳನ್ನು ಜೋಪಾನ ಮಾಡಲು ಹೋಗುತ್ತಾರೆ.

ಭಾರತದ ಸಾಮಾಜಿಕ ವ್ಯವಸ್ಥೆ ಎಷ್ಟು ಸಂಕೀರ್ಣವೋ, ಆ ವ್ಯವಸ್ಥೆಯ ಅಂತರ್ಗತ ಭಾಗವಾಗಿರುವ ಅಲೆಮಾರಿಗಳು ರೂಪುಗೊಳ್ಳುವುದಕ್ಕೆ ಕಾರಣವಾಗಿರುವ ಸಾಮಾಜಿಕ ಮತ್ತು ರಾಜಕೀಯಾರ್ಥಿಕ ಸಂಗತಿಗಳು ಸಹ ಅಷ್ಟೇ ಸಂಕೀರ್ಣವಾಗಿವೆ. ಶ್ರೇಣೀಕರಣದ ಕಾರಣಕ್ಕಾಗಿ ಇಂಡಿಯಾದಲ್ಲಿ ಬದುಕುತ್ತಿರುವ ದುಡಿಯುವ ಕೆಳಜಾತಿ ಸಮುದಾಯಗಳು ಯಾವ ಯಾವ ಹಂತಗಳನ್ನು ದಾಟಿ ಬಂದಿರುವುವೋ ಆ ಎಲ್ಲಾ ಹಂತಗಳನ್ನು ಅಲೆಮಾರಿಗಳು ಸಹ ಹಾದು ಬಂದಿದ್ದಾರೆ. ಅಂದರೆ

ಭಾರತದ ರಾಜಕೀಯಾರ್ಥಿಕ ಚಲನೆಗಳು ಇಲ್ಲಿನ ಸಾಮಾಜಿಕ ಸಂಬಂಧಗಳನ್ನು ಸ್ಪಷ್ಟವಾಗಿಯೇ ನಿಯಂತ್ರಿಸಿವೆ. ಹೀಗಾಗಿ ಭಾರತ ಸಮಾಜದ ಪ್ರಧಾನ ಲಕ್ಷಣವೆಂದರೆ ಜಾತಿವ್ಯವಸ್ಥೆ. ಜಾತಿ ವ್ಯವಸ್ಥೆಯ ಮುಖ್ಯ ಉದ್ದೇಶ ಸಮಾಜದ ಒಟ್ಟು ರಾಜಕೀಯಾರ್ಥಿಕ ಸ್ಥಿತಿಯನ್ನು ಸಾಮಾಜಿಕ ಶ್ರೇಣೀಕರಣದ ಮೂಲಕ ಸಮರ್ಥಿಸುವುದು. ಬಹುಸಂಖ್ಯಾತ ದುಡಿಯುವ ವರ್ಗದ ಜನರ ಶ್ರಮವನ್ನು ಬಂಡವಾಳವನ್ನಾಗಿಸಿಕೊಂಡು ಬದುಕುವ ಅಲ್ಪಸಂಖ್ಯಾತ ಆಳುವ ವರ್ಗ ಯಾವುದೋ ಮಾಯೆಯ ಮೂಲಕ ಅಸಮಾನತೆಯನ್ನು ಚಿರಂತನಗೊಳಿಸಲು, ಶ್ರೇಣೀಕರಣವನ್ನು ಸಮರ್ಥಿಸುವ ಪ್ರಯತ್ನಗಳು ಭಾರತದ ಸಮಾಜದ ಚರಿತ್ರೆಯಲ್ಲಿ ನಿರಂತರವಾಗಿ ನಡೆದಿವೆ. ಜಾತಿವ್ಯವಸ್ಥೆ ದುಡಿವವರ ಮತ್ತು ದುಡಿಸಿಕೊಳ್ಳುವವರ ಮಧ್ಯೆ ಒಂದು ಅಸಹಜ ಸಾಮಾಜಿಕ ಸಂಬಂಧವಾಗಿ ಏರ್ಪಟ್ಟಿತು. ಈ ಕಾರಣದಿಂದಾಗಿ ಭಾರತದ ಶ್ರೇಣೀಕರಣವು ಜಗತ್ತಿನ ಎಲ್ಲಾ ತಾರತಮ್ಯ ವ್ಯವಸ್ಥೆಗಳಿಗಿಂತ ಹೆಚ್ಚು ಸಂಕೀರ್ಣ ಮತ್ತು ಅಷ್ಟೇ ಕ್ರೂರ ವ್ಯವಸ್ಥೆಯಾಗಿದೆ. ಭಾರತದಲ್ಲಿ ಜಾತಿಯೆಂದರೆ ಶ್ರಮ ವಿಭಜನೆಯ ಆಧಾರದಲ್ಲಿ ರೂಪಗೊಂಡ ಒಂದು ಉತ್ಪಾದನಾ ಘಟಕ. ಪ್ರತಿಯೊಂದು ಜಾತಿ ಒಂದು ಸ್ವಯಂಪೂರ್ಣ ಉತ್ಪಾದನಾ ಘಟಕವಾಗಿ ತನ್ನ ಅಸ್ತಿತ್ವವನ್ನು ಸದಾ ಕಾಯ್ದುಕೊಳ್ಳುತ್ತಲೇ ಬಂದಿದೆ. ಜಾತಿಯೊಂದು ತನ್ನ ಆಚರಣೆ, ಲಾಂಛನ, ಭಾಷೆ ಇವುಗಳ ಮೂಲಕ ಭಾವನಾತ್ಮಕವಾಗಿ ತನ್ನ ಅಸ್ತಿತ್ವವನ್ನು ನಿಖರಗೊಳಿಸುತ್ತಲೇ ಬಂದಿದೆ. ತಾನು ಅನುಸರಿಸುವ ಕಸುಬಿನಿಂದಾಗಿ ಒಂದು ಸಾಮಾಜಿಕ ಗುಂಪು ಸ್ವಯಂಪೂರ್ಣವಾಗಿ ಇನ್ನೊಂದು ಜಾತಿ ಸಮುದಾಯದಿಂದ ಅನೇಕ ಬಗೆಗಳಲ್ಲಿ ಭಿನ್ನವಾಗಿ ನಿಲ್ಲಲು ಯತ್ನಿಸುತ್ತದೆ. ಇದನ್ನೇ ಅಂಬೇಡ್ಕರ್ ಅವರು "ಪ್ರತ್ಯೇಕತೆ ಎಂಬುದು ಜಾತಿಯ ಒಂದು ಸ್ವಾಭಾವಿಕ ಪರಿಣಾಮ"[೧೨] ಎನ್ನುತ್ತಾರೆ. ಯಾರು ಯಾವ ಯಾವ ಕೆಲಸಗಳಲ್ಲಿ ತೊಡಗಿಸಿಕೊಳ್ಳಬೇಕು ಮತ್ತು ಯಾರು ಯಾವುದನ್ನು ಮಾಡಬಾರದು ಎಂಬ ನಿಯಮಗಳೇ ಭಾರತದ ಶ್ರೇಣೀಕರಣವನ್ನು ಜಾರಿಗೆ ತಂದವು. ಯಾವ ಗುಂಪಿನ ಜನ ಯಾವ ಉತ್ಪಾದನೆಯಲ್ಲಿ ತೊಡಗಿಸಿಕೊಳ್ಳಬೇಕು ಎಂದು ನಿರ್ಧಾರವಾದದ್ದು, ಆಯಾ ಸಾಮಾಜಿಕ ಗುಂಪುಗಳು ಅಂದಂದಿನ ಚಾರಿತ್ರಿಕ ಘಟ್ಟದಲ್ಲಿ ಸಾಧಿಸಿದ ನಿರ್ಣಾಯಕ ಗೆಲುವು ಮತ್ತು ಸೋಲುಗಳನ್ನೇ ಅವಲಂಬಿಸಿತ್ತು. ಸೋತ ಸಮುದಾಯಗಳು ತಮಗೆ ದಕ್ಕಿದ ಇಲ್ಲವೇ ಹೇರಲ್ಪಟ್ಟ ಕೆಲಸಗಳನ್ನು ಅನಿವಾರ್ಯವಾಗಿ ನಿರ್ವಹಿಸಲೇ ಬೇಕಾಯಿತು. ಇಲ್ಲಿ ಕೆಲವು ಸಮುದಾಯಗಳ ಗೆಲುವು ಎಂದರೆ, ಅಂದಂದಿನ ಒಟ್ಟು ಸಮಾಜದ ಹಣೆಬರಹವನ್ನು ರೂಪಿಸುವ ಆರ್ಥಿಕ ಮೂಲಗಳ ಮೇಲೆ ಸಾಧಿಸುವ ಹಿಡಿತವೇ ಆಗಿದೆ. ಯಾವ ಉತ್ಪಾದನಾ ವಿಧಾನದಿಂದ ಸಮಾಜದಲ್ಲಿ ಅಧಿಕ ಉತ್ಪಾದನೆಯಾಗುವುದೋ, ಆ ಉತ್ಪಾದನಾ ವಿಧಾನದ ಮೇಲೆ ನಿಶ್ಚಿತ ಒಡೆತನ ಸಾಧಿಸುವುದು ಗೆದ್ದ ಸಮುದಾಯಗಳ ಪರಿಪಾಟ. ಸಮಾಜದ ಮೇಲೆ ಒಡೆತನ ಸಾಧಿಸಿದ ಸಮುದಾಯಗಳ ಬಹುಮುಖ್ಯ ಕೆಲಸ, ದುಡಿಯುವ ಉತ್ಪಾದಕ ಸಮುದಾಯಗಳ ಕಾರ್ಯವೈಖರಿಯನ್ನು ಪರಂಪರೆಯ ಹೆಸರಲ್ಲಿ ಸಮರ್ಥಿಸುತ್ತ ಅದರ ಸತ್ವವನ್ನು ಪೋಷಿಸುವುದು. ಇದೇ ಕಾರಣದಿಂದಾಗಿ ಜಗತ್ತು ತಂತ್ರಜ್ಞಾನದ ಹೆಸರಲ್ಲಿ ಎಷ್ಟೇ ಮುಂದುವರಿದಿದ್ದರೂ ಭಾರತ ಇನ್ನೂ ಸಾಂಪ್ರದಾಯಿಕ ಉತ್ಪಾದನಾ ವಿಧಾನವನ್ನು ಸಮರ್ಥಿಸುತ್ತಲೇ ಇದೆ. ಹೀಗಾಗಿ ಭಾರತದ

ಉತ್ಪಾದನಾ ಕ್ಷೇತ್ರಗಳಲ್ಲಿ ಅಗಾಧ ಪ್ರಮಾಣದ ಕ್ರಾಂತಿಗಳು ಸಂಭವಿಸಲಿಲ್ಲ. ಆಗಾಗ ನಡೆದುಹೋದ ಬದಲಾವಣೆಗಳು ಭಾರತದ ಸಮಾಜದ ದುಡಿಯುವ ವರ್ಗಗಳ ಬದುಕಲ್ಲಿ ಯಾವ ಗಮನಾರ್ಹ ಹೊಸತನವನ್ನು ತರಲಿಲ್ಲ. ಕುಲಕಸುಬಿನ ಆಧಾರದ ಮೇಲೆ ಒಂದು ಜಾತಿಗೆ ಪ್ರಾಪ್ತವಾಗಿದ್ದ ಹೀನ ವೃತ್ತಿಗಳು, ಆಧುನಿಕ ಜಗತ್ತಿನಲ್ಲಿ ಇಲ್ಲವಾಗಿ ಅಂತಹ ಜಾತಿಗಳು ಸಾಮಾಜಿಕ ಅವಮಾನಗಳನ್ನು ಮೀರಿ ನಿಲ್ಲಲು ಸಾಧ್ಯವಾಯಿತಾದರೂ, ಆ ಜಾತಿಗಳ ಒಟ್ಟು ಆರ್ಥಿಕ ಸ್ಥಿತಿಗಳಲ್ಲಿ ಯಾವ ಬದಲಾವಣೆಗಳಾಗಲಿಲ್ಲ.

ಹೀಗಾಗಿ ಮಾನವ ಸಮಾಜದ ಚರಿತ್ರೆಯಲ್ಲಿ ಭಾರತದ ಶ್ರೇಣೀಕರಣಕ್ಕೆ ಒಂದು ವಿಶಿಷ್ಟ ಸ್ಥಾನಮಾನ ಪ್ರಾಪ್ತವಾಗಿದೆ. ಕಾಲ ಬದಲಾದರೂ, ಜಾಗತಿಕ ಮಟ್ಟದ ಉತ್ಪಾದನಾ ವ್ಯವಸ್ಥೆಯಲ್ಲಿ ಕ್ರಾಂತಿಗಳು ನಡೆದುಹೋದರೂ, ಭಾರತದ ಜಾತಿಗಳು ತಮ್ಮ ಪಾರಂಪರಿಕ ಆರ್ಥಿಕ ಅವಲಂಬನೆಯನ್ನು ಕಾಯ್ದುಕೊಂಡೇ ಬಂದಿವೆ. ಇದಕ್ಕೆ ಅಲೆಮಾರಿಗಳೇನೂ ಹೊರತಾಗಿಲ್ಲ. ಇಡೀ ಜಗತ್ತಿನಲ್ಲಿ ಕೃಷಿಕರನ್ನು ಬಿಟ್ಟರೆ, ತಮ್ಮ ಸಾಂಪ್ರದಾಯಿಕ ಆರ್ಥಿಕ ಮೂಲಗಳನ್ನು ಉಳಿಸಿಕೊಂಡು ಬಂದವರೆಂದರೆ ಅಲೆಮಾರಿಗಳು ಮಾತ್ರ. ತಮ್ಮ ತಮ್ಮ ಆರ್ಥಿಕ ಮೂಲಗಳನ್ನು ಚಾರಿತ್ರಿಕವಾಗಿ ಅವಶೇಷಗಳ ಮಾದರಿಯಲ್ಲಿ ಅಲೆಮಾರಿಗಳು ಉಳಿಸಿಕೊಳ್ಳಲು ಕಾರಣ ಭಾರತವೆಂಬ ಸಂಪ್ರದಾಯಶೀಲ ಸಮಾಜದಲ್ಲಿ ಯಾವತ್ತೂ ಬಹುದೊಡ್ಡ ಆರ್ಥಿಕ ಉತ್ಕ್ರಾಂತಿ ಸಂಭವಿಸದೇ ಹೋದದ್ದು. ಈ ಕಾರಣದಿಂದಾಗಿ ಸಾಮಾಜಿಕ ಅಸಮಾನತೆಯೂ ತನ್ನ ಅತ್ಯಂತ ಹೇಯ ಆಯಾಮಗಳನ್ನು ವಿಕಾಸಿಸಿಕೊಳ್ಳುತ್ತಲೇ ಹೋಯಿತು. ಹೀಗಾಗಿ ಭಾರತ ಸಮಾಜದಲ್ಲಿ ಅಲೆಮಾರಿಗಳು ಈ ಶ್ರೇಣೀಕೃತ ಸಮಾಜದ ಒಂದು ಭಾಗವಾಗಿಯೇ ರೂಪಗೊಂಡಿದ್ದಾರೆ. 'ಅಲೆಮಾರಿತನ ಭಾರತದ ಅಸಮಾನ ಸಮಾಜದ ಒಂದು ಭಾಗವಾಗಿ ರಚನೆಗೊಂಡ ಸ್ಥಿತಿಯಾಗಿದೆ. ಅಲೆಮಾರಿಗಳ ಆರ್ಥಿಕ ಬದುಕಿನಲ್ಲಿ ಸಂಭವಿಸಿರುವ ರೂಪಾಂತರಗಳನ್ನು ಕಟ್ಟಿಕೊಡುವ ಹಂತದಲ್ಲಿ ನಾವು ಸ್ಪಷ್ಟ ಪುರಾವೆಗಳ ಸಮಸ್ಯೆಯನ್ನು ಎದುರಿಸುತ್ತೇವೆ. ಅಲೆಮಾರಿಗಳ ಮತ್ತು ಕೆಳಜಾತಿಗಳ ಬದುಕಿನ ಚರಿತ್ರೆಯನ್ನು ರೂಪಿಸಲು ಕ್ಲಾಸಿಕಲ್ ಆಕರಗಳ ಕೊರತೆ ಇದೆ.[೧೩] ಪ್ರಾಚೀನ ಶಾಸನ ಮತ್ತು ಸಾಹಿತ್ಯ ಕೃತಿಗಳನ್ನು ಅವಲಂಬಿಸಿಯೇ ಇವರ ಚರಿತ್ರೆಯನ್ನು ಕಟ್ಟಿಕೊಡಲು ಹೋದರೆ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಇನ್ನು ಪರ್ಯಾಯ ಆಕರಗಳಾಗಿ ಅಲೆ ಮಾರಿಗಳೇ ಕಟ್ಟಿಕೊಂಡ ತಮ್ಮ ಸೃಷ್ಟಿಪುರಾಣಗಳನ್ನು ಬಳಸಿ ನಾವು ಇವರ ಆರ್ಥಿಕ ಚರಿತ್ರೆಯನ್ನು ಕಟ್ಟಿಕೊಡಬಹುದಾಗಿದೆ. ಈ ಸೃಷ್ಟಿಪುರಾಣಗಳ ಮೂಲಕ ತಮ್ಮ ಜಾತಿ ಅನುಸರಿಸಿಕೊಂಡು ಬಂದ ಆರ್ಥಿಕ ಚಟುವಟಿಕೆಗಳಿಗೆ ಇವರು ಒಂದು ಚರಿತ್ರೆಯ ಆಯಾಮವನ್ನು ಕಲ್ಪಿಸುತ್ತಾರೆ.[೧೪]

### ೪.೬. ಕುರಿ ಸಾಕಾಣಿಕೆಯಿಂದ ಕಾಡುಗೊಲ್ಲರು ಎದುರಿಸುತ್ತಿರುವ ಸಮಸ್ಯೆಗಳು

ಗೊಲ್ಲರಿಗೆ ಮೂಲ ಪ್ರವೃತ್ತಿಯು ಪಶುಪಾಲನೆಯಾಗಿತ್ತು. ಬೇಟೆ, ಪಶುಪಾಲನೆ ಮತ್ತು ವ್ಯವಸಾಯ ಕ್ರಮವಾಗಿ ಸಮಾಜ ಬೆಳವಣಿಗೆಯ ಮೂರು ಹಂತಗಳಾಗಿವೆ. ಗೊಲ್ಲರ ಪುರಾಣಗಳಲ್ಲಿ ಕಂಡುಬರುವ

ಸಾಂಸ್ಕೃತಿಕ ವೀರರಾದ ಎತ್ತಪ್ಪ ಮತ್ತು ಜುಂಜಪ್ಪ ಪಶುಪಾಲನೆಯಲ್ಲೇ ತಮ್ಮ ಜೀವಮಾನವನ್ನು ತೆಯ್ದವರು. ಈ ವೃತ್ತಿಯಲ್ಲಿ ಅವರಿಗಿದ್ದ ಪರಿಣತಿಯು ಅಸಾಧಾರಣವಾದದು. ಕಾಲಗತಿಯಲ್ಲಿ ಈ ಪಶುಪಾಲನೆಯ ಹಂತವನ್ನು ದಾಟಿರುವ ಗೊಲ್ಲರ ಇದೀಗ ವ್ಯವಸಾಯ ಮತ್ತು ಕುರಿಸಾಕಣೆಯನ್ನು ಅವಲಂಬಿಸಿದ್ದಾರೆ. ಹುಲ್ಲುಹಾವಲುಗಳು ನಾಶವಾಗಿ ನಾಗರಿಕತೆ ಕಾಲಿಟ್ಟಂತೆ ಹೆಚ್ಚು ಪ್ರಮಾಣದ ಗೋವುಗಳನ್ನು ಸಾಕುವುದು ನಿಂತುಹೋಯಿತು. ಆದರೆ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ಕೆಲವು ಭಾಗಗಳಲ್ಲಿ ಮಾತ್ರ ಈಗಲೂ ಗೊಲ್ಲರು ಪಶುಪಾಲನೆಯನ್ನು ಮುಖ್ಯ ವೃತ್ತಿಯನ್ನಾಗಿ ಹೊಂದಿದ್ದಾರೆ.[೧೫]

ಆದರೆ 'ದನಗಾರಿಕೆಯೇ ಒಮ್ಮೆ ಮನುಷ್ಯ ಸಮಾಜದ ಮುಖ್ಯ ಹೊರೆಯಾಗಿತ್ತು. ಈ ಕಾಲದಲ್ಲಿ ಮಾನವನಿಗೆ ದನವೇ ಧನವಾಗಿದ್ದುದು ನಿಜವೆಂದು ಜಗತ್ತಿನೊಳಗಿನ ಎಲ್ಲಾ ಭಾಗದ ಮಾನವನ ಇತಿಹಾಸವು ಇದಕ್ಕೆ ಬೆಂಬಲವನ್ನೀಯುತ್ತದೆ'[೧೬] ಎಂದು ಶಂ.ಬಾ.ಜೋಶಿಯವರು ಪ್ರತಿಪಾದಿಸುತ್ತಾರೆ. ಹಟ್ಟಿಯಲ್ಲಿ ಕುರಿ ಸಾಕಣಿಕೆಯು ವ್ಯವಸಾಯದ ಜೊತೆಗಿನ ಇನ್ನೊಂದು ಮುಖ್ಯ ವೃತ್ತಿಯಾಗಿದೆ. ಈಗಿನ ಪರಿಸ್ಥಿತಿಯಲ್ಲಿ ಕಾಡುಗೊಲ್ಲರಿಗೆ ಇದು ಬೇಸಾಯಕ್ಕಿಂತಲೂ ಆರ್ಥಿಕವಾಗಿ ಲಾಭದಾಯಕವಾದ ಉದ್ಯಮವಾಗಿದೆ. ಹಿಂದೆಲ್ಲ ಕಾಡುಮೇಡುಗಳನ್ನು ಅಲೆಯುತ್ತ ಗೋವುಗಳ ರಕ್ಷಣೆಯಲ್ಲಿರುತ್ತಿದ್ದ ಗೊಲ್ಲರಿಗೆ ಕ್ರಮೇಣ ಸುಲಭವಾಗಿ ಒಗ್ಗುವ ವೃತ್ತಿಯಾಗಿ ಕುರಿ ಸಾಕಾಣಿಕೆಯು ಕಾಣಿಸಿಕೊಂಡಿತು.[೧೭] ಇಷ್ಟೆಲ್ಲಾ ಅಂಶಗಳ ಜೊತೆಗೆ ಇತ್ತೀಚಿನ ದಿನಗಳಲ್ಲಿ ಕುರಿ ಸಾಕಾಣಿಕೆಯಲ್ಲಿ ಅನೇಕ ಸಮಸ್ಯೆಗಳು ಕಂಡುಬರುತ್ತಿದ್ದು, ಅವುಗಳನ್ನು ಈ ಮುಂದಿನಂತೆ ನೋಡಬಹುದಾಗಿದೆ.

ಕುರಿ ಸಾಕುವುದು ಕೂಡ ಒಂದು ರೀತಿಯ ವ್ಯಾಪಾರವಿದ್ದಂತೆ ಹಾಗಾಗಿ ಕುರಿ ಸಾಕುವಾಗ ಅನೇಕ ಸಮಸ್ಯೆಗಳುಂಟಾಗುತ್ತವೆ. ಅವುಗಳೆಂದರೆ,

೧. ಕುರಿ ಸಾಕಾಣಿಕೆ ಸಮಯದಲ್ಲಿ ಕಾಡುಗೊಲ್ಲ ಮಹಿಳೆಯರ ಮೇಲೆ ಲೈಂಗಿಕ ದೌರ್ಜನ್ಯಗಳಾಗುತ್ತಿರುವುದನ್ನು ಕಾಣಬಹುದು.

೨. ಕಾಡುಗೊಲ್ಲರು ಅರೆ ಅಲೆಮಾರಿಗಲಾದರೂ ಕಾಡುಗೊಲ್ಲ ಮಕ್ಕಳು ಶಿಕ್ಷಣದಿಂದ ವಂಚಿತರಾಗಿ ಅನಕ್ಷರತೆ ಅವರನ್ನು ಕಾಡುತ್ತಿದೆ.

೩. ಕುರಿಗಳಿಂದ ಲಾಭ ಎಷ್ಟೇ ಇದ್ದರೂ ಅವುಗಳಿಂದ ತುಂಬಾ ಖರ್ಚು ಕೂಡ ಇದೆ ಎಂಬುದನ್ನು ಮರೆಯಬಾರದು. ಕಾಡುಗೊಲ್ಲರು ನಾಟಿ ವೈದ್ಯದಲ್ಲಿ ಎಷ್ಟೇ ಪ್ರವೀಣರಾಗಿದ್ದರೂ ತಮ್ಮ ಕುರಿಗಳನ್ನು ರಕ್ಷಣೆ ಮಾಡಿಕೊಳ್ಳುವಲ್ಲಿ ಸೋಲುತ್ತಿದ್ದಾರೆ. ಏಕೆಂದರೆ ಹಲವಾರು ಹೊಸ ಕಾಯಿಲೆಗಳು ಕುರಿಗಳಿಗೆ ಕಾಡುತ್ತಿವೆ. ಒಂದೊಂದು ಬಾರಿ ಇಡೀ ಕುರಿಹಟ್ಟಿಯೇ ಖಾಲಿಯಾಗುವಂತಹ ರೋಗಗಳು ಬರುವುದುಂಟು. ಈ ನಷ್ಟವನ್ನು ಯಾವ ಸರ್ಕಾರವೂ ತುಂಬಿಕೊಡುವುದಿಲ್ಲ. ಗೊಲ್ಲ ಸಾಕಿದ ಕುರಿಯ ಮಾಂಸ ಮಾತ್ರ ಎಲ್ಲರಿಗೂ ಬೇಕು. ಆದರೆ ಗೊಲ್ಲರ ಸಹವಾಸ ಮಾತ್ರ ಯಾರಿಗೂ ಬೇಡ. ಏಕೆಂದರೆ ಹೊಲ ಮಾಡಿಸುತ್ತಾರೆ. ಮರ ಕಡಿಯುತ್ತಾರೆ ಎಂಬ ಕಾರಣವನ್ನಿಟ್ಟುಕೊಂಡು ಕೆಲವು ಸಮುದಾಯದವರು ತಮ್ಮ ಹೊಲಗಳಲ್ಲಿರುವ ಮರಗಳನ್ನು ಜೆ.ಸಿ.ಬಿ. ಯ ಮೂಲಕ ಬೇರಿನ

ಸಮೇತ ತೆಗೆಸಿ ಹಾಕಿಸುತ್ತಾರೆ. ಆದರೆ ಕಾಡುಗೊಲ್ಲರು ಪ್ರಕೃತಿ ಆರಾಧಕರು. ಕಾಡನ್ನು ನಾಶ ಮಾಡಲು ಅವರೆಂದೂ ಉದ್ದೇಶಿಸಿಲ್ಲ. ಆದರೆ ದುಡ್ಡಿನ ಆಸೆಗೆ ಒಳಗಾಗಿ ಮರಗಳನ್ನು ನಾಶ ಮಾಡಿ ಅ ತಪ್ಪುಗಳನ್ನು ಕಾಡುಗೊಲ್ಲರ ಮೇಲೆ ಹಾಕುತ್ತಿದ್ದಾರೆ.

೪. ಜಾಗತೀಕರಣ, ನಗರೀಕರಣ, ಕೈಗಾರಿಕೀಕರಣ ಮತ್ತು ಶಿಕ್ಷಣದಿಂದಾಗಿ ಕಾಡುಗೊಲ್ಲರು ಕುರಿ ಸಾಕಾಣಿಕೆಯಿಂದಾಗಿ ಮುಕ್ತಿ ಪಡೆಯಬೇಕೆಂದು ಯೋಚಿಸುತ್ತಿದ್ದಾರೆ. ಇದರಿಂದಾಗಿ ಕುರಿ ಸಾಕುವವರ ಕೆಲಸ ಕಷ್ಟಕರವಾಗಿದೆ. ಕಾರಣ ಹುಲ್ಲುಗಾವಲುಗಳು ಇತ್ತೀಚಿಗೆ ಜಾಗತೀಕರಣದ ಪ್ರಭಾವದಿಂದ ಕ್ಷೀಣಿಸುತ್ತಿರುವುದನ್ನು ಕಾಣಬಹುದಾಗಿದೆ.

೫. ಹೊಸ ಬದುಕಿನಿಂದಾಗಿ ಇತ್ತೀಚೆಗೆ ಕಾಡುಗೊಲ್ಲರು ತಮ್ಮ ಮುಖವನ್ನು ಕೃಷಿಯ ಕಡೆ ಮಾಡಿರುವುದು ಕಂಡುಬರುತ್ತದೆ.

## ೪.೭. ಭೂಒಡೆತನ

ಕಾಡುಗೊಲ್ಲರು ಭೂ ಒಡೆತನದಿಂದ ವಂಚಿತವಾದ ಸಮುದಾಯವೆಂದು ಹೇಳಬಹುದು ಯಾಕೆಂದರೆ ಅವರು ವ್ಯವಸಾಯದಲ್ಲಿ ತುಂಬಾ ಹಿಂದುಳಿದಿದ್ದಾರೆ. ಇವರಲ್ಲಿ ಮುಖ್ಯವಾಗಿ ಸಣ್ಣ ಪ್ರಮಾಣದ ರೈತರು ಹೆಚ್ಚಾಗಿ ಕಂಡುಬರುತ್ತಾರೆ. ಪಶುಪಾಲನೆಯು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡ ನಂತರ ಕಾಡುಗೊಲ್ಲರು ಕೃಷಿಯ ಕಡೆ ಮುಖ ಮಾಡಿದರು. ಮೊದಮೊದಲು ಪಶುಪಾಲನೆ ಮತ್ತು ಕೃಷಿಯನ್ನು ಸಮಾನವಾಗಿ ರೂಢಿಸಿಕೊಂಡರು. ಆದುದರಿಂದಲೇ ಇವರು ಆಯ್ಕೆ ಮಾಡಿಕೊಂಡ ಪ್ರದೇಶಗಳು ಬಯಲುಪ್ರದೇಶಗಳಾಗಿವೆ. ಉದಾ: ಬಳ್ಳಾರಿ, ಚಿತ್ರದುರ್ಗ ಮತ್ತು ತುಮಕೂರು, ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುವ ಇವರು ವಾಸಿಸುತ್ತಿರುವುದು ಕುರುಚಲು ಬಯಲು ಪ್ರದೇಶಗಳಲ್ಲಿ. ಅದರಲ್ಲೂ ಮಳೆ ಆಶ್ರಿತ ಬಯಲುಪ್ರದೇಶಗಳಲ್ಲಿ ಕಾಡುಗೊಲ್ಲ ಮಾಹಿತಿದಾರನ್ನು ಸಂದರ್ಶಿಸಿದಾಗ ನಮಗೆ ತಿಳಿಯುವ ವಿಷಯವೆಂದರೆ ಕುರಿ ಹಾಗೂ ದನಗಳ ಕಾಲಿಗೆ ಮಣ್ಣು ಹತ್ತಬಾರದು ಎಂದು ತಿಳಿದು ಎರೆ ನೆಲವನ್ನು ಬಿಟ್ಟು ಕೆಂಪು ಮಣ್ಣಿನ ಜಮೀನಗಳಲ್ಲಿ ಜಮೀನಿಗಿಂತ ಪಶುಪಾಲನೆ ಮುಖ್ಯವಾಗಿತ್ತು ಹಾಗಾಗಿ ಜೌಗು ಪ್ರದೇಶಗಳನ್ನು ಬಿಟ್ಟು ಗುಡ್ಡಗಳನ್ನು ಹಸನು ಮಾಡಿ ವ್ಯವಸಾಯ ಮಾಡಲು ಪ್ರಾರಂಭಿಸಿದರು. ಈಗಲೂ ಸಮೀಕ್ಷೆ ಮಾಡಿದಾಗ ಭೂ ಒಡೆತನದ ಜನರೇ ಹೆಚ್ಚು ಸಿಗುತ್ತಾರೆ. ಎಷ್ಟೋ ಕಾಡುಗೊಲ್ಲ ಸಮುದಾಯದ ಹೆಣ್ಣು ಹಾಗೂ ಗಂಡು ಇತರೆ ಸಮುದಾಯದವರ ಮನೆಗಳಲ್ಲಿ ಜೀತದಾಳುಗಳಾಗಿ ದುಡಿಯುವಂತಹ ಪ್ರವೃತ್ತಿ ಮುಂದುವರಿದುಕೊಂಡು ಬಂದಿರುವುದನ್ನು ಕಾಣಬಹುದು. ಕೃಷಿಗೆ ಯೋಗ್ಯವಲ್ಲದ ಭೂಮಿಯನ್ನು ಹೊಂದಿರುವ ಕಾರಣ ಆರ್ಥಿಕವಾಗಿ ತುಂಬಾ ಹಿಂದುಳಿದಿದ್ದಾರೆ. ಇದರ ಜೊತೆಗೆ ಆಧುನಿಕ ಕೃಷಿ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಆಧುನಿಕ ಯಂತ್ರೋಪಕರಣಗಳನ್ನು ಕೊಳ್ಳಲು ಅವರಿಂದ ಸಾಧ್ಯವಾಗುತ್ತಿಲ್ಲ. ಒಂದು ಕಡೆ ಪಶುಪಾಲನೆ ಮೂಲೆ ಗುಂಪು ಹಾಗೂ ಕೃಷಿಯಿಂದ ಹಿಂದುಳಿದಿರುವಿಕೆ ಕಾಡುಗೊಲ್ಲರನ್ನು ಮತ್ತೆ ಅಲೆಮಾರಿಗಳನ್ನಾಗಿ ಮಾಡುತ್ತಿದೆ. ಎಷ್ಟೋ ಜನ ವಿದ್ಯಾವಂತ ಪುರುಷ ಹಾಗೂ ಸ್ತ್ರೀಯರು ಬೆಂಗಳೂರಿನಂತಹ ದೊಡ್ಡ ದೊಡ್ಡ ಪಟ್ಟಣಗಳಿಗೆ ಗುಳೆ ಹೋಗುತ್ತಿದ್ದಾರೆ. ಇವರು ವಾಸವಾಗಿರುವಂತಹ ಪ್ರದೇಶಗಳು

ನೀರಾವರಿ ಸೌಲಭ್ಯದಿಂದ ವಂಚಿತವಾಗಿರುವುದಲ್ಲದೆ, ಯಾವ ಸಹಕಾರಿ ಬ್ಯಾಂಕುಗಳು ಸಾಲ ನೀಡುವುದಿಲ್ಲ. ಏಕೆಂದರೆ ಇವರು ಅಲೆಮಾರಿಗಳು. ಪ್ರಸ್ತುತದಲ್ಲಿ ಕಾಡುಗೊಲ್ಲರು ಆರ್ಥಿಕವಾಗಿ ಯಾವ ರೀತಿಯಲ್ಲಿ ತಮ್ಮ ಜೀವನ ನಿರ್ವಹಣೆ ಮಾಡುತ್ತಿದ್ದಾರೆಂದು ಈ ಕೆಳಗಿನ ಕೋಷ್ಟಕಗಳಿಂದ ತಿಳಿಯಬಹುದು.

**ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲ್ಲೂಕುವಾರು ಕುಟುಂಬಗಳ ಭೂಹಿಡುವಳಿ.**

**ಕೋಷ್ಟಕ ೪.೧.**

| ಕಸುಬುಗಳು | ಗಂಡು | ಹೆಣ್ಣು | ಒಟ್ಟು | ಶೇಕಡ |
|---|---|---|---|---|
| ಕೃಷಿ | ೧೦೫೦ | ೪೨೫ | ೧೪೭೫ | ೫೮.೮೬ |
| ಕೃಷಿ ಕೂಲಿ | ೩೦೭ | ೩೩೦ | ೬೩೭ | ೨೫.೪೫ |
| ಪಶುಪಾಲನೆ | ೪೯ | ೩೧ | ೮೦ | ೩.೧೯೨ |
| ಕುರಿ ಕಾಯುವುದು | ೩೯ | ೪೬ | ೮೫ | ೩.೩೯೨ |
| ಸರ್ಕಾರಿ | ೩೬ | ೧೭ | ೫೩ | ೨.೧೧೫ |
| ಖಾಸಗಿ | ೩೮ | ೨೮ | ೬೬ | ೨.೬೩೪ |
| ಇತರೆ | ೮೫ | ೨೫ | ೧೧೨ | ೪.೪೬೯ |
| ಒಟ್ಟು | ೧೨೦೪ | ೯೦೨ | ೨೫೦೬ | |

ಈ ಮೇಲಿನ ನನ್ನ ಕ್ಷೇತ್ರಕಾರ್ಯದ ಸಮೀಕ್ಷೆಯನ್ನು ಗಮನಿಸಿದಾಗ ಕೃಷಿಯನ್ನು ೫೮.೫೬ರಷ್ಟು ಜನ ಅವಲಂಬಿಸಿರುವುದು ಹಾಗೂ ಕೃಷಿಯನ್ನು ೨೫.೪೨% ಜನ ಅವಲಂಬಿಸಿದ್ದಾರೆ. ಪಶುಪಾಲನೆಯನ್ನು ೩.೧೯೨ರಷ್ಟು ಜನರು ಅವಲಂಬಿಸಿದ್ದಾರೆ. ಕುರಿ ಕಾಯುವುದು ೩.೩೯೨ ಜನಗಳು ಮಾತ್ರ, ಸರ್ಕಾರಿ ಕೆಲಸ ಶೇಕಡ ೨.೧೧೫ರಷ್ಟು, ಖಾಸಗಿ ಕೆಲಸ ಶೇಕಡ ೨.೬೩೪, ಇತರೆ ಶೇಕಡ ೪.೪೬೯ರಷ್ಟು ಜನರು ಅವಲಂಬಿಸಿದ್ದಾರೆ ಒಟ್ಟಾರೆ ಪಶುಪಾಲನೆ ಕಡಿಮೆ ಆಗಿರುವುದು ಕಂಡುಬಂದಿದೆ. ಕೃಷಿ ಮತ್ತು ಕೂಲಿಯನ್ನು ಹೆಚ್ಚಿಗೆ ಜನರು ಅಳವಡಿಸಿಕೊಂಡಿದ್ದು, ಈ ಮೇಲಿನ ಪಟ್ಟಿಯಿಂದ ತಿಳಿದು ಬಂದಿದೆ. ಇದನ್ನು ಗಮನಿಸಿದರೆ ಮೂಲ ವೃತ್ತಿಗಳಾದ ಪಶುಪಾಲನೆ ಹಾಗೂ ಕುರಿಸಾಕಣೆ ಅತ್ಯಂತ ಕಡಿಮೆ ಇದಕ್ಕೆ ಮೂಲ ಕಾರಣವನ್ನು ಗಮನಿಸಿದಾಗ ಹುಲ್ಲುಗಾವಲುಗಳು ಅಭಿವೃದ್ಧಿಯ ನೆಪದಲ್ಲಿ ಬಂಡವಾಳಶಾಹಿಗಳ ಕೈಗೆ ಒಳಗಾಗಿರುವುದು ತಿಳಿಯುತ್ತದೆ. ಮೂಲವೃತ್ತಿಯನ್ನು ಮುಂದುವರಿಸಲು ಪಶುಗಳು ಹಾಗೂ ಕುರಿಗಳಿಗೆ ಮಾರಕ ರೋಗರುಜಿನಗಳು ಬಂದು ಸಾವಿಗೀಡಾಗುವುದರಿಂದ ಇವರ ಪಶುಗಳಿಗೆ ಸರಿಯಾದ ಔಷಧೋಪಚಾರ ಸಿಗುತ್ತಿಲ್ಲವಾದ್ದರಿಂದ ಪಶುಪಾಲನೆ ಇಂದು ತುಂಬಾ ಕಷ್ಟದಾಯಕವಾಗಿದೆ. ಪಾರಂಪರಿಕ ಮೂಲ ಕಸುಬುಗಳನ್ನು ಕಾಡುಗೊಲ್ಲ

ಸಮುದಾಯ ಬಿಟ್ಟು ಆಧುನಿಕ ಕಸುಬುಗಳನ್ನು ಅಳವಡಿಸಿಕೊಳ್ಳಲು ಇವರಲ್ಲಿ ಆ ವಸ್ತುಗಳ ಉತ್ಪಾದನೆಯ ತಂತ್ರಜ್ಞಾನ ತಿಳಿದಿಲ್ಲ ಕೃಷಿಯ ಕಡೆ ಒಲವು ತೋರಿಸಿದರೂ ಸಹ ಇಂದಿನ ಆಧುನಿಕ ಕೃಷಿಗೆ ಸಾಂಪ್ರದಾಯಿಕವಾಗಿ ಅಳವಡಿಸಿಕೊಂಡಿರುವ ಪದ್ಧತಿ ನೆರವಾಗುವುದಿಲ್ಲ. ಇನ್ನೊಂದು ಕಡೆ ಸರ್ಕಾರಿ ಕೆಲಸ ಪಡೆದುಕೊಳ್ಳಲು ವಿದ್ಯಾಭ್ಯಾಸದ ಕೊರತೆ, ವಿದ್ಯಾಭ್ಯಾಸ ಇದ್ದರೂ ಸಹ ಹಟ್ಟಿಯ ವಾಸಿಗಳಾದ ಇವರಿಗೆ ತಮ್ಮ ಹಟ್ಟಿಯಿಂದ ನಗರಕ್ಕೆ ಬಂದು ಉನ್ನತ ವ್ಯಾಸಂಗ ಮಾಡಲು ಮೂಲಭೂತ ಸೌಕರ್ಯಗಳ ಕೊರತೆಯಿಂದ ನಲುಗಿದ್ದಾರೆ.

ದೇಶದ ಅನೇಕ ಭಾಗಗಳನ್ನು ನೋಡಿದಾಗ ವ್ಯವಸಾಯದಲ್ಲಿ ತೀರ ಬಿಕ್ಕಟ್ಟಿನ ಪರಿಸ್ಥಿತಿ ಇದೆ ಎನ್ನುವ ವಾಸ್ತವವನ್ನು ಅಲ್ಲಗಳೆಯುಂತಿಲ್ಲ. ಪ್ರತಿಯೊಂದು ದೇಶದ ಪ್ರತಿಕೂಲ ಪರಿಸ್ಥಿತಿ ನಡುವೆ ಕೃಷಿ ಕಾರ್ಯ ನಡೆಯುತ್ತಿದೆ ಎನ್ನುವ ಭಾವನೆ ನಮ್ಮಲ್ಲಿ ಮೂಡುತ್ತದೆ. ಇದಕ್ಕೆ ಅನೇಕ ಕಾರಣಗಳಿದ್ದು, ಆದರೆ ಅಂತಿಮ ಉತ್ತರ ಒಂದೇ ಆಗಿದೆ. ಬಹುಪಾಲು ರೈತರು ತೀರ ಸಂಕಷ್ಟದಲ್ಲಿದ್ದಾರೆ ಎನ್ನುವುದು. ಇದಕ್ಕೆ ಕಾಡುಗೊಲ್ಲರು ಹೊರತಾಗಿಲ್ಲ. ಕಾಡುಗೊಲ್ಲರು ಹೊಂದಿರುವ ಭೂಮಿಯು ಮಳೆಯಾಧಾರಿತ ಒಣಬೇಸಾಯದಿಂದ ಕೂಡಿದೆ. ಅವರು ಪಟ್ಟಂತಹ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗುತ್ತಿಲ್ಲ. ಕಾಡುಗೊಲ್ಲರು ಹೊಂದಿರುವ ಭೂಹಿಡುವಳಿ ಅತ್ಯಂತ ಚಿಕ್ಕ ಚಿಕ್ಕ ತಂಡು ಭೂಮಿಗಳಾಗಿ ಇತ್ತ ಅಭಿವೃದ್ಧಿಪಡಿಸಲಾಗದೇ, ಕೃಷಿಯಲ್ಲಿ ಆಧುನಿಕ ಕೃಷಿಪದ್ಧತಿಯನ್ನು ಅಳವಡಿಸಿಕೊಳ್ಳಲಾಗದೇ ಬಂದ ಮಳೆಯಲ್ಲೇ ಅಲ್ಪಸ್ವಲ್ಪ ಮಳೆಯಾಧಾರಿತ ಬೆಳೆಗಳನ್ನೇ ಬೆಳೆದು ತಮ್ಮ ಸಾಂಪ್ರದಾಯಿಕ ಜೀವನ ನಡೆಸುತ್ತಾ ಕಾಲ ಕಳೆಯುವಂತಹ ಪರಿಸ್ಥಿತಿ ಬಂದಿದೆ.

೧೩೯೧ ಕುಟುಂಬಗಳನ್ನು ಸಮೀಕ್ಷೆಗೊಳಪಡಿಸಿದಾಗ ಕೇವಲ ೨೫ ಎಕರೆ ಮೇಲ್ಪಟ್ಟು ಬರೀ ೧೮ ಕುಟುಂಬಗಳು ಭೂಹಿಡುವಳಿ ಹೊಂದಿರುವುದು ನೋಡಿದರೆ ಕಾಡುಗೊಲ್ಲರು ಯಾವ ಪ್ರಮಾಣದಲ್ಲಿ ಆರ್ಥಿಕವಾಗಿ ಸದೃಢರಾಗಿದ್ದಾರೆಯೇ ಅಥವಾ ಸಂಕಷ್ಟದಲ್ಲಿದ್ದಾರೆಯೇ ಎಂಬುದನ್ನು ಕಾಣಬಹುದು.

ಇಂತಹ ಪರಿಸ್ಥಿತಿಯಲ್ಲಿ ಕಾಡುಗೊಲ್ಲರು ಪಶುಪಾಲನೆಯಲ್ಲಿಯೂ ದಕ್ಷತೆ ಹೊಂದದೇ, ಕೃಷಿಯಲ್ಲಿಯಲ್ಲಿಯೂ ಸದೃಢರಾಗದೇ ಯಾವ ಆರ್ಥಿಕ ಕ್ಷೇತ್ರದಲ್ಲಿಯೂ ಸಹ ಸಬಲರಾಗದೇ ಇರುವುದಕ್ಕೆ ಇವರು ಹೊಂದಿದ ಅತ್ಯಂತ ಕಡಿಮೆ ಭೂಹಿಡುವಳಿಯಾಗಿರುತ್ತದೆ. ಇರುವಂತಹ ತಂಡುಭೂಮಿಗಳನ್ನೇ ಅಣ್ಣ ತಮ್ಮಂದಿರು ಪಾಲುಗಳನ್ನು ಮಾಡಿಕೊಂಡು ಉಳುಮೆ ಮಾಡಿದರೆ ಉತ್ಪಾದನಾ ವೆಚ್ಚ ಹೆಚ್ಚಾಗಿ ಭೂಮಿಯಿಂದ ಲಾಭಕ್ಕಿಂತ ನಷ್ಟ ಸಂಭವಿಸುವುದೇ ಹೆಚ್ಚಾಗಿದೆ. ಕಾಡುಗೊಲ್ಲರ ಕೃಷಿ ಭೂಮಿಗಳನ್ನು ಗಮನಿಸಿದರೆ ಇವರು ಚಿಕ್ಕ ಚಿಕ್ಕ ಹಿಡುವಳಿದಾರರಾಗಿರುತ್ತಾರೆ. ಹಾಗಾಗಿ ಇವರಿಗೆ ಉತ್ಪಾದನಾ ವೆಚ್ಚ ಹೆಚ್ಚಾಗಿ ಕೃಷಿಯಿಂದ ಬರುವ ಆದಾಯಕ್ಕಿಂತ ಖರ್ಚ ಅಧಿಕವಾಗಿ ಸಂಕಷ್ಟವನ್ನು ಅನುಭವಿಸುತ್ತಿದ್ದಾರೆ. ಸಹಕಾರಿ ಸಂಘಗಳು ಹಾಗು ಬ್ಯಾಂಕುಗಳಿಂದ ಮತ್ತು ಲೇವಾದೇವಿ ವ್ಯವಹಾರಸ್ಥರಿಂದ ಸಾಲ ಪಡೆದು ಅದನ್ನು ತೀರಿಸಲಾಗದೆ ಇದ್ದಂತಹ ಅಲ್ಪ ಸ್ವಲ್ಪ ಭೂಮಿಯನ್ನೂ ಸಹ ಮಾರಿಕೊಂಡಂತಹ ಪರಿಸ್ಥಿತಿಯನ್ನು ಕಾಣಬಹುದು.

ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲ್ಲೂಕುವಾರು ಕುಟುಂಬಗಳ ಭೂಹಿಡುವಳಿ.

ಕೋಷ್ಟಕ ೪.೨

| ಕ್ರಸಂ | ತಾಲ್ಲೂಕುಗಳು | ಕುಟುಂಬಗಳು | ಭೂಹಿಡುವಳಿ(ಎಕರೆ) | | | ಭೂಹಿಡುವಳಿ ಶ್ರೇಣಿಗಳು(ಎಕರೆಗಳಲ್ಲಿ) | | | | | |
|---|---|---|---|---|---|---|---|---|---|---|---|
| | | | ಒಣ ಭೂಮಿ | ನೀರಾವರಿ | ಒಟ್ಟು | ೨೫ರ ಮೇಲ್ಪಟ್ಟು | ೧೦.೧೯–೨೫ | ೧–೧೦ | ೨.೫೧–೫ | ೦.೫–೨.೫೦ | ಭೂ ರಹಿತ |
| | | | | | | ಎ | ಬಿ | ಸಿ | ಡಿ | ಇ | ಎಫ್ |
| ೧. | ಚಳ್ಳಕೆರೆ | ೨೯೫ | ೧೭೯೫ | ೩೨೨ | ೨೧೧೭ | ೭ | ೫೨ | ೯೪ | ೭೯ | ೧೯ | ೪೪ |
| ೨. | ಚಿತ್ರದುರ್ಗ | ೧೯೯ | ೭೦೨ | ೧೨೩ | ೮೨೪ | ೧ | ೧೧ | ೩೪ | ೬೬ | ೪೮ | ೩೯ |
| ೩. | ಮೊಳಕಾಲ್ಮೂರು | ೮೨ | ೧೯೪ | ೫೨೫ | ೨೪೬.೪ | ೦ | ೨ | ೧೨ | ೨೩ | ೧೮ | ೨೭ |
| ೪. | ಹಿರಿಯೂರು | ೪೨೮ | ೮೭೯ | ೧೭೪೫ | ೨೬೨೧ | ೬ | ೪೩ | ೮೩ | ೧೫೯ | ೮೯ | ೪೮ |
| ೫. | ಹೊಸದುರ್ಗ | ೧೫೮ | ೭೧೫ | ೧೫೭ | ೮೭೧೫ | ೪ | ೧೬ | ೪೮ | ೩೮ | ೧೨ | ೪೦ |
| ೬. | ಹೊಳಲ್ಕೆರೆ | ೨೨೯ | ೬೭೦ | ೧೬೪ | ೮೩೪ | ೦ | ೪ | ೩೨ | ೭೮ | ೫೨ | ೬೭ |
| | ಒಟ್ಟು | ೧೩೯೧ | ೪೯೫೦ | ೨೫೬೩ | ೭೫೧೩.೯ | ೧೮ | ೧೨೮ | ೩೦೩ | ೪೩೯ | ೨೩೮ | ೨೬೫ |




ಕಾಡುಗೊಲ್ಲ ಸಮುದಾಯದಲ್ಲಿ ಶೇಕಡ ೫೯% ಕೃಷಿಯಲ್ಲಿ ಹಾಗೂ ೨೫% ಕೃಷಿ ಸಂಬಂಧಿಸಿದ ಕೂಲಿ ಕಾರ್ಮಿಕರಾಗಿ ಜೀವನ ನಡೆಸುತ್ತಿದ್ದಾರೆ. ಚಿತ್ರದುರ್ಗ ಜಿಲ್ಲೆಯು ಹಿಂದುಳಿದ ಮತ್ತು ಅತಿ ಕಡಿಮೆ ಮಳೆ ಬೀಳುವ ಪ್ರದೇಶ ಎಂದು ಪರಿಗಣಿತವಾಗಿದೆ. ಇಲ್ಲಿ ಭೌಗೋಳಿಕ ಲಕ್ಷಣಗಳಲ್ಲಿ ಕುರುಚಲು ಕಾಡು ಅತಿಯಾದ ತಾಪಮಾನ. ಅಂತರ್ಜಲ ಮಟ್ಟದ ಕುಸಿತ ಕಾರಣ, ಮಳೆಯ ಪ್ರಮಾಣ ಕಡಿಮೆ ಇರುವುದು ಮತ್ತು ನದಿಗಳ ಬತ್ತುವಿಕೆ ಈ ಎಲ್ಲಾ ಲಕ್ಷಣಗಳು ಚಿತ್ರದುರ್ಗವನ್ನು ಆರ್ಥಿಕವಾಗಿ ಹಿಂದುಳಿಯಲು ಕಾರಣವಾಗಿವೆ. ಇಲ್ಲಿ ಕೃಷಿಗೆ ಯೋಗ್ಯವಲ್ಲದ ಭೂಮಿಯೇ ಅಧಿಕವಾಗಿರುವುದರಿಂದ ಸರ್ಕಾರ ಸರ್ಕಾರಿ ಸ್ವಾಮ್ಯದ ಕೈಗಾರಿಕಾ ವಲಯಗಳನ್ನು ಸ್ಥಾಪಿಸಿದೆ. ಇಲ್ಲಿಯ ಭೂಮಿಯು ಹೆಚ್ಚು ನೀರನ್ನು ಹಿಡಿದಿಟ್ಟುಕೊಳ್ಳುವುದು ಮತ್ತು ಕಡಿಮೆ ಮಳೆಯಿಂದ ಸಂತೃಪ್ತಿಯಾಗದೇ ಬಿರುಕು ಬಿಟ್ಟುಕೊಂಡಿರುತ್ತದೆ. ಅಂದರೆ ಕೆಂಪು ಮಣ್ಣು ಅಧಿಕವಾಗಿದ್ದು ಇದರ ನಂತರದ ಸ್ಥಾನದಲ್ಲಿ ಕಪ್ಪು ಮಣ್ಣು ಇದೆ. ಇದು ಕಡಿಮೆ ಮಳೆ ಬಂದರೂ ಬೆಳೆ ಬೆಳೆಯಲು ಸಹಕಾರಿಯಾಗಿದೆ. ಇದರಿಂದಾಗಿ ಈ ಜಿಲ್ಲೆಯ ಕಾಡುಗೊಲ್ಲರು ಸೇರಿದಂತೆ ರೈತರು ಹೆಚ್ಚು ಎಣ್ಣೆ ಕಾಳುಗಳ ಬೆಳೆಯನ್ನು ಬೆಳೆಯುವವರು ಇದರ ಪರಿಣಾಮವಾಗಿ ಚಳ್ಳಕೆರೆಯು ರಾಜ್ಯದಲ್ಲಿಯೇ

ಹೆಚ್ಚು ಎಣ್ಣೆಮಿಲ್‌ಗಳನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ಇಂತಹ ಭೌಗೋಳಿಕ ವೈಪರೀತ್ಯದ ನಡುವೆ ಪಶುಪಾಲಕರಾಗಿದ್ದ ಕಾಡುಗೊಲ್ಲರು ಕೃಷಿಕರಾಗಿದ್ದಾರೆ.

**ಈ ಸಮೀಕ್ಷೆಯಲ್ಲಿ ಗಮನಿಸಿದಾಗ**

೧. **ಚಳ್ಳಕೆರೆ** ತಾಲ್ಲೂಕಿನ ೨೯೫ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಒಣಭೂಮಿ ೧೭೯೫ ಎಕರೆ ಕುಟುಂಬದಿಂದ ಅದೇ ರೀತಿ ನೀರಾವರಿ ಭೂಮಿ ೩೨೨ ಎಕರೆ ಒಟ್ಟು ೨೧೧೭ ಎಕರೆ ಭೂಮಿಯನ್ನು ಕಾಡುಗೊಲ್ಲರು ಚಳ್ಳಕೆರೆ ತಾಲ್ಲೂಕಿನಲ್ಲಿ ಹೊಂದಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಅದೇ ತಾಲ್ಲೂಕಿನಲ್ಲಿ ೨೫ ಎಕರೆಗೂ ಮೇಲ್ಪಟ್ಟ ಆಸ್ತಿಯನ್ನು ಹೊಂದಿರುವ ಕುಟುಂಬಗಳು ೭ ಮಾತ್ರ. ೧೦ರಿಂದ ೨೫ ಎಕರೆ ಹೊಂದಿರುವ ಕುಟುಂಬಗಳು ೫೨. ಅದೇ ರೀತಿ ೫.೧ರಿಂದ ೧೦ ಎಕರೆ ಹೊಂದಿರುವ ಕುಟುಂಬಗಳು ೯೪. ೨೫ರಿಂದ ೫ ಎಕರೆ ಹೊಂದಿರುವ ಕುಟುಂಬಗಳು ೭೯, ೦.೫ರಿಂದ ೨.೫೦ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳು ೧೯. ಭೂರಹಿತ ಕುಟುಂಬಗಳು ೪೪ ಇರುವುದು ಕಂಡುಬಂದಿದೆ. ಚಳ್ಳಕೆರೆ ತಾಲ್ಲೂಕಿನಲ್ಲಿ ೫.೧ರಿಂದ ೧೦ ಎಕರೆ ಹೊಂದಿರುವ ಕುಟುಂಬಗಳು ಹೆಚ್ಚಾಗಿದೆ.

೨. **ಚಿತ್ರದುರ್ಗ** ತಾಲ್ಲೂಕಿನಲ್ಲಿ ೧೯೯ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಒಣಭೂಮಿ ೭೦೨ ಎಕರೆ ಇದೆ. ನೀರಾವರಿ ಭೂಮಿ ೧೨೩ ಎಕರೆ ಇದೆ, ಒಟ್ಟು ೮೨೪ ಎಕರೆ ಭೂಮಿಯನ್ನು ೧೯೯ ಕುಟುಂಬಗಳು ಹೊಂದಿವೆ. ಅದರಲ್ಲಿ ೨೫ ಎಕರೆಗಿಂತ ಮೇಲ್ಪಟ್ಟ ಆಸ್ತಿಯನ್ನು ಹೊಂದಿರುವ ಕುಟುಂಬ ಕೇವಲ ೧ ಮಾತ್ರ ೧೦ರಿಂದ ೨೫ ಎಕರೆ ಹೊಂದಿರುವ ಕುಟುಂಬಗಳು ೧೧ ಹಾಗೆಯೇ ೫.೧ರಿಂದ ೧೦ ಎಕರೆ ಹೊಂದಿರುವ ಕುಟುಂಬಗಳು ೩೪, ೨೫ರಿಂದ ೫ ಎಕರೆ ಭೂಮಿ ಹೊಂದಿರುವ ಕುಟುಂಬಗಳು ೬೬. ಕುಟುಂಬಗಳು ೦.೫ರಿಂದ ೨.೫೦ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳು ೪೮, ಭೂರಹಿತ ಕುಟುಂಬಗಳು ೩೯ ಮಾತ್ರ. ಒಟ್ಟಾರೆ ಚಿತ್ರದುರ್ಗ ಜಿಲ್ಲೆಯಲ್ಲಿ ೨.೫–೫ ಎಕರೆ ಭೂಹಿಡುವಳಿ ಹೊಂದಿರುವ ಕುಟುಂಬಗಳು ಹೆಚ್ಚು ಇರುವುದು ಸಮೀಕ್ಷೆಯಿಂದ ತಿಳಿದುಬಂದಿದೆ.

೩. **ಮೊಳಕಾಲ್ಮೂರು** ತಾಲ್ಲೂಕನ್ನು ಸಮೀಕ್ಷೆಗೆ ಒಳಪಡಿಸಿದಾಗ ೮೨ ಕುಟುಂಬಗಳಲ್ಲಿ ೧೯೪ ಎಕರೆ ಒಣಭೂಮಿ ಇರುವುದು ಕಂಡುಬಂದಿದೆ. ೫೨.೫ ಎಕರೆ ನೀರಾವರಿ ಭೂಮಿ. ೨೪೬.೪ ಎಕರೆ ೮೨ ಕುಟುಂಬಗಳು ಹೊಂದಿವೆ. ಅದರಲ್ಲಿ ೨೫ ಎಕರೆಗಿಂತ ಮೇಲ್ಪಟ್ಟ ಆಸ್ತಿಯನ್ನು ಹೊಂದಿರುವ ಕುಟುಂಬಗಳು ಎಂದು ತಿಳಿದು ಬಂದಿರುವುದು ಆಶ್ಚರ್ಯಕರ ಸಂಗತಿಯಾಗಿದೆ. ೧೦ರಿಂದ ೨೫ ಎಕರೆ ಹೊಂದಿರುವ ಕುಟುಂಬಗಳು ಎರಡು ಮಾತ್ರ. ೫.೧ರಿಂದ ೧೦ ಎಕರೆ ಹೊಂದಿರುವ ಕುಟುಂಬಗಳು ೧೨. ೨.೫೧ರಿಂದ ೫ ಎಕರೆ ಹೊಂದಿರುವ ಕುಟುಂಬಗಳು ೨೩. ೦.೫ರಿಂದ ೨.೫೦ ಎಕರೆ ಹೊಂದಿರುವ ಕುಟುಂಬಗಳು ೧೮ ಭೂರಹಿತ ಕುಟುಂಬಗಳು ೨೭. ಇಡೀ

ಕರ್ನಾಟಕದಲ್ಲಿಯೇ ಅತ್ಯಂತ ಕಡಿಮೆ ಮಳೆ ಬೀಳುವ ಪ್ರದೇಶ ಮೊಳಕಾಲ್ಮೂರು ತಾಲ್ಲೂಕು. ಈ ಸಮೀಕ್ಷೆಯಿಂದ ತಿಳಿದುಬಂದಿರುವ ಮಾಹಿತಿ ಎಂದರೆ ೨೫೧ರಿಂದ ೫ ಎಕರೆ ಹೊಂದಿರುವ ಕುಟುಂಬಗಳ ಸಂಖ್ಯೆ ಹೆಚ್ಚು ಕಂಡುಬಂದಿದೆ.

**೪. ಹಿರಿಯೂರು:** ಈ ತಾಲ್ಲೂಕಿನ ೪೨೮ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ೮೭೬ ಎಕರೆ ಒಣ ಭೂಮಿ ಹೊಂದಿರುವುದು ತಿಳಿದುಬಂದಿದೆ. ನೀರಾವರಿಯ ೧೭೪೫ ಎಕರೆ ಇರುವುದು ಕಂಡುಬಂದಿದೆ ಒಟ್ಟು ೨೬೨೧ ಎಕರೆ ಭೂಮಿಯನ್ನು ಹಿರಿಯೂರು ತಾಲ್ಲೂಕಿನ ಕಾಡುಗೊಲ್ಲರು ಹೊಂದಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಅದರಲ್ಲಿ ೨೫ ಎಕರೆಗೂ ಮೇಲ್ಪಟ್ಟ ಆಸ್ತಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೪೩. ಅದೇ ರೀತಿ ೫.೧ರಿಂದ ೧೦ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೧೫೯. ೦.೫ರಿಂದ ೫ ಎಕರೆ ಭೂಮಿಯನ್ನುಹೊಂದಿರುವ ಕುಟುಂಬಗಳ ಸಂಖ್ಯೆ ೮೯. ಭೂರಹಿತ ಕುಟುಂಬಗಳ ಸಂಖ್ಯೆ ೪೮. ಹಿರಿಯೂರು ತಾಲ್ಲೂಕಿನಲ್ಲಿ ವೇದಾವತಿ ಅಥವಾ ವಾಣಿವಿಲಾಸ ಸಾಗರ ಹರಿಯುವುದರಿಂದ ತಾಲ್ಲೂಕಿನ ಮುಕ್ಕಾಲು ಭಾಗ ನೀರಾವರಿ ವ್ಯವಸ್ಥೆಯನ್ನು ಹೊಂದಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಆದರೆ ಇತ್ತೀಚೆಗೆ ಮಳೆಯ ಅಭಾವದಿಂದ ವಾಣಿವಿಲಾಸ ಸಾಗರದಲ್ಲಿ ನೀರು ಇಲ್ಲದೆ ನೀರಾವರಿ ವ್ಯವಸ್ಥೆ ಸರಿಯಾಗಿರುವುದಿಲ್ಲ.

**೫. ಹೊಸದುರ್ಗ** ತಾಲ್ಲೂಕಿನ ೧೫೮ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಒಣ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೭೧೫. ನೀರಾವರಿ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೧೫೭. ಒಟ್ಟು ಕಾಡುಗೊಲ್ಲರು ಹೊಂದಿರುವ ಭೂಮಿ ೮೭೧.೫ ಎಕರೆ ಭೂಮಿ. ಅದರಲ್ಲಿ ೨೫ ಎಕರೆಗೂ ಮೇಲ್ಪಟ್ಟ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೪.೧೦ ರಿಂದ ೨೫ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೧೬, ೫.೧ ರಿಂದ ೧೦ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೪೮, ೨.೫೧ರಿಂದ ೫ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೩೮, ೦೫ರಿಂದ ೨.೫೦ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳು ೧೨, ಭೂರಹಿತ ಕುಟುಂಬಗಳು ೪೦. ಹೊಸದುರ್ಗ ತಾಲ್ಲೂಕಿನಲ್ಲಿ ೧೫೮ ಕುಟುಂಬಗಳಲ್ಲಿ ೪೦ ಕುಟುಂಬಗಳ ಭೂ ಒಡೆತನದಿಂದ ವಂಚಿತವಾಗಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಅದೇ ರೀತಿ ೪೮ ಕುಟುಂಬಗಳು ೫.೧–೧೦ ಎಕರೆ ಜಮೀನು ಹೊಂದಿದವರ ಪ್ರಮಾಣ ಹೆಚ್ಚಾಗಿದೆ.

**೬. ಹೊಳಲ್ಕೆರೆ** ತಾಲ್ಲೂಕಿನಲ್ಲಿ ೨೨೯ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ೬೭೦ ಕುಟುಂಬಗಳು ನೀರಾವರಿ ಜಮೀನನ್ನು ಹೊಂದಿರುವುದರ ಬಗ್ಗೆ ಸಮೀಕ್ಷೆಯಿಂದ ತಿಳಿದುಬಂದಿದೆ ಒಟ್ಟಾರೆಯಾಗಿ ೮೩೪ ಕುಟುಂಬಗಳು ಆಸ್ತಿಯ ಒಡೆತನ ಹೊಂದಿರುವುದು ಕಂಡುಬಂದಿದೆ. ಇದರಲ್ಲಿ ೨೫ ಎಕರೆಗೂ

ಮೇಲ್ಪಟ್ಟ ಆಸ್ತಿಯನ್ನು ಹೊಂದಿರುವ ಕುಟುಂಬಗಳು ಒಂದೂ ಇಲ್ಲ. ೧೦.೧ರಿಂದ ೨೫ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ನಾಲ್ಕು ಮಾತ್ರ. ೫.೧ರಿಂದ ೧೦ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೭೪, ೦.೫ರಿಂದ ೨.೫೦ ಎಕರೆ ಭೂಮಿಯನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ೫೨, ಭೂರಹಿತ ಕುಟುಂಬಗಳ ಸಂಖ್ಯೆ ೬೭. ಹೊಳಲ್ಕೆರೆ ತಾಲ್ಲೂಕಿನಲ್ಲಿಯೂ ಸಹ ಭೂರಹಿತ ಕುಟುಂಬಗಳು ಹೆಚ್ಚು ಇರುವುದು ಕಂಡುಬಂದಿದೆ.

ಒಟ್ಟಾರೆ ಚಿತ್ರದುರ್ಗ ಜಿಲ್ಲೆಯ ೧೩೯೧ ಕುಟುಂಬಗಳಲ್ಲಿ ೪೯೫೦ ಎಕರೆ ಒಣ ಭೂಮಿಯನ್ನು ೨೫೬೩ ಎಕರೆ ನೀರಾವರಿಯನ್ನು ಹೊಂದಿರುವುದು ತಿಳಿದುಬಂದಿದೆ. ಒಟ್ಟು ೫೧೩೫ ಎಕರೆ ಭೂಮಿಯನ್ನು ಕಾಡುಗೊಲ್ಲರು ಹೊಂದಿದ್ದಾರೆ. ಅದರಲ್ಲಿ ೧೮ ಕುಟುಂಬಗಳು ೨೫ ಎಕರೆಗಿಂತ ಹೆಚ್ಚು ಭೂಮಿಯನ್ನು ಹೊಂದಿದ್ದಾರೆ. ೧೨೮ ಕುಟುಂಬಗಳು ೧೦.೦ –೨೫ ಎಕರೆ ಭೂಮಿಯನ್ನು ಹೊಂದಿದ್ದಾರೆ. ೧೨೮ ಕುಟುಂಬಗಳು ಭೂಮಿಯನ್ನು ೩೦೩ ಕುಟುಂಬಗಳು ಹೊಂದಿವೆ. ೨.೫೧ರಿಂದ ೫ ಕುಟುಂಬಗಳು ೪೩೯ ಎಕರೆ ಭೂಮಿಯನ್ನು ಹೊಂದಿವೆ. ೦.೫ ೨೫೦ರಷ್ಟು ಭೂಮಿಯನ್ನು ೨೩೮ ಕುಟುಂಬಗಳು ಹೊಂದಿವೆ. ಭೂರಹಿತ ಕುಟುಂಬಗಳ ಸಂಖ್ಯೆ ೨೬೫ ಇರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಕಾಡುಗೊಲ್ಲರು ಕೃಷಿಯಲ್ಲಿ ತುಂಬಾ ಹಿಂದುಳಿದವರಾಗಿದ್ದು, ಭೂ ಹಿಡುವಳಿ ಹೊಂದಿದವರ ಸಂಖ್ಯೆ ಕಡಿಮೆ ಇರುವುದು ಕಂಡುಬಂದಿದೆ. ಇವರಲ್ಲಿ ಅತಿ ಹೆಚ್ಚಾಗಿ ಸಣ್ಣ ಹಿಡುವಳಿದಾರರೇ ಹೆಚ್ಚಾಗಿದ್ದು ಹೆಚ್ಚು ಒಣಬೇಸಾಯ ಪದ್ದತಿಯನ್ನು ಅವಲಂಬಿಸಿದ್ಧಾರೆ. 'ರಾಜ್ಯದ ಮೂರನೆಯ ಹಿಂದುಳಿದ ವರ್ಗದ ಆಯೋಗವು ರಾಜ್ಯದೆಲ್ಲೆಡೆ ನಡೆಸಿದ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸಮೀಕ್ಷೆಯ ಪ್ರಕಾರ ಕಾಡುಗೊಲ್ಲರ ಸಮುದಾಯವು ಅತ್ಯಂತ ಹೆಚ್ಚಿನ ಭೂರಹಿತ ಮತ್ತು ಜಾಗರಹಿತ ಸಮುದಾಯಗಳಲ್ಲಿ ಒಂದು ಎಂಬುದಾಗಿ ತಿಳಿಸಿದೆ'.[೧೭] ಒಂದು ವೇಳೆ ಕೆಲವರಿಗೆ ಸ್ವಲ್ಪ ಪ್ರಮಾಣದ ಜಮೀನಿದ್ದರೆ ಅದರಲ್ಲಿ ಆಧುನಿಕ ಕೃಷಿಯನ್ನು ಅಳವಡಿಸಿಕೊಳ್ಳಲಾಗದೆ ಸಂಪ್ರದಾಯಬದ್ಧವಾದ ಕೃಷಿಪದ್ದತಿಯಲ್ಲಿಯೇ ತಮಗೆ ಬೇಕಾದಂತಹ ಸ್ವಲ್ಪಮಟ್ಟಿನ ಆಹಾರ ಬೆಳೆಗಳನ್ನು ಬೆಳೆದು ತಮ್ಮ ಸ್ವಂತ ಅನುಭೋಗಕ್ಕಾಗಿ ಬಳಸುತ್ತಿದ್ದಾರೆ. ಬಹುಸಂಖ್ಯೆಯ ಸಾಗುವಳಿದಾರರು ಸಣ್ಣ ಕೃಷಿಕರಾಗಿದ್ದಾರೆ. ಕಾಡುಗೊಲ್ಲರ ಜನಸಂಖ್ಯೆ ಹೆಚ್ಚಳವಾಗುತ್ತಿರುವುದರಿಂದ ಪ್ರತಿ ತಲೆಮಾರಿನಲ್ಲಿಯೂ ಸಹ ಹಿಡುವಳಿಗಳು ವಿಭಜನೆಗೊಂಡು ಛಿದ್ರವಾಗುತ್ತಿವೆ. ಛಿದ್ರಗೊಂಡ ಚಿಕ್ಕ ಹಿಡುವಳಿಗಳು ಆರ್ಥಿಕವಾಗಿ ಪ್ರತಿಫಲದಾಯಕವಾಗಿರುವುದಿಲ್ಲ.

### ೪.೮. ಪಶುಸಂಪತ್ತು

ಕಾಡುಗೊಲ್ಲರನ್ನು ಪಶುಪಾಲಕರು ಎಂದು ಕರೆಯುತ್ತಾರೆ. ಇದಕ್ಕೆ ಕಾರಣ ಕಾಡುಗೊಲ್ಲರು ಭೂ ಒಡೆತನಕ್ಕಿಂತ ಪಶುಪಾಲನೆಯನ್ನು ಹೆಚ್ಚು ಅವಲಂಭಿಸಿದ್ದಾರೆ. ಆ ಕಾರಣದಿಂದ ಕಾಡುಗೊಲ್ಲರ ಆರ್ಥಿಕ ಸ್ಥಿತಿಗತಿಯನ್ನು ಅರಿಯಲು ಪಶುಸಂಪತ್ತು ಮುಖ್ಯ ಆಧಾರವಾಗುತ್ತದೆ. ಯಾವುದೇ

ಸಮುದಾಯದ ಆರ್ಥಿಕ ಸ್ಥಿತಿಗತಿಯು ತಿಳಿದುಬರುವುದು ಅವರು ಅವಲಂಬಿಸಿರುವ ಕಸುಬಿನಿಂದ. ಆದುದರಿಂದ ಕಾಡುಗೊಲ್ಲರ ಮುಖ್ಯ ಕಸುಬು ಪಶುಪಾಲನೆಯಾಗಿರುವುದರಿಂದ ಅವರ ಬಳಿ ಇರುವ ಎತ್ತುಗಳ ಸಂಖ್ಯೆ, ಆಕಳುಗಳ ಸಂಖ್ಯೆ, ಎಮ್ಮೆಗಳ ಸಂಖ್ಯೆ, ಕುರಿ ಮೇಕೆಗಳ ಸಂಖ್ಯೆ ಹಾಗೂ ಕೋಳಿಗಳ ಸಂಖ್ಯೆಯನ್ನು ಅನುಸರಿಸಿಕೊಂಡು ಕಾಡುಗೊಲ್ಲರ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಬಹುದು. ಕಾಡುಗೊಲ್ಲರು ಹೆಚ್ಚಾಗಿ ಇತ್ತೀಚೆಗೆ ಕುರಿ ಸಾಕಾಣಿಕೆ ಮಾಡುತ್ತಿರುವುದು ತಿಳಿದುಬಂದಿದೆ. ಪಶುಪಾಲನೆ ಮತ್ತು ಕೃಷಿಗೆ ಅವಿನಾಭಾವ ಸಂಬಂಧವಿದೆ. ಕೃಷಿಕ ವೃತ್ತಿ ಮಾಡುತ್ತಿರುವವರಿಗೆ ಕನಿಷ್ಠ ಅವಶ್ಯಕತೆಗಾಗಿ ಪಶುಗಳು ಇಲ್ಲದೇ ಹೋದರೆ ಕೃಷಿನ್ನೇ ಇಲ್ಲವೆಂದರೆ ತಪ್ಪಾಗಲಾರದು. ಕೃಷಿಯಲ್ಲಿ ಪಶುಗಳ ಮೂಲಕ ಮಾಡಬೇಕಾಗಿರುವ ಕಾರ್ಯಗಳನ್ನು ಯಾವುದೇ ಆಧುನಿಕ ಸಲಕರಣೆಗಳಿಂದ ಮಾಡಲು ಸಾಧ್ಯವಿರುವುದಿಲ್ಲ. ಮೂಲತಃ ಪಶುಸಂಗೋಪನೆ ಕೃಷಿಯ ಸಹವೃತ್ತಿಯ ಬೆನ್ನೆಲುಬು ಕೂಡ. ಹಿಂದೆ ಮನೆಗಳಲ್ಲಿ ದನಗಳಿದ್ದರೆ ಅವನೇ ಶ್ರೀಮಂತನೆಂಬ ಕಾಲವಿತ್ತು. ಕಾಡುಗೊಲ್ಲರ ಸಾಂಸ್ಕೃತಿಕ ನಾಯಕರಲ್ಲಿ ಎತ್ತಪ್ಪನ ಕಾಲಕ್ಕೆ ಆಕಳು ಹಾಗೂ ಎತ್ತುಗಳನ್ನು ಸಾಕುತ್ತಿರುವ ಬಗ್ಗೆ ಮಾಹಿತಿ ದೊರೆಯುತ್ತದೆ. ಹಾಗೆಯೇ ಜುಂಜಪ್ಪನ ಕಾಲಕ್ಕೆ ಎತ್ತು, ಆಕಳು ಮತ್ತು ಕುರಿಸಾಕಾಣಿಕೆ ಮಾಡುತ್ತಿರುವುದು ತಿಳಿಯುತ್ತದೆ. ಕಾಡುಗೊಲ್ಲರು ಪಶುಪಾಲನೆ ಮಾಡುವುದರಲ್ಲಿ ಬಹಳ ಮುಂದು. ತಮ್ಮ ಜೀವನ ನಿರ್ವಹಣೆ ಹಾಗೂ ಆದಾಯದ ನಿರೀಕ್ಷೆಯನ್ನು ಪಶುಪಾಲನೆಯಿಂದಲೇ ನಿರೀಕ್ಷಿಸುತ್ತಾರೆ. ಕಾಡುಗೊಲ್ಲರು ತಮ್ಮ ಪಶುಸಂಪತ್ತನ್ನು ದೈವಗಳು ಎಂದು ನಂಬಿದವರು.

ಕಾಡುಗೊಲ್ಲರ ಪಶುಸಂಪತ್ತನ್ನು ಕುರಿತಾಗಿ ಸಮೀಕ್ಷೆ ಮಾಡಿದಾಗ ಈ ಕೆಳಕಂಡ ಅಂಶಗಳು ಗೋಚರವಾಗುತ್ತಿವೆ.

ಹಿಂದಿನ ಕಾಲದಿಂದ ಪಶುಪಾಲನೆ ಕಾಡುಗೊಲ್ಲರಲ್ಲಿ ಬಂದಂತಹ ಸಂಪ್ರದಾಯಬದ್ಧವಾದಂತಹ ವೃತ್ತಿಯಾಗಿದೆ. ಕೃಷಿಯಲ್ಲಿ ಏನೇ ಆಧುನಿಕ ಬದಲಾವಣೆ ತಂದರೂ ಸಹ ಪಶುಗಳ ಪ್ರಾಮುಖ್ಯತೆ ತಂಬಾ ಅವಶ್ಯವಾದುದು.

**ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲ್ಲೂಕುವಾರು ಹಾಗೂ ಕುಟುಂಬವಾರು ಪಶುಸಂಪತ್ತಿನ ಪ್ರಮಾಣ.**

**ಕೋಷ್ಟಕ ೪.೩.**

| ಕ್ರ.ಸಂ | ತಾಲ್ಲೂಕುಗಳು | ಕುಟುಂಬ | ಎತ್ತು | ಆಕಳು | ಎಮ್ಮೆ | ಕುರಿ | ಮೇಕೆ | ಕೋಳಿ |
|---|---|---|---|---|---|---|---|---|
| ೧. | ಚಳ್ಳಕೆರೆ | ೨೯೫ | ೪೬ | ೭೨ | ೫೮ | ೫೫೦೭ | ೪೩೦ | ೬ |
| ೨. | ಚಿತ್ರದುರ್ಗ | ೧೯೯ | ೮೦ | ೧೩೩ | ೮೯ | ೩೦೮೫ | ೪೫೦ | ೧೫೦ |
| ೩. | ಮೊಳಕಾಲ್ಮೂರು | ೮೨ | ೩೩ | ೭೪ | ೧೨೭ | ೧೬೦ | ೬೦ | ೦ |

| ೪. | ಹಿರಿಯೂರು | ೪೨೮ | ೪೩೭ | ೫೬೧ | ೪೫೭ | ೩೨೦೬ | ೫೩೯೯ | ೭೨೩ |
|---|---|---|---|---|---|---|---|---|
| ೫. | ಹೊಸದುರ್ಗ | ೧೫೮ | ೨೯ | ೫೭ | ೪೦ | ೨೧೧೬ | ೧೦೩ | ೩೦ |
| ೬. | ಹೊಳಲ್ಕೆರೆ | ೨೨೯ | ೯೦ | ೧೭೧ | ೧೪೭ | ೧೪೦೭ | ೧೮೮೧ | ೭೩ |
| | ಒಟ್ಟು | ೧೩೯೧ | ೭೧೫ | ೧೦೬೮ | ೯೧೮ | ೧೫೪೮೧ | ೮೩೨೩ | ೯೮೨ |




Pastoral Nomads ಎಂದು ಕರೆಸಿಕೊಳ್ಳುವ ಕಾಡುಗೊಲ್ಲ ಸಮುದಾಯ ಪಶುಪಾಲನೆಯನ್ನು ತನ್ನ ಕುಲಕಸುಬು ಎಂದು ಆರಾಧಿಸಿಕೊಂಡು ಬಂದಿದೆ. ಕಾಡುಗೊಲ್ಲರ ಮುಖ್ಯ ವೃತ್ತಿ ಗೋವು/ ಪಶು ಸಾಕಾಣಿಕೆ ಎಂದು ಮಹಾಭಾರತ ಕಾಲದಿಂದಲೂ ತಿಳಿದುಬರುತ್ತದೆ. ಪ್ರಾಚೀನ ಕಾಲದಲ್ಲಿ ಗೋವು ಅಥವಾ ಪಶುಸಂಪತ್ತನ್ನು ಹೆಚ್ಚು ಹೊಂದಿದವನು ಸಿರಿವಂತನೆಂದು ಗುರುತಿಸಲಾಗುತ್ತಿತ್ತು. ಕಾರಣ ಗೋವುಗಳ ಉತ್ಪನ್ನವು ಸಾರ್ವಕಾಲಿಕ ಮತ್ತು ಯಾವುದೂ ವ್ಯರ್ಥವಲ್ಲ. ಇವುಗಳನ್ನು ದೇವರ ಹೆಸರಿನಲ್ಲಿ ಕಾಯುತ್ತಾ ಅವುಗಳ ಉತ್ಪನ್ನಗಳಿಂದ ಜೀವನ ನಿರ್ವಹಿಸುತ್ತಿದ್ದರು. ಕ್ರಮೇಣ ದನಕರುಗಳ ಪ್ರಮಾಣ ಇಳಿಮುಖ ಅಥವಾ ರೋಗರುಜಿನಗಳ ಕಾಟದಿಂದಾಗಿ ಪಶುಸಂಪತ್ತು ಕರಗತೊಡಗಿತು. ಇದಕ್ಕೆ ಪರ್ಯಾಯವೆಂಬಂತೆ ಕಡಿಮೆ ಮೇವಿನ ಮತ್ತು ಹೆಚ್ಚು ಆರ್ಥಿಕತೆ ಹಾಗೂ ಆಹಾರಕ್ಕೂ ನೆರವಾಗಬಲ್ಲ ಕುರಿಸಾಕಾಣಿಕೆ ಅಸ್ತಿತ್ವಕ್ಕೆ ಬಂದಿತು. ಇದು ಇಂದಿಗೂ ಲಾಭದಾಯಕ ವೃತ್ತಿಯಾಗಿದೆ. ಕುರಿ ತಳಿಯ ಸಮೃದ್ಧಿಯಿಂದ ಉಣ್ಣೆ, ಗೊಬ್ಬರ, ಮಾಂಸದ ಬೇಡಿಕೆ ಅಧಿಕವಾಗಿದ್ದು ಕುರಿ ಸಾಕಾಣಿಕೆ ಹೆಚ್ಚು ಲಾಭಯುತ ವೃತ್ತಿಯಾಗಿದೆ. ಕಾಡುಗೊಲ್ಲ ಸಮುದಾಯದಲ್ಲಿ ತವರುಮನೆಯ

ಕಡೆಯವರು ಗಂಡನ ಮನೆ ಸೇರಿದ ಸ್ತ್ರೀಗೆ  ಬಳುವೆ ಬಿಡುವ ಪರಿಪಾಟವು ಇಂದಿಗೂ ಜೀವಂತವಾಗಿದೆ. ಈ ಹಸು ಗಂಡನ ಮನೆಗೆ ಆರ್ಥಿಕವಾಗಿ ಸಂಮೃದ್ಧಿ ಸಿರಿತನ ತರಲೆಂದು ಕಳುಹಿಸಲಾಗುತ್ತಿತ್ತು. ಈ ಕಾರಣಕ್ಕೆ ಹಸುವನ್ನು ಕಾಮಧೇನು ಎಂದು ಕರೆಯಲಾಗುತ್ತದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ವಾಸವಿರುವ ಕಾಡುಗೊಲ್ಲರ ಪ್ರತಿ ತಾಲ್ಲೂಕಿನ ಪಶುಸಂಪತ್ತನ್ನು ಸಮೀಕ್ಷೆಗೆ ಒಳಪಡಿಸಿದಾಗ ಚಳ್ಳಕೆರೆ ತಾಲ್ಲೂಕಿನ ೨೯೫  ಕುಟುಂಬಗಳಲ್ಲಿ ೪೬ ಎತ್ತುಗಳಿವೆ ೭೨ ಆಕಳುಗಳಿವೆ. ಹಾಗೆಯೇ ಎಮ್ಮೆಗಳು ೫೮, ಕುರಿ ೫೫೦೭, ಮೇಕೆ ೪೩೦ ಹಾಗೂ ಕೋಳಿ ೬ ಮಾತ್ರ ಇರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಚಳ್ಳಕೆರೆ ತಾಲ್ಲೂಕಿನ ಸಮೀಕ್ಷೆಯನ್ನು ಗಮನಿಸಿದಾಗ ಎತ್ತುಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿರುವುದು ತಿಳಿದು ಬಂದಿದೆ. ಇತ್ತೀಚೆಗೆ ಕಾಡುಗೊಲ್ಲರ ಹಾಲಿನ ಅನುಕೂಲಕ್ಕಾಗಿ ಎಮ್ಮೆಗಳ ಮೊರೆ ಹೋಗಿರುವುದು ತಿಳಿದುಬಂದಿದೆ. ಹಸುಗಳಿಗಿಂತ ಎಮ್ಮೆಗಳಿಂದಲೇ ಹೆಚ್ಚು ಲಾಭವಿರುವುದರಿಂದ ಎಮ್ಮೆ ಸಾಕುವುದನ್ನು ಕಾಣಬಹುದಾಗಿದೆ. ಒಂದು ಕಾಲದಲ್ಲಿ ಎಮ್ಮೆಗಳ ಬಗ್ಗೆ ಕೀಳರಿಮೆಯನ್ನು ಹೊಂದಿದ್ದ ಕಾಡುಗೊಲ್ಲ ಸಮುದಾಯ ಆಕಳುಗಳಿಂದ ಉತ್ಪಾದನೆ ಕಡಿಮೆಯಾದ ಸಂದರ್ಭದಲ್ಲಿ ಎಮ್ಮೆಗಳನ್ನು ಅವಲಂಬಿಸಿದ್ದಾರೆ. ೫೫೦೭ ಕುರಿಗಳನ್ನು ಸಾಕಿಕೊಂಡಿದ್ದಾರೆ. ಒಂದು ಕಾಲದಲ್ಲಿ ಕಾಡುಗೊಲ್ಲರ ಮನೆಯ ಮುಂದೆ ಕುರಿಗಳಿಗಿಂತ ದನಗಳು ಹೆಚ್ಚು ಇರುತ್ತಿದ್ದವು ಆದರೆ ಇತ್ತೀಚೆಗೆ ಪ್ರತಿಯೊಂದು ಮನೆಯಲ್ಲಿಯೂ ಹಸುಗಳ ಬದಲಾಗಿ ಕುರಿಗಳಿರುವುದನ್ನು ಈ ಸಮೀಕ್ಷೆಯಿಂದ ತಿಳಿದುಬರುತ್ತದೆ. ೪೩೦ ಮೇಕೆ ಸಾಕಿದ್ದಾರೆ. ೬ ಕೋಳಿ ಸಾಕಿದ್ದಾರೆ. ಕಾಡುಗೊಲ್ಲರಿಗೆ ಕೋಳಿ ನಿಷೇಧ ಆದರೂ ಕೆಲವು ಕಡೆ ಸಂಪ್ರದಾಯಗಳನ್ನು ಪಕ್ಕಕ್ಕೆ ತಳ್ಳಿ ಕೋಳಿ ಸಾಕಿರುವುದು ಸಮೀಕ್ಷೆಯಿಂದ ತಿಳಿದು ಬಂದಿದೆ.

ಚಿತ್ರದುರ್ಗ ತಾಲ್ಲೂಕಿನಲ್ಲಿ ಸಮೀಕ್ಷೆಗಾಗಿ ೧೯೯ ಕುಟುಂಬಗಳನ್ನು ಆಯ್ಕೆ ಮಾಡಿಕೊಂಡಾಗ ೮೦ ಎತ್ತುಗಳಿರುವುದು ಕಂಡುಬಂದಿದೆ. ಅದೇ ರೀತಿ ೧೩೩ ಆಕಳುಗಳನ್ನು ಹೊಂದಿದ್ದಾರೆ. ಚಳ್ಳಕೆರೆ ತಾಲ್ಲೂಕಿಗೆ ಹೋಲಿಕೆ ಮಾಡಿದರೆ ಚಿತ್ರದುರ್ಗ ಹೆಚ್ಚಿನ ಪ್ರಮಾಣದ ಎತ್ತು ಮತ್ತು ಆಕಳುಗಳನ್ನು ಹೊಂದಿರುವುದು ತಿಳಿದುಬಂದಿದೆ. ೧೯೯ ಕುಟುಂಬಗಳಲ್ಲಿ ೮೯ ಎಮ್ಮೆಗಳನ್ನು ಸಾಕಿರುವುದು ೩೦೮೫ ಕುರಿಗಳನ್ನು ಸಾಕಿರುವುದು ಹಾಗೂ ೪೫೦ ಮೇಕೆಗಳನ್ನು ಸಾಕಿಕೊಂಡಿರುವುದು ೧೫೦ ಕೋಳಿಗಳನ್ನು ಸಾಕಿರುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೮೭ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ೮೭ ಕುಟುಂಬಗಳಲ್ಲಿ ೩೩ ಎತ್ತುಗಳಿರುವುದು, ೭೪ ಆಕಳುಗಳು, ೧೨೭ ಎಮ್ಮೆಗಳನ್ನು ಹೊಂದಿರುವುದು ಸಮೀಕ್ಷೆಯಿಂದ ತಿಳಿದುಬಂದಿರುವ ಮಾಹಿತಿ, ಅಂದರೆ ಎತ್ತು ಆಕಳುಗಳಿಗಿಂತ ಎಮ್ಮೆಯನ್ನು ಬಹುಪಾಲು

ಕಾಡುಗೊಲ್ಲರು ಅವಲಂಬಿಸಿರುವುದು ಕಂಡುಬಂದಿದೆ. ಅದೇ ರೀತಿ ೮೨ ಕುಟುಂಬಗಳಲ್ಲಿ ಕಾಡುಗೊಲ್ಲರು ಹೊಂದಿರುವ ಕುರಿಗಳ ಸಂಖ್ಯೆ ಕೇವಲ ೧೬೦ ಮಾತ್ರ ಅವರು ೬೦ ಮೇಕೆಗಳನ್ನು ಹೊಂದಿದ್ದಾರೆ. ಕೋಳಿಯಂತು ಒಂದು ಕೂಡ ಸಾಕದಿರುವುದು ಕಂಡುಬಂದಿದೆ ಕೋಳಿ ತಿನ್ನುವುದನ್ನು ಸಂಪೂರ್ಣವಾಗಿ ವಿರೋಧಿಸಿರುವುದು (ಹಟ್ಟಿಯಲ್ಲಿ ಸಾಕುವುದಿಲ್ಲ, ಪೌಲ್ಟ್ರಿಫಾರಂ ಮಾಡುತ್ತಾರೆ)ಕಂಡುಬಂದಿದೆ.

ಹಿರಿಯೂರು ತಾಲ್ಲೂಕನ್ನು ಸಮೀಕ್ಷೆಗೆ ಒಳಪಡಿಸಿದಾಗ ೪೨೮ ಕುಟುಂಬಗಳಲ್ಲಿ ೪೩೭ ಎತ್ತುಗಳನ್ನು ಹೊಂದಿರುವುದು, ೫೬೧ ಆಕಳುಗಳನ್ನು ಹೊಂದಿರುವುದು, ೪೫೭ ಎಮ್ಮೆಗಳು, ೩೨೦೬ ಕುರಿಗಳು, ೫೪೯ ಮೇಕೆಗಳು ಹಾಗೂ ೭೨೩ ಕೋಳಿಗಳನ್ನು ಕಾಡುಗೊಲ್ಲರು ಸಾಕಿಕೊಂಡಿರುವುದು ಸಮೀಕ್ಷೆಯಿಂದ ಅರಿತುಕೊಂಡ ಮಾಹಿತಿಯಾಗಿದೆ. ಇಲ್ಲಿ ಗಮನಿಸಬಹುದಾದ ವಿಷಯವೆಂದರೆ ಪಶುಪಾಲನೆಯು ಇನ್ನೂ ಕೂಡ ಜೀವಂತವಾಗಿರುವುದ್ನು ಗುರುತಿಸಬಹುದು. ಇಲ್ಲಿರುವ ಕಾಡುಗೊಲ್ಲರು ಕೋಳಿಗಿಂತ ಹೆಚ್ಚಾಗಿ ಮೇಕೆಗಳನ್ನು ಸಾಕಿಕೊಂಡಿದ್ದಾರೆ. ಎಲ್ಲವೂ ಕುಟುಂಬಕ್ಕೆ ಒಂದರಂತೆ ಕಂಡುಬರುತ್ತದೆ. ಎಮ್ಮೆಗಳ ಸಂಖ್ಯೆಯು ತುಂಬಾ ಹೆಚ್ಚಾಗಿದೆ. ಇದಕ್ಕೆ ಕಾರಣವೆಂದರೆ ಹಿರಿಯೂರು ತಾಲ್ಲೂಕಿನಲ್ಲಿ ವಾಣಿವಿಲಾಸ ಸಾಗರವಿರುವುದರಿಂದ ಕೆಲವು ಭಾಗಗಳಲ್ಲಿ ನೀರಾವರಿಯ ಸೌಲಭ್ಯವಿದೆ. ಆದುದರಿಂದ ತೋಟ ತುಡಿಕೆಗಳು ಜಾಸ್ತಿ ಇರುವ ಕಾರಣದಿಂದ  ಮೇಕೆಗಳನ್ನು ಹೆಚ್ಚಾಗಿ ಸಾಕಿದ್ದಾರೆ. ಅಷ್ಟೇ ಅಲ್ಲ, ಮೇಕೆಯು ಒಂದು ವರ್ಷದಲ್ಲಿ ಎರಡು ಬಾರಿ ಮರಿ ಹಾಕುವುದರಿಂದ ಜೊತೆಗೆ ಮೇಕೆಯು ೨ ರಿಂದ ೩ ಮರಿಗಳನ್ನು ಹಾಕುವುದರಿಂದ ಆದಾಯ ಜಾಸ್ತಿ ಇರುತ್ತದೆ. ಮೇಕೆ ಸಾಕಿದರೆ ಖರ್ಚಿಗಿಂತ ಆದಾಯ ಹೆಚ್ಚು. ಹಾಗಾಗಿ ಮೇಕೆಗಳನ್ನು ಸಾಕುತ್ತಿದ್ದಾರೆ.

ಹೊಸದುರ್ಗ ತಾಲ್ಲೂಕಿನ ೧೫೮ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ೧೫೮ ಕುಟುಂಬಗಳಲ್ಲಿ ೨೯ ಎತ್ತುಗಳನ್ನು ಹೊಂದಿದ್ದರೆ, ೫೭ ಆಕಳುಗಳಿವೆ, ೪೦ ಎಮ್ಮೆಗಳಿರುವುದು ಕಂಡುಬಂದಿದೆ. ೨೧೧೬ ಕುರಿಗಳಿವೆ, ೧೦೩ ಮೇಕೆಗಳಿವೆ ಹಾಗೂ ೩೦ ಕೋಳಿಗಳಿವೆ. ಅಂದರೆ ಹೊಸದುರ್ಗ ತಾಲ್ಲೂಕು ಸಂಪೂರ್ಣವಾಗಿ ಪಶುಪಾಲನೆಯಿಂದ ಕೃಷಿಯ ಕಡೆಗೆ ಮುಖ ಮಾಡಿರುವುದು ಕಂಡುಬರುತ್ತದೆ. ಎತ್ತುಗಳ ಬದಲಾಗಿ ಯಂತ್ರಗಳ ಬಳಕೆಯನ್ನು ಕೃಷಿಯಲ್ಲಿ ತೊಡಗಿಸಿಕೊಂಡಿರುವ ಕಾರಣ ಕ್ರಮೇಣ ಎತ್ತುಗಳ ಸಂಖ್ಯೆ ಕಡಿಮೆಯಾಗಿದೆ. ನಲವತ್ತೇಳು ಹಸುಗಳನ್ನು ಹಾಲಿಗಾಗಿ ಮಾತ್ರ ಸಾಕಿಕೊಂಡಿದ್ದಾರೆ. ಕೇವಲ ನಲವತ್ತು ಎಮ್ಮೆಗಳನ್ನು ಹೊಂದಿದ್ದಾರೆ. ೧೫೮ ಕುಟುಂಬಗಳಲ್ಲಿ ಕೇವಲ ೩೦ ಮಾತ್ರ ಕೋಳಿಗಳನ್ನು ಹೊಂದಿದ್ದಾರೆ.

ಹೊಳಲ್ಕೆರೆ ತಾಲ್ಲೂಕಿನಲ್ಲಿ ವಾಸವಾಗಿರುವ ಕಾಡುಗೊಲ್ಲರ ೨೯ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಅದರಲ್ಲಿ ಎತ್ತುಗಳು ೯೦ ಇರುವುದು ತಿಳಿದುಬಂದಿದೆ. ಆಮೇಲೆ ೧೭೧ ಆಕಳುಗಳನ್ನು ಹೊಂದಿದ್ದಾರೆ. ಅಂದರೆ ಇತ್ತೀಚೆಗೆ ಕಾಡುಗೊಲ್ಲರು ಮೂಲ ತಳಿಗಳನ್ನು ಕಳೆದುಕೊಂಡು ಸರ್ಕಾರಿ

ಅಂದರೆ ಸಿಂದಿ ಆಕಳುಗಳನ್ನು ಸಾಕುತ್ತಿರುವುದು ಸಮೀಕ್ಷೆಯಿಂದ ತಿಳಿದುಬಂದಿರುದೆ. ೧೪೭ ಎಮ್ಮೆಗಳನ್ನು ಹಾಗೂ ೧೪೦೭ ಕುರಿಗಳನ್ನು, ೧೮೮೧ ಮೇಕೆಗಳನ್ನು ಮತ್ತು ೭೩ ಕೋಳಿಗಳನ್ನು ಹೊಂದಿದ್ದಾರೆ. ಎಮ್ಮೆಗಳನ್ನು ಸಹ ಹೆಚ್ಚಿನ ಪ್ರಮಾಣದಲ್ಲಿ ಸಾಕುತ್ತಿದ್ದಾರೆ. ಕುರಿಗಳ ಸಂಖ್ಯೆ ಕಡಿಮೆಯಾಗಿ ಮೇಕೆಗಳ ಸಂಖ್ಯೆ ಗಣನೀಯವಾಗಿ ಹೆಚ್ಚಳವಾಗಿದೆ. ಅದೇ ರೀತಿ ಕೋಳಿ ಸಾಕಾಣಿಕೆ ಸಹ ಹೆಚ್ಚಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಚಿತ್ರದುರ್ಗ ಜಿಲ್ಲೆಯನ್ನು ಸಮೀಕ್ಷೆಗೆ ಒಳಪಡಿಸಿದಾಗ ಒಟ್ಟು ೧೩೯೧ ಕುಟುಂಬಗಳು ಸಮೀಕ್ಷೆಗೆ ಒಳಪಟ್ಟಿವೆ. ಅದರಲ್ಲಿ ೭೧೫ ಎತ್ತುಗಳ ಸಂಖ್ಯೆ ಕಂಡುಬಂದರೆ ೧೦೬೮ ಆಕಳುಗಳ ಸಂಖ್ಯೆ ತಿಳಿದುಬಂದಿದೆ. ಅಂದರೆ ಇದು ಕಾಡುಗೊಲ್ಲರು ಪಶುಪಾಲನೆಯಿಂದ ದೂರ ಸರಿಯುತ್ತಿರುವುದನ್ನು ಗಮನಿಸಬಹುದು. ೯೧೮ ಎಮ್ಮೆಗಳನ್ನು ಹಾಲಿನ ಅನುಕೂಲಕ್ಕಾಗಿ ಸಾಕಿಕೊಂಡಿದ್ದಾರೆ. ೧೫೪೮೧ ಕುರಿಗಳಿರುವುದು ತಿಳಿದುಬಂದಿದೆ. ೮೩೨೩ ಮೇಕೆಗಳನ್ನು ಸಾಕಿಕೊಂಡಿದ್ದಾರೆ. ೯೮೨ ಕೋಳಿಗಳಿವೆ. ಕೋಳಿಗಳನ್ನು ಕೆಲವರು ಮಾತ್ರ ಸಾಕುತ್ತಿರುವುದನ್ನು ಕಾಣಬಹುದು. ಕಾಡುಗೊಲ್ಲರಲ್ಲಿ ಕೋಳಿಗಳನ್ನು ಎಲ್ಲರೂ ಸಾಕುವುದಿಲ್ಲ. ಕಾಡುಗೊಲ್ಲರಿಗೆ ಪಶುಗಳೇ ಸಂಪತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಪಶುಸಂಗೋಪನೆ ಕಡಿಮೆಯಾಗಿದೆ.

### ೪.೯. ಕಾಡುಗೊಲ್ಲರ ಉದ್ಯೋಗ

ಕಾಡುಗೊಲ್ಲರು ಮೂಲತಃ ಪಶುಪಾಲಕರಾದರೂ ಪಶುಪಾಲಕರಾಗಿಯೇ ಉಳಿದಿಲ್ಲ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯವಾಗಿದೆ. ಕಾಡುಗೊಲ್ಲರು ಇಂದು ಹಲವಾರು ಉದ್ಯೋಗಗಳನ್ನು ಮಾಡುತ್ತಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಯಾವಾಗ ಮೂಲಕಸುಬು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತದೋ ಆನಂತರ ಮನುಷ್ಯ ಹೊಟ್ಟೆಪಾಡಿಗಾಗಿ ಅನೇಕ ಕೆಲಸಗಳನ್ನು ಆಶ್ರಯಿಸಬೇಕಾಗುತ್ತದೆ. ಯಾಕೆಂದರೆ ಇದು ಯಂತ್ರಜ್ಞಾನ, ತಂತ್ರಜ್ಞಾನ ಹಾಗೂ ಜಾಗತೀಕರಣದ ಕರ್ನಾಟಕ, ಹಾಗಾಗಿ ಕಾಲಕ್ಕೆ ಅನುಗುಣವಾಗಿ ಬದಲಾಗುವುದು ಪ್ರತಿಯೊಬ್ಬ ಮಾನವನ ಕರ್ತವ್ಯ. ಕಾರಣದಿಂದಾಗಿ ಕಾಡುಗೊಲ್ಲರು ಸಂಪ್ರದಾಯಶರಣರಾಗಿದ್ದರೂ ಸಂಪ್ರದಾಯಗಳನ್ನು ತೊರೆದು ಹಲವಾರು ಕೆಲಸಗಳಲ್ಲಿ ತೊಡಗಿಕೊಂಡಿರುವುದನ್ನು ಗುರುತಿಸಬಹುದು. ಪಶುಪಾಲನೆಯ ಜೊತೆ ಕೃಷಿ ಅಥವಾ ಕೃಷಿ ಕಾರ್ಖಾನೆಗಳಲ್ಲಿ, ಸ್ವಯಂ ಸೇವಾ ಸಂಸ್ಥೆಗಳಲ್ಲಿ, ಜಾನಪದ ಕಲಾವಿದರಾಗಿ, ಖಾಸಗಿ ಸಂಸ್ಥೆಗಳಲ್ಲಿ ತೊಡಗಿರುವುದನ್ನು ಗುರುತಿಸಬಹುದು.

## ಚಿತ್ರದುರ್ಗ ಜಿಲ್ಲೆಯಲ್ಲಿ ಸಮೀಕ್ಷೆಗೆ ಒಳಪಡಿಸಿದಾಗ ಕಾಡುಗೊಲ್ಲರು ಅವಲಂಬಿಸಿರುವ ಉದ್ಯೋಗದ ಸಮೀಕ್ಷೆ (ಲಿಂಗವಾರು)

ಕೋಷ್ಟಕ ೪.೪.

| ಕ್ರ.ಸಂ. | ತಾಲ್ಲೂಕುಗಳು | ಕುಟುಂಬಗಳು | ಕಾಯಕರ್ಹರು | | | ಕಾಯಕಸ್ಥರು | | | ನಿರುದ್ಯೋಗಿಗಳು | | |
|---|---|---|---|---|---|---|---|---|---|---|---|
| | | | ಗಂ. | ಹೆ. | ಒಟ್ಟು | ಗಂ. | ಹೆ. | ಒಟ್ಟು | ಗಂ. | ಹೆ. | ಒಟ್ಟು |
| ೧. | ಚಳ್ಳಕೆರೆ | ೨೯೫ | ೪೩೪ | ೩೯೧ | ೮೨೫ | ೩೭೪ | ೨೮೦ | ೬೫೪ | ೬೦ | ೧೧೧ | ೧೭೧ |
| ೨. | ಚಿತ್ರದುರ್ಗ | ೧೯೯ | ೨೭೧ | ೨೫೨ | ೫೨೩ | ೨೫೬ | ೨೩೩ | ೪೯೦ | ೧೫ | ೧೯ | ೩೩ |
| ೩. | ಮೊಳಕಾಲ್ಮೂರು | ೮೨ | ೧೧೯ | ೧೧೧ | ೨೩೦ | ೯೬ | ೭೨ | ೧೬೮ | ೨೩ | ೩೯ | ೬೨ |
| ೪. | ಹಿರಿಯೂರು | ೪೨೮ | ೭೧೮ | ೬೧೯ | ೧೩೩೭ | ೪೦೯ | ೭೧ | ೪೮೦ | ೩೦೯ | ೫೪೯ | ೮೫೭ |
| ೫. | ಹೊಸದುರ್ಗ | ೧೫೮ | ೧೯೮ | ೧೯೩ | ೩೯೧ | ೨೪೦ | ೨೧೪ | ೪೫೫ | ೪೨ | ೨೧ | ೬೪ |
| ೬. | ಹೊಳಲ್ಕೆರೆ | ೨೨೯ | ೩೬೩ | ೩೧೮ | ೬೮೧ | ೨೨೯ | ೩೨ | ೨೬೧ | ೧೩೪ | ೨೮೬ | ೪೨೦ |
| | ಒಟ್ಟು | ೧೩೯೧ | ೨೧೦೩ | ೧೮೮೪ | ೩೯೮೭ | ೧೬೦೪ | ೯೦೨ | ೨೫೦೮ | ೪೯೯ | ೯೮೨ | ೧೪೭೯ |

ಈ ಮೇಲಿನ ನನ್ನ ಸಮೀಕ್ಷೆಯ ಪ್ರಕಾರ ಚಳ್ಳಕೆರೆ ತಾಲ್ಲೂಕಿನಲ್ಲಿ ೨೯೫ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಅದರಲ್ಲಿ ಕೆಲಸ ಮಾಡಲು ಅರ್ಹವಿರುವವರ ಒಟ್ಟು ಸಂಖ್ಯೆ ೮೨೫ ಜನರು ಅದರಲ್ಲಿ ಗಂಡುಮಕ್ಕಳ ಸಂಖ್ಯೆ ೪೩೪, ಹೆಣ್ಣುಮಕ್ಕಳ ಸಂಖ್ಯೆ ೩೯೧ ಎಂದು ತಿಳಿದುಬಂದಿದೆ. ಹೆಣ್ಣುಮಕ್ಕಳು ಸಹ ಪುರುಷರಿಗೆ ಸರಿಸಮನಾಗಿ ದುಡಿಯುವ ಪ್ರವೃತ್ತಿ ಉಳ್ಳವರು. ಅದೇ ರೀತಿ ಈಗಾಗಲೇ ಕೆಲಸದಲ್ಲಿ ತೊಡಗಿರುವವರ ಒಟ್ಟು ಸಂಖ್ಯೆ ೬೫೪, ಅದರಲ್ಲಿ ಗಂಡು ೩೭೪ ಹೆಣ್ಣು ೨೮೦ ಎಂದು ಸಮೀಕ್ಷೆಯಿಂದ ತಿಳಿದುಬಂದಿದೆ. ಉದ್ಯೋಗಸ್ಥರಂತೆ ಕಾಡುಗೊಲ್ಲರಲ್ಲಿ ಇತ್ತೀಚೆಗೆ ನಿರುದ್ಯೋಗಿಗಳ ಪ್ರಮಾಣ ಸಹ ದಿನದಿಂದ ದಿನಕ್ಕೆ ಏರುತ್ತಲಿದೆ. ಚಳ್ಳಕೆರೆ ತಾಲ್ಲೂಕಿನಲ್ಲಿ ೨೯೫ ಕುಟುಂಬಗಳಲ್ಲಿ ಒಟ್ಟು ೧೭೧ ನಿರುದ್ಯೋಗಿಗಳಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಅದರಲ್ಲಿ ಪುರುಷರ ಸಂಖ್ಯೆ ೬೦ ಎಂದು ಹೆಂಗಸರ ಸಂಖ್ಯೆ ೧೧೧ ಎಂದು ತಿಳಿದುಬಂದಿದೆ. ಅಂದರೆ ಪುರುಷರಿಗಿಂತ ಮಹಿಳೆಯರೇ ಹೆಚ್ಚು ನಿರುದ್ಯೋಗಿಗಳಾಗಿದ್ದಾರೆ.

೨. ಚಿತ್ರದುರ್ಗ ತಾಲ್ಲೂಕಿನಲ್ಲಿ ಸಮೀಕ್ಷೆಯನ್ನು ಕೈಗೊಂಡಾಗ ೧೯೯ ಕುಟುಂಬಗಳಲ್ಲಿ ಕೆಲಸ ಮಾಡಲು ಸಮರ್ಥರಾದವರ ಸಂಖ್ಯೆ ಒಟ್ಟು ೫೩೨. ಅದರಲ್ಲಿ ೨೭೧ ಜನ ಗಂಡಸರು ೨೫೨ ಜನ ಹೆಂಗಸರಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಅದೇ ರೀತಿ ಉದ್ಯೋಗ ಮಾಡುತ್ತಿರುವವರ ಸಂಖ್ಯೆ ಒಟ್ಟು ೪೯೦ ಜನರಲ್ಲಿ ೨೫೬ ಜನ ಗಂಡಸರು, ೨೩೩ ಜನ ಹೆಂಗಸರಿರುವುದು ತಿಳಿದು ಬಂದಿದೆ. ಚಿತ್ರದುರ್ಗದಲ್ಲಿ ೧೯ ಜನ ಮಹಿಳೆಯರಿರುವುದು ತಿಳಿದುಬಂದಿದೆ. ಚಳ್ಳಕೆರೆ ತಾಲ್ಲೂಕಿಗೆ ಹೋಲಿಸಿ ನೋಡಿದರೆ ಚಿತ್ರದುರ್ಗ ತಾಲ್ಲೂಕಿನಲ್ಲಿ ನಿರುದ್ಯೋಗದ ಪ್ರಮಾಣ ಕಡಿಮೆ ಇರುವುದು ಸಮೀಕ್ಷೆಯಿಂದ ತಿಳಿದುಬಂದಿದೆ.

೩. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೮೨ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಕಾಯಕರ್ಹರ ಸಂಖ್ಯೆ ಒಟ್ಟು ೨೩೦ ಜನರು. ಅದರಲ್ಲಿ ಗಂಡುಗಳ ಸಂಖ್ಯೆ ೧೧೯, ಹೆಣ್ಣುಗಳ ಸಂಖ್ಯೆ ೧೧೧, ಅದೇ ರೀತಿ ಕಾಯಕಸ್ಥರ ಒಟ್ಟು ಸಂಖ್ಯೆ ೧೬೮. ಅದರಲ್ಲಿ ಗಂಡು ೯೬ ಜನ, ಹೆಣ್ಣು ೭೨ ಜನರು. ನಿರುದ್ಯೋಗಿಗಳ ಒಟ್ಟು ಸಂಖ್ಯೆ ೬೨. ಅದರಲ್ಲಿ ಗಂಡಸರು ೨೩ ಜನರು. ಹೆಂಗಸರು ೩೯ ಜನರು ಚಿತ್ರದುರ್ಗ ತಾಲ್ಲೂಕಿಗೆ ಹೋಲಿಕೆ ಮಾಡಿಕೊಂಡರೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಾಗಿರುವುದು ತಿಳಿದುಬಂದಿದೆ.

೪. ಹಿರಿಯೂರು ತಾಲ್ಲೂಕು ಸಮೀಕ್ಷೆಗೆ ಒಳಪಡಿಸಿದಾಗ ಅದರಲ್ಲಿ ೪೨೮ ಕುಟುಂಬಗಳಲ್ಲಿ ಕೆಲಸ ಮಾಡಲು ತಯಾರಿರುವವರು ಒಟ್ಟು ೧೩೩೭ ಜನರು. ಅದರಲ್ಲಿ ಗಂಡಸರು ೭೧೮ ಜನರು. ಹೆಂಗಸರು, ೬೧೯ ಜನರು ಕಾಯಕ ನಿರತವಾಗಿರುವವರು. ಗಂಡಸರು ೪೧೯ ಜನರು, ೭೧ ಹೆಂಗಸರು ಒಟ್ಟು ೪೮೦ ಜನರು ಉದ್ಯೋಗಸ್ಥರಿರುವುದು ಸಮೀಕ್ಷೆಯ್ತಿಂದ ತಿಳಿದುಬಂದಿದೆ. ಹಿರಿಯೂರು ತಾಲ್ಲೂಕಿನಲ್ಲಿ ನಿರುದ್ಯೋಗಿಗಳ ಸಂಖ್ಯೆ ೮೫೭ ಜಸರು. ಅದರಲ್ಲಿ ಪುರುಷರು ೩೧೯ ಜನರು.

ಹೆಂಗಸರು. ಅಂದರೆ ಹಿರಿಯೂರಿನಲ್ಲಿ ನಿರುದ್ಯೋಗಿಗಳ ಪ್ರಮಾಣ ಅತಿ ಹೆಚ್ಚು ಇರುವುದು ತಿಳಿದುಬಂದಿದೆ.

೫. ಹೊಸದುರ್ಗ ತಾಲ್ಲೂಕನ್ನು ಸಮೀಕ್ಷೆಗೆ ಒಳಪಡಿಸಿದಾಗ ೧೫೮ ಕುಟುಂಬಗಳಲ್ಲಿ ೧೯೮ ಜನ ಗಂಡಸರು ಕೆಲಸ ಮಾಡಲು ಅರ್ಹರಿದ್ದಾರೆ. ಅದರಂತೆ ೧೯೩ ಜನ ಮಹಿಳೆಯರು ಕೆಲಸ ಮಾಡಲು ಅರ್ಹರಿದ್ದಾರೆ. ಒಟ್ಟು ೩೯೧ ಜನರು ಕೆಲಸ ಮಾಡಲು ಯೋಗ್ಯರಿದ್ದಾರೆ. ಉದ್ಯೋಗಸ್ಥರ ಒಟ್ಟು ಸಂಖ್ಯೆ ೪೫೫. ಅದರಲ್ಲಿ ಪುರುಷರು ೨೪೦ ಜನರು, ಮಹಿಳೆಯರು ೨೧೪ ಜನರು. ನಿರುದ್ಯೋಗಿಗಳ ಸಂಖ್ಯೆ ಒಟ್ಟು ೬೪ ಜನರು. ೪೨ ಜನ ಗಂಡಸರು, ೨೧ ಜನ ಹೆಂಗಸರು.

೬. ಹೊಳಲ್ಕೆರೆ ತಾಲ್ಲೂಕನ್ನು ಸಮೀಕ್ಷೆಗೆ ಒಳಪಡಿಸಿದಾಗ ೨೨೯ ಕುಟುಂಬಗಳಲ್ಲಿ ೩೬೩ ಜನ ಗಂಡಸರು ಕಾಯಕ ಮಾಡಲು ತಯಾರಿದ್ದಾರೆ. ೩೧೮ ಜನ ಮಹಿಳೆಯರು ಕಾಯಕ ಮಾಡಲು ತಯಾರಿದ್ದಾರೆ. ಕಾಯಕ ನಿರತರಾದವರ ಸಂಖ್ಯೆ ಒಟ್ಟು ೨೬೧ ಜನರು. ಅದರಲ್ಲಿ ೨೨೯ ಜನರು ಪುರುಷರು, ೩೨ ಜನರು ಸ್ತ್ರೀಯರು, ಅದೇ ರೀತಿ ನಿರುದ್ಯೋಗಿಗಳ ಒಟ್ಟು ಜನಸಂಖ್ಯೆ ೪೨೦ ಗಂಡಸರ ಸಂಖ್ಯೆ ೧೩೪, ಮಹಿಳೆಯರ ಸಂಖ್ಯೆ ೨೮೬. ಅಂದರೆ ಪ್ರತಿಯೊಂದು ತಾಲ್ಲೂಕಿನಲ್ಲಿ ಸಂಖ್ಯೆ ಹೆಚ್ಚು ಇರುವುದು ತಿಳಿದು ಬಂದಿದೆ. ಕಾಡುಗೊಲ್ಲರು ವಂಶಪಾರಂಪರ್ಯವಾಗಿ ಅವಲಂಬಿಸಿಕೊಂಡು ಬಂದಂತಹ ವೃತ್ತಿಗಳೆಂದರೆ ಪಶುಪಾಲನೆ. ಮೂಲಭೂತ ಅವಶ್ಯಕತೆಗಳಲ್ಲಿ ಉದ್ಯೋಗವೂ ಸಹ ಒಂದಾಗಿದ್ದು, ಇಲ್ಲಿ ಕಾಡುಗೊಲ್ಲರು ಅನೇಕ ವೃತ್ತಿ ಸಮಸ್ಯೆಗಳನ್ನು ಎದುರಿಸುತ್ತಿದ್ದು ಇತ್ತೀಚೆಗೆ ಹಲವು ವಿದ್ಯಾವಂತ ನಿರುದ್ಯೋಗಿಗಳು ತಮ್ಮ ಈ ಮೂಲವೃತ್ತಿಗಳನ್ನು ಅನುಸರಿಸಲು ಆಗದೇ ಇತ್ತ ಅವರಿಗೆ ಸರಿಹೊಂದುವಂತಹ ವೃತ್ತಿಗಳು ಸಿಗದೇ ನಿರುದ್ಯೋಗಿಗಳಾಗಿ ಅತಂತ್ರ ಸ್ಥಿತಿಯಲ್ಲಿ ಇರುವುದನ್ನು ನೋಡುತ್ತೇವೆ.

ಕಾಡುಗೊಲ್ಲರ ಉದ್ಯೋಗಕ್ಕೆ ಸಂಬಂಧಿಸಿದಂತೆ ಇವರಲ್ಲಿ ಹೆಚ್ಚು ಮರೆಮಾಚು ನಿರುದ್ಯೋಗವು ಹೆಚ್ಚು ಕಂಡುಬರುತ್ತದೆ. ಅಂದರೆ ಛಿದ್ರಗೊಂಡ ಭೂಹಿಡುವಳಿಗಳಲ್ಲಿ ಹೆಚ್ಚು. ಅವಿಭಕ್ತ ಕುಟುಂಬಗಳನ್ನು ಹೊಂದಿರುವ ಕಾಡುಗೊಲ್ಲ ಸಮುದಾಯದ ಕುಟುಂಬ ಸದಸ್ಯರು ಮೇಲ್ನೋಟಕ್ಕೆ ಕೃಷಿಯಲ್ಲಿ ತೊಡಗಿದ್ದರೂ ಅಷ್ಟೂ ಸದಸ್ಯರಿಗೆ ಕೃಷಿ ಉದ್ಯೋಗವಿರುವುದಿಲ್ಲ. ಅಂದರೆ ಅಷ್ಟೂ ಜನಕ್ಕೆ ಕೃಷಿಯಲ್ಲಿ ಕೆಲಸವಿರುವುದಿಲ್ಲ. ಆದರೆ ಎಲ್ಲರೂ ಕೆಲಸ ನಿರ್ವಹಣೆಯಲ್ಲಿ ತೊಡಗಿರುತ್ತಾರೆ. ಇದೇ ರೀತಿಯಲ್ಲಿ ಋತುಮಾನ ನಿರುದ್ಯೋಗವು ಕಂಡುಬರುತ್ತದೆ. ಅಂದರೆ ವರ್ಷಪೂರ್ಣ ಕೆಲಸವಿಲ್ಲದೆ ಕೆಲವು ಋತುಗಳಲ್ಲಿ ಮಾತ್ರ ಕೆಲಸವಿದ್ದು, ಬೇರೆ ದಿನಗಳಲ್ಲಿ ನಿರುದ್ಯೋಗವಿರುತ್ತದೆ. ಇಂತಹ ಸಂದರ್ಭದಲ್ಲಿ ಇವರಿಗೆ ಯಾವುದೇ ಉದ್ಯೋಗವಿಲ್ಲದೆ ನಿರುದ್ಯೋಗವಿರುತ್ತದೆ. ಆರ್ಥಿಕವಾಗಿ ಸದೃಢರಲ್ಲದ ಯಾವ ಉಪಕಸುಬುಗಳಿಲ್ಲದೆ ಇವರಿಗೆ ಈ ಸಂದರ್ಭದಲ್ಲಿ ಜೀವನ ನಿರ್ವಹಣೆ ತುಂಬಾ ಕಷ್ಟದಾಯಕವಾಗಿರುತ್ತದೆ.

ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ಲಿಂಗವಾರು ಕಸುಬುಗಳ ಪ್ರಮಾಣ.

| ಕೋಷ್ಟಕ ೪.೫ | | | | |
|---|---|---|---|---|
| **ಕಸುಬುಗಳು** | **ಗಂಡು** | **ಹೆಣ್ಣು** | **ಒಟ್ಟು** | **ಶೇಕಡವಾರು** |
| ಕೃಷಿ | ೧೦೫೦ | ೪೨೫ | ೧೪೭೫ | ೫೮.೮೬% |
| ಕೃಷಿ ಕೂಲಿ | ೩೦೭ | ೩೩೦ | ೬೩೭ | ೨೫.೪೨% |
| ಪಶುಪಾಲನೆ | ೪೯ | ೩೧ | ೮೦ | ೩.೧೯೨ |
| ಕುರಿ ಕಾಯುವುದು | ೩೯ | ೪೬ | ೮೫ | ೩.೩೯೨ |
| ಸರ್ಕಾರಿ | ೩೬ | ೧೭ | ೫೩ | ೨.೧೧೫ |
| ಖಾಸಗಿ | ೩೮ | ೨೮ | ೬೬ | ೨.೬೩೪ |
| ಇತರೆ | ೮೫ | ೨೫ | ೧೧೨ | ೪.೪೯ |
| **ಒಟ್ಟು** | **೧೬೦೪** | **೯೦೨** | **೨೫೦೬** | |

**೧. ಕೃಷಿ:** ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ಲಿಂಗವಾರು ಕಸುಬುಗಳ ಪ್ರಮಾಣ ಗಮನಿಸಿದಾಗ ನಮಗೆ ತಿಳಿದುಬರುವ ಮಾಹಿತಿ ಎಂದರೆ ೧೦೫೦ ಜನ ಗಂಡಸರು ಕೃಷಿಯಲ್ಲಿ ತೊಡಗಿಕೊಂಡರೆ ೪೨೫ ಜನ ಸ್ತ್ರೀಯರು ಕೃಷಿಯಲ್ಲಿ ತೊಡಗಿಕೊಂಡಿದ್ದಾರೆ. ಸರಾಸರಿ ಶೇಕಡ ೫೮.೮೬ರಷ್ಟು ಮಾತ್ರ ಕೃಷಿಯಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಕೃಷಿ ಕೆಲಸದಲ್ಲಿ ಸ್ತ್ರೀಯರ ಪಾಲು ೧೦೦ಕ್ಕೆ ೪೫% ಮಾತ್ರ ತೊಡಗಿಕೊಂಡಿರುವುದನ್ನು ಗಮನಿಸಬಹುದು.

**೨. ಕೃಷಿ ಕೂಲಿ:** ಒಟ್ಟು ೬೩೭ ಜನರಲ್ಲಿ ೩೦೭ ಜನರು ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯುತ್ತಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಸ್ತ್ರೀಯರು ೩೩೦ ಜನರು ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಕೃಷಿ ಕೂಲಿಯಲ್ಲಿ ಪುರುಷರಿಗಿಂತ ಸ್ತ್ರೀಯರ ಪಾಲು ಹೆಚ್ಚಿರುವುದು ಕಂಡುಬಂದಿದೆ. ಒಟ್ಟು ಶೇಕಡವಾರು ೨೫.೪೨ರಷ್ಟು ಜನರು ಕೃಷಿ ಕೂಲಿ ಆಳುಗಳಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**೩. ಪಶುಪಾಲನೆ:** ನಗರೀಕರಣ, ಯಾಂತ್ರೀಕರಣ, ಔದ್ಯೋಗೀಕರಣ, ಜಾಗತೀಕರಣ ತಾಂತ್ರಿಕ ಆವಿಷ್ಕಾರದಿಂದಾಗಿ ಪ್ರಾಚೀನ ಕಾಲದಿಂದಲೂ ಮುಂದುವರಿಸಿಕೊಂಡು ಬಂದಂತಹ ಪಶುಪಾಲನೆಯು ತೀವ್ರವಾಗಿ ಕಡಿಮೆಯಾಗಿರುವುದು ಈ ಸಮೀಕ್ಷೆಯಿಂದಾಗಿ ದೃಢಪಟ್ಟಿದೆ. ಪಶುಪಾಲನೆಯಲ್ಲಿ ಒಟ್ಟು ೮೦ ಜನರು ತೊಡಗಿಕೊಂಡಿದ್ದಾರೆ. ಅದರಲ್ಲಿ ೪೯ ಜನ ಪುರುಷರು ೩೧ ಜನ ಮಹಿಳೆಯರಿದ್ದಾರೆ. ಪಶುಪಾಲನೆಯಲ್ಲಿ ಮಹಿಳೆಯರಿಗಿಂತ ಪುರುಷರೇ ಹೆಚ್ಚು ಅವಲಂಬಿಸಿರುವುದು ಕಂಡುಬಂದಿದೆ.

**೪. ಕುರಿ ಕಾಯುವುದು:** ಆಧುನಿಕ ಸಮಾಜ ನಿರ್ಮಾಣವಾದಂತೆ ಕಾಡುಗೊಲ್ಲರಲ್ಲಿ ಕುರಿ ಕಾಯುವುವರ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿದೆ. ಒಟ್ಟು ೮೫ ಜನರಲ್ಲಿ ಪುರುಷರು ೩೯ ಜನ ಕುರಿ ಕಾಯ್ದರೆ ಸ್ತ್ರೀಯರು ೪೬ ಜನರು ಕುರಿ ಕಾಯುತ್ತಿದ್ದಾರೆ. ಅಂದರೆ ಕುರಿ ಕಾಯುವುದರಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚಾಗಿರುವುದು ತಿಳಿದುಬಂದಿದೆ. ಶೇಕಡ ೩.೩೯೨ರಷ್ಟು ಕುರಿ ಕಾಯುವ ಕಾಯಕದಲ್ಲಿ ತೊಡಗಿಕೊಂಡಿರುವುದು ಕಂಡುಬಂದಿದೆ.

**೫. ಸರ್ಕಾರಿ ಕೆಲಸ:** ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲರು ಸರ್ಕಾರಿ ಕೆಲಸದಲ್ಲಿ ತೊಡಗಿಸಿಕೊಂಡವರ ವರದಿ ಈ ರೀತಿ ಇದೆ. ಒಟ್ಟು ೫೩ ಜನರಲ್ಲಿ ೩೬ ಜನರು ಗಂಡಸರು ೧೭ ಜನ ಹೆಂಗಸರು ಸರ್ಕಾರಿ ಕೆಲಸದಲ್ಲಿರುವುದು ತಿಳಿದುಬಂದ ಮಾಹಿತಿ ಪುರುಷರಿಗಿಂತ ಅರ್ಧದಷ್ಟು ಮಹಿಳೆಯರು ಮಾತ್ರ ಸರ್ಕಾರಿ ಕೆಲಸದಲ್ಲಿದ್ದಾರೆ. ಸರಾಸರಿ ಶೇಕಡವಾರು ೨೧.೧೫% ಸರ್ಕಾರಿ ಕೆಲಸದಲ್ಲಿರುವುದು ಸಮೀಕ್ಷೆಯಿಂದ ದೃಢಪಟ್ಟಿದೆ.

**೬. ಖಾಸಗಿ ವಲಯ:** ಇಲ್ಲಿಯೂ ಕಾಡುಗೊಲ್ಲರು ತೊಡಗಿಕೊಂಡಿರುವುದು ತಿಳಿದುಬಂದಿದೆ. ಸಂಪ್ರದಾಯ ಶರಣರಿಂದ ಕಾಡುಗೊಲ್ಲರು ಅನಿವಾರ್ಯ ಕಾರಣಗಳಿಂದ ಹಟ್ಟಿಯನ್ನು ತೊರೆದು ಜೀವನೋಪಾಯಕ್ಕಾಗಿ ಖಾಸಗಿ ವಲಯಗಳಲ್ಲಿ ದುಡಿಯುವ ಸ್ಥಿತಿಯು ಆಧುನೀಕರಣದಿಂದಾಗಿ ಸೃಷ್ಟಿಯಾಗಿದೆ. ಹಾಗಾಗಿ ಖಾಸಗಿ ವಲಯಗಳಲ್ಲಿ ದುಡಿಯುವ ಕಾಡುಗೊಲ್ಲ ಸಮುದಾಯವನ್ನು ಸಮೀಕ್ಷೆ ಮಾಡಿದಾಗ ಬಂದಿರುವ ಮಾಹಿತಿಯ ಪ್ರಕಾರ ಒಟ್ಟು ೬೬ ಜನರಲ್ಲಿ ೩೮ ಜನ ಮಹಿಳೆಯರು ಖಾಸಗಿ ವಲಯಗಳಲ್ಲಿ ದುಡಿಯುತ್ತಿರುವುದು ಕಂಡುಬಂದಿದೆ.

**೭. ಇತರೆ:** ಕಾಡುಗೊಲ್ಲರು ಇನ್ನೂ ಅನೇಕ ಇತರೆ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ಅದರಲ್ಲಿ ೧೧೨ ಜನರಲ್ಲಿ ೮೫ ಜನ ಪುರುಷರು, ೨೫ ಜನ ಮಹಿಳೆಯರು ಇತರೆ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ.

### ೪.೧೦. ಆರ್ಥಿಕ ಸ್ಥಿತಿಗತಿ

ಕಾಡುಗೊಲ್ಲರ ಮೂಲ ಹಿನ್ನೆಲೆ ಪಶುಪಾಲಕ ವೃತ್ತಿಯಾಗಿದ್ದು, ಇತ್ತೀಚಿನ ದಿನಗಳಲ್ಲಿ ಪಶುಪಾಲನೆ ಕಡಿಮೆಯಾಗುತ್ತಿದೆ. ಆದರೆ ಇಂದು ಪಶುಪಾಲನೆಯ ಬದಲಿಗೆ ಕೃಷಿಯ ಕಡೆ ಗಮನ ಹರಿಸುತ್ತಿದ್ದಾರೆ. ಈ ಕೃಷಿಯಿಂದಲೇ ಬರುವ ಅಲ್ಪ ಸ್ವಲ್ಪ ಆದಾಯದಿಂದ ಜೀವನ ನಡೆಸುತ್ತಿದ್ದಾರೆ ಮತ್ತು ಈ ಸಾಂಪ್ರದಾಯಿಕ ಕೃಷಿಯಿಂದಲೇ ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಕಾಡುಗೊಲ್ಲರ ಆರ್ಥಿಕ ಸ್ಥಾನಮಾನ ತುಂಬಾ ಕೆಳಮಟ್ಟದಲ್ಲಿದೆ. ಇದಕ್ಕೆ ಕಾರಣ ಕಾಡುಗೊಲ್ಲರ ಆದಾಯದ ಮೂಲಗಳು ಆದಾಯ ತರುವುದಕ್ಕಿಂತ ಹೆಚ್ಚು ಖರ್ಚು ಭರಿಸುವ ಮೂಲಗಳಾಗಿವೆ. ಅಷ್ಟೇ ಅಲ್ಲ, ಇವರು ಅಲೆಮಾರಿಗಳಾದ್ದರಿಂದ ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ನಿರಂತರವಾಗಿ ವಲಸೆ ಹೋಗುತ್ತಿದ್ದಾರೆ. ಇದರಿಂದಾಗಿ ಅವರ ಆರ್ಥಿಕ ಮಟ್ಟ ಕೆಳಹಂತದಲ್ಲಿದೆ.

ಇತರೆ ಸಮುದಾಯದವರಿಗಿಂತ ಕಾಡುಗೊಲ್ಲ ಸಮುದಾಯ ಹಿಂದುಳಿದ ಬುಡಕಟ್ಟು ಸಮುದಾಯವಾಗಿದೆ. ಇವರಿಗೆ ಶ್ರೀಮಂತಿಕೆ ಎನ್ನುವುದು ಮರೀಚಿಕೆಯಾಗಿದೆ. ಇದಕ್ಕೆ ಕಾರಣವೆಂದರೆ ಭೂಸಂಪತ್ತು ಅಸಮರ್ಪಕವಾಗಿ ಹಂಚಿಕೆಯಾಗಿರುವುದೇ ಆಗಿದೆ. ಮನುಷ್ಯನ ಅಭಿವೃದ್ಧಿಗೆ ಭೂಮಿ ಸಹಕಾರಿಯಾಗಿದೆ. ಆದರೆ ಕಾಡುಗೊಲ್ಲರು ಇನ್ನೂ ಸಹ ಭೂ ಒಡೆಯರಾಗಿ ಭೂಮಿಯ ಮೇಲೆ ಪ್ರಭುತ್ವವನ್ನು ಹೊಂದಿಲ್ಲ. ಕೆಲವು ಭಾಗಗಳಲ್ಲಿ ಕೇವಲ ಸಣ್ಣ ಪುಟ್ಟ ಭೂಒಡೆಯರಾಗಿ ಅದರಲ್ಲಿ ತಮ್ಮ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಲು ಪ್ರಯತ್ನಿಸುತ್ತಿದ್ದಾರೆ. ಇವರಲ್ಲಿ ಕೃಷಿಕರಿಗಿಂತ ಕೃಷಿ ಕೂಲಿಯಾಳುಗಳೇ ಹೆಚ್ಚು ದೊರೆಯುತ್ತಾರೆ. ಕಾಡುಗೊಲ್ಲರ ಆರ್ಥಿಕತೆಯನ್ನು ನೋಡುವುದಾದರೆ ಅವರು ಯಾವ ಯಾವ ಕಾಯಕಗಳಲ್ಲಿ ನಿರತರಾಗಿದ್ದಾರೆ. ಹಾಗೂ ಅವರು ತೊಡಗಿಸಿಕೊಂಡಿರುವ ವೃತ್ತಿಗಳನ್ನು ಈ ಕೆಳಕಂಡ ಕೋಷ್ಟಕಗಳಿಂದ ತಿಳಿಯಬಹುದಾಗಿದೆ. ಕಾಡುಗೊಲ್ಲ ಸಮುದಾಯವು ಈ ಕೆಳಗಿನ ಕೋಷ್ಟಕದಲ್ಲಿ ತೋರಿಸಿರುವಂತೆ ಹೆಚ್ಚು ಶ್ರಮಸಾಂದ್ರ ಕಸುಬುಗಳನ್ನೇ ಆಯ್ಕೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಕಾಡುಗೊಲ್ಲ ಸಮುದಾಯದವರು ಹೆಚ್ಚು ಅವಿಭಕ್ತ ಕುಟುಂಬಗಳನ್ನು ಹೊಂದಿರುವುದರಿಂದ ದುಡಿಯುವ ಸದಸ್ಯರು ಕುಟುಂಬದಲ್ಲಿ ಹೆಚ್ಚಿಗೆ ಕಂಡುಬರುತ್ತಾರೆ. ಕಾಡುಗೊಲ್ಲ ಸಮುದಾಯದವರು ಬಂಡವಾಳಸಾಂದ್ರ ಕಸುಬುಗಳ ಕಡೆಗೆ ಗಮನ ಹರಿಸದಿರುವುದು ಕಂಡುಬರುತ್ತದೆ. ಕಾರಣ ಇವರು ಆರ್ಥಿಕವಾಗಿ ಸಧೃಡರಾಗದೇ ಇರುವುದರಿಂದ ಬಂಡವಾಳ ಹೂಡಿಕೆ ಕಡಿಮೆ ಇರುವುದರಿಂದ ಬಂಡವಾಳಸಾಂದ್ರ ಕಸುಬುಗಳ ಆಯ್ಕೆ ಇವರಿಗೆ ಕಷ್ಟ. ಈ ಕೋಷ್ಟಕದಲ್ಲಿ ಕಾಡುಗೊಲ್ಲ ಸಮುದಾಯವು ಆಯ್ದುಕೊಂಡ ವಿವಿಧ ಕಸುಬುಗಳನ್ನು ಅರ್ಥಮಾಡಿಕೊಳ್ಳಬಹುದು.

**ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ಲಿಂಗವಾರು ಕಸುಬುಗಳು**

**ಕೋಷ್ಟಕ ೪.೬.**

| ಕಸುಬುಗಳು | ಗಂಡು | ಹೆಣ್ಣು | ಒಟ್ಟು | % |
|---|---|---|---|---|
| ಕೃಷಿ | ೧೦೫೦ | ೪೨೫ | ೧೪೭೫ | ೫೮.೮೬ |
| ಕೃಷಿಕೂಲಿ | ೩೦೭ | ೩೩೦ | ೬೩೭ | ೨೫.೪೨ |
| ಪಶುಪಾಲನೆ | ೪೯ | ೩೧ | ೮೦ | ೩.೧೯೨ |
| ಕುರಿ ಕಾಯುವುದು | ೩೯ | ೪೬ | ೮೫ | ೩.೩೯೨ |
| ಸರ್ಕಾರಿ | ೩೬ | ೧೭ | ೫೩ | ೨.೧೧೫ |
| ಖಾಸಗಿ | ೩೮ | ೨೮ | ೬೬ | ೨.೬೩೪ |
| ಇತರೆ | ೮೫ | ೨೫ | ೧೧೨ | ೪.೪೬೯ |
| ಒಟ್ಟು | ೧೬೦೪ | ೯೦೨ | ೨೫೦೬ | |

ಆಧುನೀಕರಣ ಮತ್ತು ಜಾಗತೀಕರಣದ ಪರಿಣಾಮವಾಗಿ ವ್ಯಕ್ತಿ ಮಾಡುವ ಕೆಲಸಕ್ಕಿಂತ ಅದರಿಂದ ಬರಬಹುದಾದ ಆದಾಯವನ್ನು ಆದರಿಸಿ ಅವನ ಸ್ಥಾನಮಾನಗಳನ್ನು ಸಮಾಜದಲ್ಲಿ ನಿರ್ಧರಿತವಾಗುತ್ತಿದೆ. ವರ್ಗಾಶ್ರಮ ಪದ್ಧತಿಯಲ್ಲಿ ವ್ಯಕ್ತಿಯು ಕೈಗೊಳ್ಳುತ್ತಿದ್ದ ವೃತ್ತಿಯನ್ನು ಆಧರಿಸಿ ಅವನ ಸ್ಥಾನಮಾನ ನಿರ್ಧರಿತವಾಗುತ್ತಿತ್ತು. ಆ ಸ್ಥಾನಮಾನ ವ್ಯಕ್ತಿಯ ಪಾವಿತ್ರ್ಯತೆಯ ಪರಿಣಾಮದಿಂದ ಲಭ್ಯವಾಗುತ್ತಿತ್ತು. ಅಲ್ಲಿ ವಸ್ತುಗಳ ಬೆಲೆಗೆ ಆದ್ಯತೆ ಇರಲಿಲ್ಲ. ಬದಲಾಗಿ ಸಮಾಜದಲ್ಲಿ ಅದರ ಅವಶ್ಯಕತೆಗೆ ಪ್ರಾಮುಖ್ಯತೆ ನೀಡಲಾಗುತ್ತಿತ್ತು. ಅದು ವಸ್ತುವಿನಿಮಯ ಅಥವಾ ಯಾಜಮಾನ್ಯ ಪದ್ಧತಿಯ ಪ್ರಕಾರ ಲಕ್ಷಣವಾಗುತ್ತಿತ್ತು. ವ್ಯಕ್ತಿಗಳ ವೃತ್ತಿಗಳು ಪರಸ್ಪರ ಅವಲಂಬನೆಯಿಂದ ಕೂಡಿತ್ತು. ಅಲ್ಲಿ ವೃತ್ತಿಗಳಿಗೆ ಸಮಾನಾದ ಗೌರವ ಪ್ರತಿಯಾಗಿ ನೀಡಲಾಗುತ್ತಿತ್ತು. ಉತ್ಪನ್ನಗಳಿಗೆ ಉತ್ಪನ್ನಗಳನ್ನು ನೀಡಿ ವಿನಿಮಯ ಮಾಡಿಕೊಂಡು ಸರಣಿಯ ಅಥವಾ ಚಕ್ರೀಯವಾಗಿ ವಸ್ತುಗಳ ವಿನಿಮಯ ನಡೆಯುತ್ತಿತ್ತು. ದಿನ ಕಳೆದಂತೆ ವಸ್ತುಗಳಿಗೆ ಟಂಕಿಸಿದ ನಾಣ್ಯಗಳ ಬೆಲೆ ನಿಗದಿಪಡಿಸಿದ ನಂತರ ವಸ್ತುಗಳಲ್ಲಿ ಏಣಿಶ್ರೇಣೀಕರಣ, ಅವುಗಳ ತಯಾರು ಮಾಡುವ ವ್ಯಕ್ತಿಯ ವೃತ್ತಿಗಳಲ್ಲಿ ಶ್ರೇಷ್ಠ-ಕನಿಷ್ಠತೆ ಎಂಬ ಪರಿಕಲ್ಪನೆಗಳು ಬೆಳೆದವು. ಇದರಿಂದಾಗಿ ಎಥ್ನೋಸೆಟ್ರಿಸಂ ಮತ್ತು ಜಿನೋಸೆಟ್ರಿಸಂ ಪರಿಕಲ್ಪನೆಗಳು ಮೇಲ್ವರ್ಗ ಮತ್ತು ಕೆಳವರ್ಗಗಳಲ್ಲಿ ಬೆಳೆದು ಸಮಾಜದಲ್ಲಿ ಕಸುಬುದಾರಿ ಶ್ರೇಣೀಕರಣ ಸೃಷ್ಟಿಯಾಯಿತು. ಈ ಶ್ರೇಣೀಕೃತ ವೃತ್ತಿಗಳು ದಿನ ಕಳೆದಂತೆ ಕುಲವೃತ್ತಿಗಳಾಗಿ ಅನಿವಾರ್ಯವಾಗಿ ಜೀವನಾಧಾರ ವೃತ್ತಿಗಳಾದವು. ಇದೇ ರೀತಿಯಲ್ಲಿ ಕಾಡುಗೊಲ್ಲರಲ್ಲಿ ಪಶುಪಾಲನೆ, ಕುರಿ ಸಾಲಕಾಣಿಕೆ ಅಲೆಮಾರಿಗಳಾಗಿದ್ದ ಕಾಲದಲ್ಲಿ ಪಶು, ಕುರಿಗಳಿಗೆ ಬೇಕಾದ ಹುಲ್ಲು/ಮೇವು, ನೀರು ಆಧಾರಿಸಿ ಅವರ ವಾಸಸ್ಥಾನಗಳು ನಿರ್ಧರಿತವಾಗುತ್ತಿದ್ದವು. ಇವರ ವಲಸೆ ಅಂತಿಮವಾಗಿ ವೇದಾವತಿ-ಹಗರಿ ನದಿಗಳ ದೋ-ಅಬ್ ಪ್ರದೇಶದಲ್ಲಿ ನೆಲೆಯೂರಿತು. ಅಂದು ರಾಜಪ್ರಭುತ್ವದ ಅಧೀನದಲ್ಲಿ ಈ ಪ್ರದೇಶ ಪ್ರಾಕೃತಿಕ ಸಂಪತ್ತಿನಿಂದ ಕೂಡಿತ್ತು. ಆದರೆ ಪ್ರಕೃತಿ ವಿಕೋಪ/ ಹವಾಮಾನ ವೈಪರೀತ್ಯಗಳಿಂದ ಮತ್ತು ರಾಜರ ಯುದ್ಧದಾಹಗಳಿಂದ ಅಂದಿನ ಅರಣ್ಯ ಸಂಪತ್ತು ಯುದ್ಧಭೂಮಿಯಂತೆ ಬಯಲುಸೀಮೆಯಾಗಿ ಮಾರ್ಪಾಡಾಯಿತು. ನದಿಗಳ ಹರಿವಿನ ಪ್ರಮಾಣವು ಕಡಿಮೆಯಾಯಿತು. ಇಂತಹ ಬಯಲು ಸೀಮೆಯಲ್ಲಿ ವೃತ್ತಿಯಾಗಿ ಕಾಡುಗೊಲ್ಲರಿಗೆ ಆಸರೆಯಾಗಿದ್ದು ಕುರಿಗಾಹಿ ವೃತ್ತಿ. ಈ ವೃತ್ತಿಯು ಕಾಡುಗೊಲ್ಲರ ಜೀವನಾಧಾರ ವೃತ್ತಿಯಾಗಿತ್ತು. ನದಿಗಳ ಬತ್ತುವಿಕೆ, ಸಿಡಿಲು ಬಡಿತ, ಅತಿವೃಷ್ಟಿ ಮತ್ತು ಅನಾವೃಷ್ಟಿಗಳ ಪರಿಣಾಮವಾಗಿ ಕುರಿಗಾಹಿ ವೃತ್ತಿಯು ಸವಾಲಾಗಿ ಪರಿಣಮಿಸಿತು. ಇದರ ಸಲುವಾಗಿ ಇಂದು ಚಿತ್ರದುರ್ಗ ಜಿಲ್ಲೆಯಲ್ಲಿ ಸಮೀಕ್ಷೆಯಂತೆ ಕೇವಲ ೮೫ ಜನರಿದ್ದಾರೆ. ಇದರಲ್ಲಿ ೪೬ ಜನ ಸ್ತ್ರೀಯರು. ಈ ವೃತ್ತಿಯಲ್ಲಿ ಪುರುಷರಿಗಿಂತ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕುರಿಗಾಹಿ ವೃತ್ತಿಯಲ್ಲಿ ತೊಡಗಿದ್ದಾರೆ. ಈ ಕುರಿಗಾಹಿ ವೃತ್ತಿಯ ಸವಾಲಿನಿಂದ ಸಹಜವಾಗಿಯೇ ಪಶುಪಾಲನೆ ಕಡೆ ಮುಖ ಮಾಡಿದ ಕಾಡುಗೊಲ್ಲರು ಕೃಷಿಯನ್ನು ವೃತ್ತಿಯನ್ನಾಗಿಸಿಕೊಳ್ಳಲು ಹಲವಾರು ನೆಲೆ ನಿಂತ ಸಮುದಾಯಗಳನ್ನು ಅನುಕರಿಸಿದರು. ಇಂದು ಸಮೀಕ್ಷೆಯಂತೆ ೮೦ ಜನರು ಅಂದರೆ ಶೇಕಡ ೩% ಜನರು ಪಶುಪಾಲನೆಯನ್ನು ಅವಲಂಬಿಸಿ

ಬದುಕುತ್ತಿದ್ದಾರೆ. ಕೃಷಿಯನ್ನು ಅವಲಂಬಿಸಿದ ಬದುಕಿನಲ್ಲಿ ಶೇಕಡ ೫೮% ಜನ ಕಾಡುಗೊಲ್ಲರು ಅಂದರೆ ೧೪೭೫ ಜನರು ಇಲ್ಲಿನ ದೋ-ಆಬ್ ಪ್ರದೇಶದಲ್ಲಿ ಶೇಂಗಾ, ಈರುಳ್ಳಿ ಇತರೆ ಎಣ್ಣೆಕಾಳುಗಳನ್ನು ಬೆಳೆಯುತ್ತಿದ್ದಾರೆ. ಆದರೂ ಈ ಪ್ರದೇಶದಲ್ಲಿ ಅತಿವೃಷ್ಟಿ ಮತ್ತು ಅನಾವೃಷ್ಟಿಯು ಮಾನ್ಸೂನ್ ಮಳೆಯೊಡನೆ ಆಡುವ ಜೂಜಾಟವಿದ್ದಂತೆ ಇವರ ಬದುಕು ಕಷ್ಟದಾಯಕವಾಗಿದೆ. ಆದರೂ ಅಲ್ಲಲ್ಲಿ ಕೊಳವೆ ಬಾವಿಗಳ ಸೌಲಭ್ಯದಿಂದ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದು ಆರ್ಥಿಕವಾಗಿ ಸ್ವಲ್ಪಮಟ್ಟಿಗೆ ಸುಧಾರಿಸುತ್ತಿದ್ದಾರೆ. ಭದ್ರಾಮೇಲ್ದಂಡೆ ಯೋಜನೆ ನನೆಗುದಿಗೆ ಬಿದ್ದಿದ್ದು ಅದು ಕಾರ್ಯರೂಪವಾದರೆ ಈ ಪ್ರದೇಶದ ಬಂಜರು ಕೃಷಿ ಭೂಮಿ ನೀರಾವರಿಗೆ ಒಳಪಟ್ಟಾಗ ಇವರ ಬದುಕು ಭದ್ರತೆ ಹೊಂದಲು ಸಾಧ್ಯವಾಗಬಹುದು ಎಂದು ಹೇಳಬಹುದು.

ಈ ಮೇಲ್ಕಂಡ ಕುರಿಸಾಕಾಣಿಕೆ, ಪಶುಪಾಲನೆ ಮತ್ತು ಕೃಷಿ ವೃತ್ತಿಗಳ ಹೊರತಾಗಿ ಕೆಲವೊಂದು ವಿದ್ಯಾವಂತ ನಿರುದ್ಯೋಗಿಗಳ ವರ್ಗ, ಖಾಸಗಿಕ್ಷೇತ್ರದಲ್ಲಿ ಆಟೋ ಡ್ರೈವರ್, ತರಗಾರ ವೃತ್ತಿ ಇತ್ಯಾದಿ ದಿನಗೂಲಿ ನೌಕರರಾಗಿ ಜೀವನ ಸಾಗಿಸುತ್ತಿದ್ದಾರೆ. ಇಂತಹ ಪರಿಸ್ಥಿತಿಯ ನಡುವೆ ೫೯೭೫ ಜನರಲ್ಲಿ ೫೩ ಜನರು ವಿವಿಧ ಇಲಾಖೆಗಳಲ್ಲಿ ಸರ್ಕಾರಿ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಸರ್ಕಾರಿ ನೌಕರರ ಪ್ರಮಾಣ ಕಡಿಮೆಯಾಗಲು ಮೀಸಲಾತಿ ಸೌಲಭ್ಯ ಮತ್ತು ಇತರೆ ಸಮುದಾಯಗಳ ಜೊತೆಗೆ ಸ್ಪರ್ಧಾತ್ಮಕ ಜಗತ್ತಿನಲ್ಲಿ ಪ್ರತಿಸ್ಪರ್ಧಿಯಾಗಿ ಇಲ್ಲದೇ ಇರುವುದು ಕಾರಣವಾಗಿರಬಹುದು.

ಒಟ್ಟಾರೆಯಾಗಿ ಸಮೀಕ್ಷೆಯಂತೆ ೫೯೭೫ ಜನರಲ್ಲಿ ೨೫೦೬ ಜನರು ವಿವಿಧ ಈ ಮೇಲ್ಕಂಡ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದು, ಇನ್ನುಳಿದ ಅನುತ್ಪಾದಕರೆಂದು ಕರೆಸಿಕೊಳ್ಳುವ, ಮಕ್ಕಳು, ಅಂಗವಿಕಲರು, ವೃದ್ಧರು ೩೪೬೯ ಜನರಿದ್ದಾರೆ. ಇವರ ಪ್ರಮಾಣ ಅಧಿಕವಾಗಿರುವುದು ಇವರ ಆರ್ಥಿಕ ಸ್ಥಿತಿ ಹದಗೆಡಲು ಕಾರಣ ಎನ್ನಬಹುದು. ಒಟ್ಟು ವೃತ್ತಿಯ ಶೇಕಡವಾರು ವಿಂಗಡನೆ ಗಮನಿಸಿದಾಗ, ಕೃಷಿಯಲ್ಲಿ ೫೯% ಜನರು, ಪಶುಪಾಲನೆ ವೃತ್ತಿಯಲ್ಲಿ ೩%, ಕುರಿಗಾಹಿ ವೃತ್ತಿಯಲ್ಲಿ ೩%, ಸರ್ಕಾರಿ ವೃತ್ತಿಯಲ್ಲಿ ೨%, ಮತ್ತು ಖಾಸಗಿ ಹಾಗೂ ಇತರ ಕ್ಷೇತ್ರಗಳಲ್ಲಿ ೫% ಜನರು ಜೀವನ ನಿರ್ವಹಿಸುತ್ತಿರುವುದು ಪ್ರಸ್ತುತ ಅಧ್ಯಯನದಿಂದ ತಿಳಿದುಬರುತ್ತದೆ.

ಕಾಡುಗೊಲ್ಲ ಸಮುದಾಯದ ಲಿಂಗವಾರು ಕಸುಬುಗಳನ್ನು ನೋಡಿದಾಗ ಕೃಷಿಯಲ್ಲಿ ಗಂಡಸರಿಗೆ ಸಹಕಾರಿಯಾಗುವಲ್ಲಿ ಶೇಕಡ ೪೦ರಷ್ಟು ಹೆಂಗಸರು ಕೃಷಿಯಲ್ಲಿ ತೊಡಗಿಕೊಂಡುರುವುದು ಕ್ಷೇತ್ರಕಾರ್ಯದ ಸಮೀಕ್ಷೆಯಲ್ಲಿ ಕಂಡುಬಂದಿದ್ದು, ಕೃಷಿ ಕೂಲಿಯಲ್ಲಿ ಗಂಡಸರಿಗಿಂತ ಹೆಂಗಸರು ಹೆಚ್ಚಿನ ಪ್ರಮಾಣದಲ್ಲಿ ತೊಡಗಿಕೊಂಡಿದ್ದಾರೆ. ಹಾಗೆಯೇ ಕುರಿ ಕಾಯುವ ಕಾಯಕದಲ್ಲಿ ಇವರು ಮಳೆಗಾಲದಲ್ಲಿ ಕುರಿಗಳ ಆಹಾರಕ್ಕಾಗಿ ಬೇರೆ ಕಡೆ ವಲಸೆ ಹೋಗುವ ಸಂದರ್ಭದಲ್ಲಿ ಗಂಡಸರಿಗೆ ಆಹಾರೋತ್ಪನ್ನಗಳ ತಯಾರಿಕೆಗಾಗಿ ಹೆಂಗಸರೂ ಸಹ ಇವರಿಗೆ ನೆರವಾಗುತ್ತಾರೆ. ಸರ್ಕಾರಿ ಉದ್ಯೋಗ ಪಡೆದುಕೊಳ್ಳುವಲ್ಲಿ ಮಾತ್ರ ಗಂಡಸರಿಗಿಂತ ಹೆಂಗಸರು ತೀರಾ ಅತ್ಯಲ್ಪ ಪ್ರಮಾಣದಲ್ಲಿ ಸರ್ಕಾರಿ ನೌಕರಿಯಲ್ಲಿರುವುದನ್ನು ಕ್ಷೇತ್ರಕಾರ್ಯದ ಸಮೀಕ್ಷೆಯಲ್ಲಿ ತಿಳಿದುಕೊಳ್ಳಲಾಗಿದೆ.

ಬುಡಕಟ್ಟು ಸಮುದಾಯವಾದ ಕಾಡುಗೊಲ್ಲರು ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿ ಪ್ರತ್ಯೇಕತೆಯನ್ನು ಹೊಂದಿದ್ದರೂ ಸಹ ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಿಂದುಳಿದಿರುವುದು ಕಂಡುಬಂದಿದೆ. ನಾಗರಿಕ ಪ್ರಪಂಚದ ಅರಿವಿರದ ಇವರು ಇತರ ಆರ್ಥಿಕ ಮೂಲಗಳನ್ನು ತಿಳಿದುಕೊಳ್ಳದಿರುವುದು ದುರದೃಷ್ಟಕರವಾದ ಸಂಗತಿ. ದೇವರುಗಳನ್ನು ಅತಿಯಾಗಿ ಆರಾಧನೆ ಮಾಡುವ ಇವರು ಸಂಪ್ರದಾಯಗಳನ್ನು ಮೀರಲು ಇಷ್ಟಪಡುವುದಿಲ್ಲ. ಇವರು ಹೊರಗೆ ಬರಬೇಕೆಂದರೆ ದೇವರ ಒಪ್ಪಿಗೆಯ ಪಡೆದುಕೊಂಡು ಬರಬೇಕಾಗುತ್ತದೆ. ಎಷ್ಟೋ ಜನ ಕಾಡುಗೊಲ್ಲರು ದೇವರು ಒಪ್ಪಿಗೆ ಕೊಡಲಿಲ್ಲ ಎಂಬ ಕಾರಣಕ್ಕೆ ಸರ್ಕಾರಿ ಉದ್ಯೋಗಗಳನ್ನು ತೊರೆದು ಬೀದಿಗೆ ಬಂದಿರುವ ಉದಾಹರಣೆಗಳು ನಮ್ಮ ಮುಂದೆ ಸಾಕಷ್ಟಿವೆ.

ಕೇವಲ ಕಾಡುಗಳನ್ನು ಮಾತ್ರ ನಂಬಿಕೊಂಡಿದ್ದ ಇವರು ಕಾಡುಗಳು ನಾಶವಾದ ನಂತರ ಅಥವಾ ಕಾಡುಗೊಲ್ಲರ ಮೇಲೆ ಸರ್ಕಾರ ಸ್ವಾಮ್ಯವನ್ನು ಪಡೆದುಕೊಂಡ ನಂತರ ಇವರು ಕೃಷಿಯ ಕಡೆ ಮುಖ ಮಾಡಿದರು. ಇದರಿಂದಾಗಿ ಅವರಿಗೆ ದೊರೆತ ಭೂಮಿಗಳೆಂದರೆ ಮರುಭೂಮಿ, ಬಂಜರು ಭೂಮಿ, ಜೌಗುಭೂಮಿ, ಕಲ್ಲುಮುಳ್ಳುಗಳಿಂದ ಆವೃತವಾಗಿರುವ ಭೂಮಿ. ಈ ಭೂಮಿಗೆ ಬೇಸಾಯ ವ್ಯರ್ಥವೇ ವಿನಾಃ ಅದರಿಂದ ಯಾವುದೇ ರೀತಿಯಾದ ಆದಾಯ ಬರುವುದಿಲ್ಲ. ಇಂತಹ ಭೂಮಿಯಲ್ಲಿ ಬೆಳೆಯುವ ಬೆಳೆಗಳೆಂದರೆ ಶೇಂಗಾ, ಹೆಸರು, ಸಜ್ಜೆ, ರಾಗಿ, ಜೋಳ ಹಾಗೂ ತೊಗರಿ ಮುಂತಾದವುಗಳು. ಆದರೂ ಇವುಗಳು ಬೆಳೆಯುವುದಕ್ಕೂ ಸರಿಯಾಗಿ ಸಮಯಕ್ಕೆ ಮಳೆ ಬರುವುದಿಲ್ಲ. ಇದರಿಂದಾಗಿ ಇವರ ಆರ್ಥಿಕತೆ ಸುಧಾರಣೆಯಾಗುವುದಿಲ್ಲ. ಕೆಲವು ಭಾಗಗಳಲ್ಲಿ ವಾಣಿಜ್ಯ ಬೆಳೆಗಳಾದ ತೆಂಗು, ಅಡಿಕೆ, ಬಾಳೆ, ಈರುಳ್ಳಿ, ಸೂರ್ಯಕಾಂತಿ ಮುಂತಾದ ಬೆಳೆಗಳನ್ನು ಬೆಳೆದರೆ ಅವುಗಳಿಗೆ ಸರಿಯಾದ ಬೆಂಬಲ ಬೆಲೆ ಸಿಗದೆ ನಷ್ಟವನ್ನು ಅನುಭವಿಸುತ್ತಾರೆ.

**ಸರ್ಕಾರಿ ಕೆಲಸ:** ಮೂಲಭೂತ ಸೌಕರ್ಯಗಳ ಕೊರತೆ ಹಾಗೂ ಮಾಹಿತಿಗಳು ಸಿಗದೇ ಕಾಡುಗೊಲ್ಲರಲ್ಲಿ ಕೆಲವು ಯುವಕರು ಶಿಕ್ಷಣವನ್ನು ಪಡೆದು ಸರ್ಕಾರಿ ನೌಕರಿಗೆ ಅರ್ಹರಾಗಿದ್ದರೂ ಅವರಿಗೆ ಕೆಲಸ ದೊರೆಯುವುದಿಲ್ಲ. ಯಾಕೆಂದರೆ ಇವರು ಹಳ್ಳಿಗಳಿಂದ ಸುಮಾರು ೩ರಿಂದ ೬ ಕಿಲೋ ಮೀಟರ್ ದೂರದಲ್ಲಿ ಹಟ್ಟಿಗಳು ಇರುವುದರಿಂದ ಪ್ರತಿನಿತ್ಯ ವಾರ್ತಾಪತ್ರಿಕೆಗಳು ದೊರೆಯುವುದಿಲ್ಲ. ಗೊಲ್ಲರಹಟ್ಟಿಗಳಿಗೆ ಬಸ್ಸು ಸಂಚಾರವಿರುವುದಿಲ್ಲ. ಹಾಗಾಗಿ ೩ರಿಂದ ೬ ಕಿಲೋ ಮೀಟರ್ ಬಸ್ಸಿಗಾಗಿ ನಡೆಯಬೇಕಾಗುತ್ತದೆ. ಒಂದು ವೇಳೆ ಕೆಲಸ ದೊರೆತರೂ ಸಣ್ಣ ಮಟ್ಟದ ಕೆಲಸಗಳು ಸಿಗುತ್ತವೆ. ಸ್ಫರ್ಧಾತ್ಮಕ ಪರೀಕ್ಷೆಗಳನ್ನು ಪಾಸುಮಾಡಲು ಸಾಧ್ಯವಾಗದೆ ನಿರುದ್ಯೋಗಿಗಳಾಗಿ ಉಳಿಯುತ್ತಾರೆ. ನಗರದ ವಿದ್ಯಾರ್ಥಿಗಳೊಂದಿಗೆ ಸ್ಪರ್ಧಿಸಲು ಸೋಲುತ್ತಾರೆ.

**ಶೈಕ್ಷಣಿಕ ಸ್ಥಿತಿಗತಿ:** ಯಾವುದೇ ಒಂದು ಸಮುದಾಯ ಅಭಿವೃದ್ಧಿ ಹೊಂದಿದೆ ಎಂದರೆ ಆ ಸಮುದಾಯದವರೆಲ್ಲರೂ ಶಿಕ್ಷಣ ಪಡೆದವರಾಗಿರುತ್ತಾರೆ. ಶಿಕ್ಷಣ ಮನುಷ್ಯನಿಗೆ ಕಣ್ಣುಗಳಿದ್ದಂತೆ.

ಅನಾಗರಿಕನನ್ನು ನಾಗರಿಕನಾಗಿ ಪರಿವರ್ತಿಸುವ ಶಕ್ತಿ ಶಿಕ್ಷಣಕ್ಕೆ ಮಾತ್ರ ಸಾಧ್ಯ. ಶಿಕ್ಷಣ ಕಲಿತ ನಂತರ ವ್ಯಕ್ತಿಯು ಸಾಮಾಜಿಕವಾಗಿ ರಾಜಕೀಯವಾಗಿ, ಹಾಗೂ ಆರ್ಥಿಕವಾಗಿ ಸಬಲನಾಗುತ್ತಾನೆ. ಮನುಷ್ಯ ಅಭಿವೃದ್ಧಿಯಾದರೆ ಹಳ್ಳಿ ಅಭಿವೃದ್ಧಿ ಹೊಂದುತ್ತದೆ. ಅದೇ ರೀತಿ ಹಳ್ಳಿಯಾದ ನಂತರ ಪಟ್ಟಣ ನಂತರ ತಾಲ್ಲೂಕು, ನಂತರ ಜಿಲ್ಲೆ, ರಾಜ್ಯ ಹೀಗೆ ದೇಶ ಅಭಿವೃದ್ಧಿ ಹೊಂದುತ್ತಾ ಹೋಗುತ್ತದೆ. ಮನುಷ್ಯನ ಎಲ್ಲಾ ಕುಂದುಕೊರತೆಗಳನ್ನು ಶಿಕ್ಷಣ ನೀಗಿಸುತ್ತದೆ. ಅದರಲ್ಲೂ ಕೇವಲ ಪುರುಷರಷ್ಟೇ ಶಿಕ್ಷಣ ಕಲಿತರೆ ಸಾಲದು. ಸ್ತ್ರೀಯರು ಸಹ ಶಿಕ್ಷಣವನ್ನು ಕಲಿತರೆ ಮಾತ್ರ ಸಮಾಜ ಅಭಿವೃದ್ಧಿಯನ್ನು ಹೊಂದುತ್ತದೆ. ಸಮಾಜದಲ್ಲಿ ಇತರರೊಂದಿಗೆ ಬೆರೆಯಬೇಕೆಂದರೆ ಶಿಕ್ಷಣ ಅನಿವಾರ್ಯ. ಸರ್ವ ಶಿಕ್ಷಣ ಅಭಿಯಾನದಡಿಯಲ್ಲಿ ಪ್ರತಿಯೊಬ್ಬರ ಮನೆಬಾಗಿಲಿಗೆ ಶಿಕ್ಷಣ ಬಂದರೂ ಕಾಡುಗೊಲ್ಲರು ಮಾತ್ರ ಬೇರೆ ಸಮುದಾಯದವರಿಗಿಂತ ಸಾಕ್ಷರತೆಯಲ್ಲಿ ಹಿಂದುಳಿದಿರುವುದು ಗೋಚರಿಸುತ್ತದೆ. ಇವರ ಸಾಕ್ಷರತೆ ರಾಜ್ಯದ ಸರಾಸರಿಗಿಂತ ಕಡಿಮೆ ಇರುವುದು ತಿಳಿದುಬಂದಿದೆ. ಕಾಡುಗೊಲ್ಲರು ಸಾಕ್ಷರತೆಯಲ್ಲಿ ಹಿಂದೆ ಬೀಳಲು ಕಾರಣ ಅವರಲ್ಲಿರುವ ಬೇಜವಾಬ್ದಾರಿತನ, ಮೂಢನಂಬಿಕೆ, ಬಡತನ, ಸಾಮಾಜಿಕ ಹಿಂಬೀಳಿಕೆ, ಗ್ರಾಮೋದ್ಭವ ವಾಸಿಗಳು. ಹಾಗೆಯೇ ಸಂಪ್ರದಾಯ ಶರಣರು. ಅಷ್ಟೇ ಅಲ್ಲದೆ, ಅಲೆಮಾರಿಗಳು, ಜೊತೆಗೆ ಪಶುಪಾಲಕರು ಹಾಗಾಗಿ ಅವರಲ್ಲಿ ಶಿಕ್ಷಣದ ಜಾಗೃತಿ ಇನ್ನೂ ಮೂಡಿಲ್ಲ ಎಂದು ಹೇಳಬಹುದು. ಸಾಕ್ಷರತಾ ಆಂದೋಲನದಿಂದಾಗಿ ಕೆಲವರು ಶಿಕ್ಷಣವಂತರಾಗುತ್ತಿದ್ದಾರೆ. ಎಷ್ಟೋ ಗೊಲ್ಲರಹಟ್ಟಿಗಳಲ್ಲಿ ಪ್ರಾಥಮಿಕ ಶಾಲೆಗಳಿಲ್ಲದಿರುವುದನ್ನು ಗಮನಿಸಬಹುದು. ಹಿಂದಿನ ಕಾಲದಲ್ಲಾದರೆ ಶಿಕ್ಷಣದ ಅವಶ್ಯಕತೆ ಅಷ್ಟಾಗಿ ಕಂಡುಬರುತ್ತಿರಲಿಲ್ಲ. ಆಧುನೀಕರಣದಲ್ಲಿ ಶಿಕ್ಷಣ ಅದರಲ್ಲೂ ಆಧುನಿಕ ಶಿಕ್ಷಣ ಅನಿವಾರ್ಯ. ಹಿಂದೆ ಅನೌಪಚಾರಿಕ ಶಿಕ್ಷಣ ಹಿರಿಯರಿಂದ ದೊರೆಯುತ್ತಿತ್ತು. ಆದರೆ ಪ್ರಸ್ತುತ ದಿನಗಳಲ್ಲಿ ಅನೌಪಚಾರಿಕ ಶಿಕ್ಷಣಕ್ಕಿಂತ ಮುಖ್ಯವಾಗಿ ಔಪಚಾರಿಕ ಶಿಕ್ಷಣ ಅಗತ್ಯವಾಗಿದೆ. ಅನೌಪಚಾರಿಕ ಶಿಕ್ಷಣವನ್ನು ಯಾವಾಗ ಯಾರಿಂದಲಾದರೂ ಕಲಿಯಬಹುದು. ಆದರೆ ಔಪಚಾರಿಕ ಶಿಕ್ಷಣ ಹಾಗಲ್ಲ. ಅದನ್ನು ಕಲಿಸುವುದಕ್ಕೆ ಗುರುವಿನ ಅವಶ್ಯಕತೆ ಇರುತ್ತದೆ. ಇದನ್ನು ಕಲಿಯುವುದಕ್ಕೆ ಒಂದು ರೀತಿ ಶಿಸ್ತಿನ ಅವಶ್ಯಕತೆ ಇದೆ. ಕುರಿ ಕಾಯುವ ಬಗ್ಗೆ, ವ್ಯವಸಾಯದ ಬಗ್ಗೆ, ಕೃಷಿ ಕೂಲಿಯ ಬಗ್ಗೆ ಸಮಾಜದಿಂದಲೇ ಕಲಿತುಕೊಳ್ಳಬಹುದು.

ಇತ್ತೀಚೆಗೆ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ೧೪ ವರ್ಷದವರೆಗಿನ ಎಲ್ಲಾ ಮಕ್ಕಳಿಗೆ ಕಡ್ಡಾಯ ಶಿಕ್ಷಣದ ಪರಿಣಾಮದಿಂದಾಗಿ ಗೊಲ್ಲರ ಹಟ್ಟಿಗಳಲ್ಲಿ ಯುವಕರು ಹಾಗೂ ಕಾಡುಗೊಲ್ಲ ಹಿರಿಯರು ತಮ್ಮ ಮಕ್ಕಳು ಓದದಿದ್ದರೂ ಪರವಾಗಿಲ್ಲ ಕುರಿಮೇಕೆ ದನ ಇಲ್ಲವೆ ವ್ಯವಸಾಯ ಮಾಡಿಕೊಂಡಿದ್ದರೆ ಸಾಕು ಎಂದು ಅಸಡ್ಡೆಯನ್ನು ತೋರಿಸುತ್ತಿರುವುದು ಗಮನಿಸಬೇಕಾದ ಅಂಶವಾಗಿದೆ. ಗೊಲ್ಲರ ಹಟ್ಟಿಗಳು ನಾಗರಿಕ ಸಮಾಜದಿಂದ ದೂರವಿರುವ ಕಾರಣ ಶಾಲೆಗೆ ಹೋಗಿ ಬರುವುದು ಕಷ್ಟವಾಗುತ್ತದೆ. ಇನ್ನೂ ಗೊಲ್ಲರಹಟ್ಟಿಗಳಂತ ಸಮಸ್ಯೆಗಳ ಸರಮಾಲೆಯನ್ನೇ ಹೆಣೆದುಕೊಂಡಿವೆ ೨೦೦೦ ದಶಕದ ತನಕ ಎಷ್ಟೋ ಗೊಲ್ಲರಹಟ್ಟಿಗಳು ವಿದ್ಯುತ್ ಬೆಳಕನ್ನೆ ಕಂಡಿರಲಿಲ್ಲ ಸೀಮೆ ಎಣ್ಣೆ ಇಲ್ಲವೇ ಹರಳೆಣ್ಣೆ

ದೀಪದ ಬೆಳಕಿನಲ್ಲಿಯೇ ಎಲ್ಲಾ ಕೆಲಸ ಕಾರ್ಯಗಳು ನಡೆಯುತ್ತಿದ್ದವು. ಹಟ್ಟಿಗಳು ಕಂದಾಯದ ಗ್ರಾಮಗಳಾಗಿಲ್ಲ ಶೌಚಾಲಯಗಳ. ವ್ಯವಸ್ಥೆ ಮತ್ತು ಚರಂಡಿ ವ್ಯವಸ್ಥೆಯಿಲ್ಲ. ಒಟ್ಟಾರೆ ಹೇಳಬೇಕೆಂದರೆ ಮೂಲ ಸೌಲಭ್ಯಗಳಿಂದ ವಂಚಿತರಾಗಿರುವುದು ತಿಳಿದುಬಂದಿದೆ. ಹೆಣ್ಣು ಮಕ್ಕಳ ಸ್ಥಿತಿಯಂತೂ ಇಂದಿಗೂ ಚಿಂತಾಜನಕವಾಗಿರುವುದನ್ನು ಕಾಣಬಹುದು. ಚಿತ್ರದುರ್ಗ ಜಿಲ್ಲೆಯಲ್ಲಿ ಕಾಡುಗೊಲ್ಲರು ಚಳ್ಳಕೆರೆ, ಚಿತ್ರದುರ್ಗ, ಮೊಳಕಾಲ್ಮೂರು, ಹಿರಿಯೂರು, ಹೊಸದುರ್ಗ ಹಾಗೂ ಹೊಳಲ್ಕೆರೆಯ ತಾಲ್ಲೂಕಿನಾದ್ಯಂತ ಸಮೀಕ್ಷೆ ಕೈಗೊಂಡು ಕಾಡುಗೊಲ್ಲರ ಶೈಕ್ಷಣಿಕ ಪ್ರಮಾಣವನ್ನು ತಿಳಿದುಕೊಂಡು ಅವಲೋಕಿಸಿದಾಗ ಸಾಕ್ಷರರ್ಹರು, ಸಾಕ್ಷರಸ್ಥರು ಹಾಗೂ ಅನಕ್ಷರಸ್ಥರನ್ನು ಈ ಮುಂದಿನ ಕೋಷ್ಟಕದಿಂದ ತಿಳಿಯಬಹುದಾಗಿದೆ. ಇಲ್ಲಿ ೨೯೫ ಕುಟುಂಬಗಳನ್ನು ತೆಗೆದುಕೊಂಡಾಗ ೬೦೫ ಗಂಡು, ೫೩೭ ಹೆಣ್ಣು ಸಾಕ್ಷರರ್ಹರಾಗಿದ್ದು, ಇದರಲ್ಲಿ ೪೩೦ ಗಂಡು, ೨೬೪ ಹೆಣ್ಣು ಮಾತ್ರ ಸಾಕ್ಷರರಾಗಿರುತ್ತಾರೆ. ಇಲ್ಲಿ ಗಂಡಿಗೆ ಹೋಲಿಸಿದರೆ ಹೆಣ್ಣಿನ ಸಾಕ್ಷರತೆ ಪ್ರಮಾಣ ಕಾಡುಗೊಲ್ಲರಲ್ಲಿ ಕಡಿಮೆ ಇರುತ್ತದೆ. ಅಕ್ಷರವನ್ನು ಪಡೆಯಲು ಅರ್ಹರಾಗಿದ್ದರೂ ಸಹ ಮೂಲಭೂತ ಸೌಕರ್ಯಗಳ ಕೊರತೆಯ ಕಾರಣದಿಂದ ಸಾಕ್ಷರರಾಗದೇ ಸಾಕ್ಷರತೆಯಿಂದ ವಂಚಿತರಾಗಿರುವುದನ್ನು ಕಾಣಬಹುದು. ಸರ್ಕಾರ ಸಾಕ್ಷರತೆ ಹೆಚ್ಚಿಸಲು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಸಹ ಇಂತಹ ಕಾರ್ಯಕ್ರಮಗಳು ಕಾಡುಗೊಲ್ಲರರಿಗೆ ಸಿಗದೇ ಇರುವುದು ದುರದೃಷ್ಟಕರವೆಂದು ಹೇಳಬಹುದು.

ಒಟ್ಟಾರೆಯಾಗಿ ಈ ಕೋಷ್ಟಕದ ಸಹಾಯದಿಂದ ಕಾಡುಗೊಲ್ಲರ ತಾಲ್ಲೂಕುವಾರು ಮತ್ತು ಲಿಂಗವಾರು ಕಾಡುಗೊಲ್ಲರು ಸಾಕ್ಷರರ್ಹರು ಮತ್ತು ಸಾಕ್ಷರಸ್ಥರು ಹಾಗೂ ಅನಕ್ಷರಸ್ಥರ ಪ್ರಮಾಣವನ್ನು ಸಮೀಕ್ಷೆಗೊಳಪಡಿಸಿದಾಗ ಈ ಕೆಳಕಂಡ ಮಾಹಿತಿ ಲಭ್ಯವಾಗುತ್ತದೆ. ಒಟ್ಟು ೧೯೯೧ ಕುಟುಂಬಗಳನ್ನು ಶೈಕ್ಷಣಿಕತೆಗೆ ಸಂಬಂಧಿಸಿದಂತೆ ಚಿತ್ರದುರ್ಗ ತಾಲ್ಲೂಕುವಾರು ಸಮೀಕ್ಷೆ ಮಾಡಿದಾಗ ದೊರೆತಂತಹ ಮಾಹಿತಿಯನ್ನು ನೀಡಲಾಗಿದ್ದು, ಯಾವ ಯಾವ ತಾಲ್ಲೂಕುಗಳಲ್ಲಿ ಯಾವ ಪ್ರಮಾಣದಲ್ಲಿ ಶೈಕ್ಷಣಿಕವಾಗಿ ಮುಂದುವರಿದಿದ್ದಾರೆ ಎಂಬುದನ್ನು ಈ ಕೋಷ್ಟಕದ ಸಹಾಯದಿಂದ ತಿಳಿಯಲಾಗಿದೆ.

ಶಿಕ್ಷಣವು ಯಾವುದೇ ಸಮುದಾಯದ ಆರ್ಥಿಕ ಅಭಿವೃದ್ಧಿಗೆ ಅತ್ಯಂತ ಅವಶ್ಯಕವಾಗಿ ಬೇಕಾಗುತ್ತದೆ. ಸಮುದಾಯದ ಶೈಕ್ಷಣಿಕ ಸ್ಥಿತಿ ಉತ್ತಮವಾಗಿಲ್ಲದೇ ಹೋದಲ್ಲಿ ಎಷ್ಟು ಬಂಡವಾಳವಿದ್ದರೂ ಸಹ ಉತ್ಪಾದನಾ ವ್ಯವಸ್ಥೆಯನ್ನು ಉತ್ತಮಪಡಿಸಲು ಸಾಧ್ಯವಿರುವುದಿಲ್ಲ. ಕಾರಣ ಉತ್ಪಾದನಾ ತಂತ್ರವನ್ನು ಅಳೆಯಲು ಶಿಕ್ಷಣವು ಒಂದು ಮಾಪನವಾಗಿರುತ್ತದೆ. ಇಂತಹ ಮಾಪನವೇ ಸರಿಯಲ್ಲವಾದಲ್ಲಿ ಆರ್ಥಿಕ ವ್ಯವಸ್ಥೆಗೆ ಸರಿಯಾದ ಬುನಾದಿಯೇ ಇಲ್ಲವಾದಂತಾಗುತ್ತದೆ. ಹಾಗೆಯೇ ಕಾಡುಗೊಲ್ಲ ಸಮುದಾಯವು ಇದಕ್ಕೆ ಹೊರತಾಗಿಲ್ಲ. ಕಾಡುಗೊಲ್ಲ ಸಮುದಾಯದಲ್ಲಿ ಈ ಕೆಳಗಿನ ನನ್ನ ಕ್ಷೇತ್ರಕಾರ್ಯದ ಸಮೀಕ್ಷೆಯಂತೆ ಕೋಷ್ಟಕ ೪.೭ರಲ್ಲಿ ಕಾಡುಗೊಲ್ಲ ಸಮೀಕ್ಷಾ ಕುಟುಂಬಗಳನ್ನು ತಾಲ್ಲೂಕುವಾರು ಸಾಕ್ಷರರ್ಹರು, ಸಾಕ್ಷರಸ್ಥರು ಹಾಗೂ ಅನಕ್ಷರಸ್ಥರು ಎಂದು ಈ ಕೆಳಕಂಡಂತೆ ತಿಳಿದುಕೊಳ್ಳಲಾಗಿದೆ.

## ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲ್ಲೂಕುವಾರು, ಲಿಂಗವಾರು ಶೈಕ್ಷಣಿಕ ಪ್ರಮಾಣ

### ಕೋಷ್ಟಕ ೪.೭.

| ಕ್ರ.ಸಂ. | ತಾಲ್ಲೂಕುಗಳು | ಕುಟುಂಬಗಳು | ಸಾಕ್ಷರರ್ಹರು | | | ಸಾಕ್ಷರಸ್ಥರು | | | ಅನಕ್ಷರಸ್ಥರು | | |
|---|---|---|---|---|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಚಳ್ಳಕೆರೆ | ೨೯೫ | ೬೦೫ | ೫೩೭ | ೧೧೪೨ | ೪೨೦ | ೨೬೪ | ೬೮೪ | ೧೮೫ | ೨೭೩ | ೪೫೮ |
| ೨ | ಚಿತ್ರದುರ್ಗ | ೧೯೯ | ೪೩೯ | ೩೯೭ | ೮೩೬ | ೩೩೬ | ೨೩೫ | ೫೭೧ | ೧೦೩ | ೧೬೨ | ೨೬೫ |
| ೩ | ಮೊಳಕಾಲ್ಮೂರು | ೮೨ | ೧೮೨ | ೧೭೦ | ೩೫೨ | ೧೫೧ | ೧೦೧ | ೨೫೨ | ೩೧ | ೬೯ | ೧೦೦ |
| ೪ | ಹಿರಿಯೂರು | ೪೨೮ | ೯೮೩ | ೮೫೯ | ೧೮೪೨ | ೬೭೧ | ೫೪೧ | ೧೨೧೨ | ೩೧೨ | ೩೧೮ | ೬೩೦ |
| ೫ | ಹೊಸದುರ್ಗ | ೧೫೮ | ೩೩೦ | ೨೯೬ | ೬೨೬ | ೩೦೬ | ೨೨೧ | ೫೨೭ | ೨೪ | ೭೫ | ೯೯ |
| ೬ | ಹೊಳಲ್ಕೆರೆ | ೨೨೯ | ೫೦೧ | ೪೧೦ | ೯೧೧ | ೨೮೮ | ೨೦೪ | ೪೯೨ | ೨೧೩ | ೨೦೬ | ೪೧೯ |
| | ಒಟ್ಟು | ೧೩೯೧ | ೩೦೪೦ | ೨೬೬೯ | ೫೭೦೯ | ೨೧೭೨ | ೧೫೬೬ | ೩೭೩೮ | ೮೬೮ | ೧೧೦೩ | ೧೯೭೧ |




ಬ್ರಿಟಿಷರ ವಸಾಹತು ನೀತಿಯಲ್ಲಿ ಇಂಗ್ಲಿಷ್ ಶಿಕ್ಷಣಪದ್ಧತಿಯ ಜಾರಿಯು ಒಂದಾಗಿದ್ದು, ಮೊದಲ ಬಾರಿಗೆ ಲಾರ್ಡ್ ಮೆಕಾಲೆ ವರದಿಯ ಅನ್ವಯ ಭಾರತದಲ್ಲಿ ಶಿಕ್ಷಣವ್ಯವಸ್ಥೆಯು ಇಂಗ್ಲಿಷ್ ಮಾಧ್ಯಮದ ಮೂಲಕ ಜಾರಿಯಾಗಬೇಕೆಂದು ಭಾರತೀಯ ಕೆಲವು ಬುದ್ಧಿಜೀವಿಗಳ ಒತ್ತಾಸೆಯಿಂದ ಕಾರ್ಯರೂಪಕ್ಕೆ ತರಲಾಯಿತು. ಇದರಿಂದ ತಳಸಮುದಾಯಗಳು ಶಿಕ್ಷಣ ಪಡೆದು ತಮ್ಮ ವಿರುದ್ಧ ನೆರೆಯವರ ಪ್ರಬಲ ವರ್ಗಗಳ ಷಡ್ಯಂತ್ರಗಳು, ಅನ್ಯಾಯಗಳ ಕುರಿತಾಗಿ ಧ್ವನಿ ಎತ್ತಲು ಸಹಾಯಕವಾಯಿತು. ಈ ಮೂಲಕವಾಗಿ ಸಂವಿಧಾನಬದ್ಧವಾಗಿ ತಮಗೆ ದೊರೆಯಬಹುದಾದ ಹಕ್ಕುಗಳ ಕುರಿತು ಸಂಘಟನೆ ಹೋರಾಟಗಳು ಆರಂಭವಾದವು. ಈ ಹಿನ್ನೆಲೆಯಲ್ಲಿ ಇಂಗ್ಲಿಷ್ ಶಿಕ್ಷಣವು ತಳ ಸಮುದಾಯಗಳ ಏಳಿಗೆಗೆ ವರವಾಯಿತು ಎಂದು ಹೇಳಬಹುದಾಗಿದೆ. ಸಾಂಪ್ರದಾಯಿಕ ಶಿಕ್ಷಣವ್ಯವಸ್ಥೆಯನ್ನೆ ಆಧುನೀಕರಿಸಿ ಪ್ರಾಥಮಿಕ, ಮಾಧ್ಯಮಿಕ, ಉನ್ನತ ಶಿಕ್ಷಣವೆಂದು ವರ್ಗೀಕರಿಸಲಾಯಿತು. ಈ ಹಂತದ ಶಿಕ್ಷಣದ ರೂಪರೇಷೆಯ ಕುರಿತಾಗಿ ಕೊಠಾರಿ ಆಯೋಗ, ಮೊದಲಿಯಾರ್ ಆಯೋಗ ಹಾಗೂ ರಾಧಾಕೃಷ್ಣನ್ ಆಯೋಗಗಳು ರೂಪಿಸಿದವು. ಇವರ ಸಲಹೆಗಳು ಮುಂದೆ ಕಾನೂನುಗಳ ರಚನೆಗೆ ಸಹಾಯಕವಾಗಿ

ಔಪಚಾರಿಕ ಶಿಕ್ಷಣ ವ್ಯವಸ್ಥೆ ಜಾರಿಯಾಯಿತು. ಒಂದು ಸಾಂಸ್ಥಿಕ ರೂಪ ಪಡೆದ ಶಿಕ್ಷಣ ಪದ್ಧತಿಯು ಇಂದು ದೇಶಾದ್ಯಂತ ವಿಸ್ತರಿಸಿದ್ದು, ಸಂವಿಧಾನಾತ್ಮಕವಾಗಿ ಸಮವರ್ತಿ ಪಟ್ಟಿಯಲ್ಲಿ ಸ್ಥಾನ ಪಡೆದಿದೆ. ರಾಜ್ಯ ಮತ್ತು ಕೇಂದ್ರಗಳ ಸಹಯೋಗದೊಂದಿಗೆ ಶಿಕ್ಷಣದ ಕುರಿತಾಗಿ ರೂಪುರೇಷೆ ಕಾನೂನು ರಚಿಸಲಾಗುತ್ತಿದೆ. ೬ನೇ ವಯಸ್ಸಿಗೆ ಬಂದ ಮಗುವು ಪ್ರಾಥಮಿಕ ಶಾಲೆಯ ೧ನೇ ತರಗತಿಗೆ ದಾಖಲಾಗುವ ಮೂಲಕ ೫ನೇ ತರಗತಿವರೆಗೆ ಪ್ರಾಥಮಿಕ ಶಿಕ್ಷಣವನ್ನು ಪಡೆಯುವುದು. ೬-೮ನೇ ತರಗತಿ ಮಾಧ್ಯಮಿಕ ಹಂತವೆಂದು, ೮-೧೦ನೇ ತರಗತಿಯನ್ನು ಪ್ರೌಢಹಂತವೆಂದು, ೧೧-೧೨ ಪದವಿಪೂರ್ವ ಹಂತ, ನಂತರ ಶಿಕ್ಷಣ ಪದವಿ ಹಾಗೂ ಸ್ನಾತಕೋತ್ತರ ಪದವಿ ಎಂದು ಶಿಕ್ಷಣದ ಹಂತಗಳನ್ನು ವರ್ಗೀಕರಿಸಲಾಗಿದೆ.

ಈ ಕೆಳಗಿನ ಕ್ಷೇತ್ರಕಾರ್ಯ ಸಮೀಕ್ಷೆಯಂತೆ ಈ ಕೋಷ್ಟಕದಿಂದ ಶೈಕ್ಷಣಿಕ ಹಂತದ ಕಾಡುಗೊಲ್ಲರ ಶೈಕ್ಷಣಿಕ ಪ್ರಮಾಣವನ್ನು ನೋಡಬಹುದು. ಲಿಂಗವಾರು ಶೈಕ್ಷಣಿಕ ಪ್ರಮಾಣದ ಹಂತ ಯಾವ ರೀತಿಯಾಗಿದೆ ಎಂದು ಈ ಸಮೀಕ್ಷೆಯಿಂದ ತಿಳಿದುಕೊಳ್ಳಬಹುದು. ಈ ಕೆಳಕಂಡಂತೆ ಕಾಡುಗೊಲ್ಲರಲ್ಲಿ ವಿವಿಧ ಶೈಕ್ಷಣಿಕ ಹಂತದ ಶಿಕ್ಷಣ ಪಡೆದವರ ಲಿಂಗವಾರು ಶೈಕ್ಷಣಿಕ ಪ್ರಮಾಣವನ್ನು ಕಾಣಬಹುದು. ಇಲ್ಲಿ ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲ ಹಂತ, ಡಿಪ್ಲೊಮಾ, ಪದವಿಪೂರ್ವ, ಪದವಿ, ಸ್ನಾತಕೋತ್ತರ ಮತ್ತು ಇತರೆ ಶೈಕ್ಷಣಿಕ ಹಂತಗಳಲ್ಲಿ ಕಾಡುಗೊಲ್ಲ ಸಮುದಾಯ ಪಡೆದಿರುವ ಶಿಕ್ಷಣವನ್ನು ಲಿಂಗವಾರು ಗಂಡು ಮತ್ತು ಹೆಣ್ಣು ಯಾವ ಶೈಕ್ಷಣಿಕ ಹಂತವನ್ನು ಪೂರೈಸಿದ್ದಾರೆಂದು ಈ ಕೋಷ್ಟಕದಲ್ಲಿ ಸಮೀಕ್ಷೆಯಂತೆ ಗಂಡಿಗೆ ಹೋಲಿಸಿದರೆ ಕಾಡುಗೊಲ್ಲ ಸಮುದಾಯದ ಹೆಣ್ಣುಮಕ್ಕಳು ಶೇಕಡವಾರು ಕಡಿಮೆ. ಇದನ್ನು ಈ ಕೆಳಗಿನ ಕೋಷ್ಟಕ ೪.೮.ರಲ್ಲಿ ನೋಡಬಹುದು.

**ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ಲಿಂಗವಾರು ಶೈಕ್ಷಣಿಕ ಪ್ರಮಾಣ**

| **ಕೋಷ್ಟಕ ೪.೮.** | | | | |
|---|---|---|---|---|
| ಶೈಕ್ಷಣಿಕ ಹಂತ | ಗಂಡು | ಹೆಣ್ಣು | ಒಟ್ಟು | |
| ಪ್ರಾಥಮಿಕ | ೫೦೭ | ೪೦೭ | ೯೧೫ | ೨೪.೪೮ |
| ಮಾಧ್ಯಮಿಕ | ೩೮೮ | ೩೦೩ | ೬೯೧ | ೧೮.೪೯ |
| ಪ್ರೌಢಶಾಲೆ | ೫೨೯ | ೪೪೩ | ೯೫೨ | ೨೫.೪೭ |
| ಡಿಪ್ಲೊಮಾ | ೮೪ | ೩೦ | ೧೧೪ | ೩.೦೫ |
| ಪದವಿಪೂರ್ವ | ೩೩೭ | ೨೩೭ | ೫೭೪ | ೧೫.೩೬ |
| ಪದವಿ | ೨೦೭ | ೯೪ | ೩೦೧ | ೮.೦೫೨ |

| ಸ್ನಾತಕೋತ್ತರ | ೧೧೯ | ೩೯ | ೧೫೮ | ೩.೯೫೯ |
|---|---|---|---|---|
| ಇತರೆ | ೩೧ | ೧೩ | ೪೪ | ೧.೧೭೭ |
| **ಒಟ್ಟು** | ೨೧೭೨ | ೧೫೬೬ | ೩೭೩೮ | |




ಅಕ್ಷರಸ್ಥರಾದ ೩೭೩೮ ಜನರಲ್ಲಿ ೨೧೭೨ ಗಂಡು ೧೫೬೬ ಹೆಣ್ಣು ಜನರಿದ್ದಾರೆ. ಇದರಲ್ಲಿ ೯೧೫ ಜನರು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದಾರೆ. ಸಾಕ್ಷರತೆ ಪಡೆದ ಜನರಲ್ಲಿ ದ್ವಿತೀಯ ಸ್ಥಾನದಲ್ಲಿದ್ದಾರೆ. ಮೊದಲನೇ ಸ್ಥಾನದಲ್ಲಿ ಪ್ರೌಢಶಿಕ್ಷಣ ಪಡೆದವರಿದ್ದಾರೆ. ಅಂದರೆ ೩೭೩೮ರಲ್ಲಿ ೯೫೨ ಜನರಿದ್ದಾರೆ. ಪ್ರೌಢಶಾಲಾ ಶಿಕ್ಷಣ ಪೂರೈಸಿ ಮುಂದುವರಿಸಿರುವವರಲ್ಲಿ ಡಿಪ್ಲೊಮೋ ಶಿಕ್ಷಣ ಪಡೆದವರು ೧೧೪ ಜನರು ಹಾಗೂ ಪಿಯುಸಿ ಶಿಕ್ಷಣ ಪಡೆದವರು ೫೭೪ ಜನರಿದ್ದಾರೆ. ಇನ್ನುಳಿದಂತೆ ಪದವಿ ಶಿಕ್ಷಣ ಪಡೆದವರು ೩೦೧ ಅಂದರೆ ಶೇಕಡ ೮% ಇದ್ದಾರೆ. ಪದವಿ ಮುಗಿಸಿ ಸ್ನಾತಕೋತ್ತರ ಪದವಿ ಪಡೆದವರು ೧೫೮ ಜನರಿದ್ದಾರೆ. ಇದರಲ್ಲಿ ೧೧೯ ಪುರುಷರು ಹಾಗೂ ೩೯ ಜನ ಮಹಿಳೆಯರಿದ್ದಾರೆ. ಇದರಿಂದ ಗ್ರಹಿಸುವುದಾದರೆ ಉನ್ನತ ಶಿಕ್ಷಣ ಪಡೆಯುತ್ತಿರುವುದರಲ್ಲಿ ಸ್ತ್ರೀಯರ ಪ್ರಮಾಣ ಇಳಿಮುಖವಾಗುತ್ತಿದೆ ಎಂದು ತಿಳಿಯಬಹುದು. ಕಾರಣ ಹೇಳುವುದಾದರೆ, ಯೌವ್ವನಾವಸ್ಥೆಯ ಮಕ್ಕಳನ್ನು ವಿವಾಹ ಬಂಧಕ್ಕೆ ಒಳಪಡಿಸುವುದು. ವಿವಾಹವಾದರೂ ಓದಲು ಮಹಿಳೆಯರಿಗೆ ಅವಕಾಶ ನೀಡದೆ ಕೇವಲ ಮಕ್ಕಳ ಲಾಲನೆ ಪಾಲನೆಗೆ ಸೀಮಿತಗೊಳಿಸುವುದು ಕಂಡುಬರುತ್ತದೆ. ಹಾಗೂ ಮಹಿಳೆ ಶಿಕ್ಷಣದ ಮಹತ್ವದ ಬಗ್ಗೆ ಅರಿವು ಇಲ್ಲದಿರುವುದು ಕಾರಣವಾಗಿರಬಹುದು.

ಕೋಷ್ಟಕ ೪.೮ರ ಪ್ರಕಾರವಾಗಿ ೨೫ % ಪ್ರೌಢಶಾಲಾ ಶಿಕ್ಷಣ ಪಡೆದವರು, ೨೪.೪೮ % ಪ್ರಾಥಮಿಕ ಶಿಕ್ಷಣ, ೧೫% ಪದವಿ ಶಿಕ್ಷಣ ಪಡೆದವರು ಅಧಿಕ ಸಂಖ್ಯೆಯಲ್ಲಿರುವರು. ಇದಕ್ಕೆ ಸರ್ವಶಿಕ್ಷಣ ಅಭಿಯಾನ, ಮರಳಿಬಾ ಶಾಲೆಗೆ, ಸಮುದಾಯದತ್ತ ಶಾಲೆ, ಅಕ್ಷರದಾಸೋಹ ಇತ್ಯಾದಿ ಸರ್ಕಾರಿ ಕಾರ್ಯಕ್ರಮಗಳ ಆಕರ್ಷಣೆ ಮತ್ತು ಸರ್ಕಾರಿ ಸೌಲಭ್ಯಗಳು ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕೆಂಬ ಪೋಷಕರ ಬದಲಾದ ಮನಸ್ಥಿತಿಗಳು ಶಿಕ್ಷಣದ ಪ್ರಮಾಣದಲ್ಲಿ ಏರಿಕೆಯಾಗಲು ಕಾರಣವಾಗಿದೆ. ಇತರೆ ಮುಂದುವರಿದ ಸಮುದಾಯಗಳು ಶಿಕ್ಷಣದಿಂದ ಹೇಗೆ ಮುಂದುವರಿದಿದ್ದಾರೆ ಎಂದು ಅರಿತು ಅವರನ್ನು ಅನುಕರಿಸಿ ನಾವು ಸಹ ಅವರಂತೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಅವರಂತಹ ಸ್ಥಾನಮಾನ ಪಡೆಯಬೇಕು ಎಂಬ ವಿಚಿತ್ರ ಮನಸ್ಥಿತಿಗಳು ಇವರನ್ನು ಹೆಚ್ಚು ಶಿಕ್ಷಿತರನ್ನಾಗಿಸುತ್ತದೆ.

### ೪.೧೧. ಕಾಡುಗೊಲ್ಲರ ವಾಸದ ಮನೆಗಳು

ಮೂಲತಃ ಕರ್ನಾಟಕದ ಬುಡಕಟ್ಟು ಜನಾಂಗಗಳಲ್ಲಿ ಒಂದಾದ ಕಾಡುಗೊಲ್ಲ ಸಮುದಾಯವು ವಾಸಿಸಲು ಆಯ್ಕೆ ಮಾಡಿಕೊಳ್ಳುವ ಭೌಗೋಳಿಕ ಇತರೆ ಜನಾಂಗದ ಭೌಗೋಳಿಕ ಪರಿಸರವು ಪರಿಸರಕ್ಕಿಂತ ಭಿನ್ನವಾಗಿರುತ್ತದೆ. ಸಾಮಾನ್ಯವಾಗಿ ಇವರು ಕುರುಚಲು ಕಾಡುಗಳಿಂದ ಆವೃತವಾದ ಹುಲ್ಲುಗಾವಲು ಆಧಾರಿತ ಕಣಿವೆ ಪ್ರದೇಶದಲ್ಲಿ ಹೆಚ್ಚಾಗಿ ನೆಲೆಯೂರಿರುವುದನ್ನು ಕಾಣಬಹುದು. ಇಂತಹ ಆಯಕಟ್ಟಿನ ಪ್ರದೇಶದಲ್ಲಿ ಇತರೆ ಜನಾಂಗದವರು ವಾಸಿಸುವ ಊರುಗಳಿಂದ ಪ್ರತ್ಯೇಕಿತರಾಗಿ ಊರ ಹೊರವಲಯಗಳಲ್ಲಿ ತಮ್ಮ ಸಾಮಾಜಿಕ ನೆಲೆಯನ್ನು ಕಟ್ಟಿಕೊಂಡು ಜೀವನ ನಡೆಸುತ್ತಾರೆ. ಈ ಸಮುದಾಯಗಳು ವಾಸಿಸುವ ಪ್ರದೇಶಗಳನ್ನು ಹಟ್ಟಿ ಎಂದು ಕರೆಯುತ್ತಾರೆ. ಇವರು ಎಲ್ಲಾ ರೀತಿಯ ಅವಶ್ಯಕತೆಗಳಿಗೂ ತಮ್ಮ ಹಟ್ಟಿಯನ್ನೇ ಅವಲಂಬಿಸಿಕೊಂಡಿರುತ್ತಾರೆ. ಇವರ ಹಟ್ಟಿಗಳು ಮೂಲಭೂತ ಸೌಕರ್ಯಗಳ ಕೊರತೆಯ ಆಗರಗಳಾಗಿವೆ. ಇನ್ನು ಇವರ ಗೃಹ ಚಿತ್ರಣವನ್ನು ನೋಡುವುದಾದರೆ ಪ್ರಾಣಿಗಳೂ ವಾಸಿಸಲು ಆಗದಂತಹ ಉಸಿರು ಕಟ್ಟಿದ ವಾತಾವರಣ ಇರುವ ಮನೆಗಳ ರಚನೆಗಳು ಕಂಡುಬರುತ್ತವೆ. ಪ್ರಾಚೀನ ಕಾಲದಲ್ಲಿ ಕಾಡುಗೊಲ್ಲರ ಮೂಲಸ್ಥಾನ ಕಾಡು. ಏಕೆಂದರೆ ಇವರು ಬುಡಕಟ್ಟು ಸಂಸ್ಕೃತಿಯಿಂದ ಬಂದವರಾಗಿರುತ್ತಾರೆ. ಕಾಡುಗೊಲ್ಲರು ಪಶುಪಾಲಕರಾಗಿರುವುದರಿಂದ ಅಲೆಮಾರಿಗಳು, ಹಾಗೂ ಅರೆ ಅಲೆಮಾರಿಗಳೆಂದು ಗುರುತಿಸಬಹುದು. ನಿರಂತರವಾಗಿ ವಲಸೆ ಪ್ರವೃತ್ತಿಯಲ್ಲಿರುವ ಇವರು ಪ್ರಕೃತಿ ಆಶ್ರಿತರು. ಹಾಗಾಗಿ ಪ್ರಕೃತಿಯಲ್ಲಿಯೇ ದೊರೆಯುವ ವಸ್ತುಗಳಿಂದ ತಮ್ಮ ಮನೆಗಳನ್ನು ನಿರ್ಮಿಸಿಕೊಳ್ಳುತ್ತಾರೆ ಸಾಮಾನ್ಯವಾಗಿ ಚಿತ್ರದುರ್ಗ, ತುಮಕೂರು ಹಾಗೂ ಬಳ್ಳಾರಿ ಈ ಮೂರು ಜಿಲ್ಲೆಗಳ ಬಯಲುಪ್ರದೇಶಗಳಲ್ಲಿ ಕುರುಚಲು ಕಾಡುಗಳು ಮಾತ್ರ ಬೆಳೆದಿರುತ್ತವೆ. ಆ ಕಾಡಿನಲ್ಲಿ ದೊರೆಯುವ ವಸ್ತುಗಳಿಂದ ತಮ್ಮ ಮನೆಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಕಾಡುಗೊಲ್ಲರ ಆದಾಯ ತುಂಬಾ ಕಡಿಮೆ ಇರುವ ಕಾರಣದಿಂದ ಪ್ರಕೃತಿಯಲ್ಲಿ ದೊರೆಯುವ ವಸ್ತುಗಳಿಂದಲೇ ತಮ್ಮ ಮನೆಯನ್ನು ನಿರ್ಮಿಸುತ್ತಾರೆ. ಹಿಂದೆ ಕಾಡುಗೊಲ್ಲರು ತಮ್ಮ ಮನೆಗಳನ್ನು ಗುಬ್ಬಗಳ ರೀತಿಯಲ್ಲಿ

ಕಟ್ಟಿಕೊಳ್ಳುತ್ತಿದ್ದರು. ಊರಿನ ಮಧ್ಯ ಭಾಗದಲ್ಲಿ ಅವರ ಮನೆದೇವರ ಗುಡಿ ಇರುತ್ತದೆ. ಕಾಡುಗೊಲ್ಲರ ಮನೆಗಳಿಗೂ ಹಾಗೂ ದೇವಾಲಯಗಳಿಗೂ ಅಂತಹ ವ್ಯತ್ಯಾಸ ಕಂಡುಬರುವುದಿಲ್ಲ. ಗೋಡೆಗಾಗಿ ಲಂಟಾನ ಗಿಡಗಳ ತಡಿಕೆಗಳನ್ನು ಮಾಡುತ್ತಿದ್ದರು. ಹೀಗೆ ಅದರ ಬದಲಾಗಿ ತೆಂಗಿನ ಗರಿಯನ್ನು ಬಳಸುತ್ತಿದ್ದಾರೆ. ಮೇಲೆ ಹೊದಿಕೆಗೆ ಮುದಕದ ಮರದ ಎಲೆಗಳು ಇಲ್ಲವೆ ಹಂಚಿನ ಹುಲ್ಲಿನ ಕಡ್ಡಿ ಇಲ್ಲವೆ ಹಾಪುಗಳನ್ನು ಬಳಸುತ್ತಿದ್ದರು. ಅವರ ಮನೆಗಳ ಆಕಾರ ವೃತ್ತಾಕಾರವಾಗಿರುತ್ತಿದ್ದವು. ಆ ಮನೆಗಳಿಗೆ ಬೆಲುಗುಗಳಾಗಿ ಈಚಲು ಮರಗಳನ್ನು ಬಳಸಿಕೊಳ್ಳುತ್ತಾರೆ. ಕಾಡುಗೊಲ್ಲರ ಹಟ್ಟಿಗಳಲ್ಲಿರುವ ಮನೆಗಳ ಸಂಖ್ಯೆ ೨೫-೧೦೦ ಮಾತ್ರ ಇರುತ್ತವೆ ಇವರ ಹಟ್ಟಿಗಳಿಗೆ ದಾರಿಗಳೇ ಇರುವುದಿಲ್ಲ. ಏಕೆಂದರೆ ಇವರು ನಾಗರಿಕ ಸಮಾಜದಿಂದ ದೂರ ಉಳಿಯಲು ಇಷ್ಟ ಪಡುತ್ತಾರೆ. ಅಷ್ಟೇ ಅಲ್ಲ, ಇವರ ಹಟ್ಟಿಗಳ ಸುತ್ತಲೂ ಪಾರಿಬೇಲಿ ಹಾಕಿಕೊಂಡಿರುತ್ತಾರೆ. ಯಾಕೆಂದರೆ ಇವರು ಪಶುಪಾಲಕರು. ಹಾಗಾಗಿ ಅವರು ಪಶುಗಳನ್ನು ಸಂರಕ್ಷಣೆ ಮಾಡಿಕೊಳ್ಳಲು ಅವರಿಗಿರುವುದು ಅದೊಂದೆ ದಾರಿ. ಅಷ್ಟಲ್ಲದೆ ತಮ್ಮ ದೇವಾಲಯದ ಸುತ್ತಲು ಕಳ್ಳೆ ಬೇಲಿಯನ್ನು ಹಾಕಿಕೊಂಡಿರುತ್ತಾರೆ. ತಮ್ಮ ದೇವರುಗಳಿಗೆ ಮಡಿ ಮೈಲಿಗೆ ಆಗಬಾರದೆಂಬ ಕಾರಣದಿಂದ ಎಷ್ಟೋ ವರ್ಷಗಳ ಕಾಲ ಕಾಡುಗೊಲ್ಲರ ದೇವಾಲಯಗಳು ಕಾಂಪೌಂಡ್ ಕಂಡಿರಲಿಲ್ಲ. ಇತ್ತೀಚೆಗೆ ಕೆಲವೇ ಕೆಲವು ದೇವರುಗಳಿಗೆ ದೇವಾಲಯ ಕಟ್ಟಿದ್ದಾರೆ. ಅದೇ ರೀತಿ ಕಾಂಪೌಂಡ್ ಕಟ್ಟಿಸಿದ್ದಾರೆ. ಕಾಡುಗೊಲ್ಲರು ಈ ರೀತಿ ಇರಲು ಕಾರಣ ಅವರು ಸಂಪ್ರದಾಯ ಶರಣರು, ಅನಕ್ಷರಸ್ತರು, ದೇವರು ದಿಂಡರುಗಳನ್ನು ಅತಿಯಾಗಿ ನಂಬಿದವರು. ದೇವರ ಹೆಸರು ಹೇಳಿಕೊಂಡು ಎಷ್ಟೋ ಯುವಕರು ಶಿಕ್ಷಣದಿಂದ ದೂರ ಸರಿಯುತ್ತಿದ್ದಾರೆ. ಇದು ಕೂಡ ಅವರು ಹಿಂದುಳಿಯಲು ಕಾರಣವಾಗುತ್ತದೆ.

**ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲೂಕುವಾರು ಹಾಗೂ ಕುಟುಂಬವಾರು ಮನೆಗಳ ಪ್ರಮಾಣ**

**ಕೋಷ್ಟಕ ೪.೯.**

| ಕ್ರ.ಸಂ. | ತಾಲೂಕುಗಳು | ಕುಟುಂಬಗಳು | ಮನೆಗಳ ಮಾದರಿ | | | | | | |
|---|---|---|---|---|---|---|---|---|---|
| | | | ಗುಡಿಸಿಲು | ಟಿನ್ | ಮಾಳಿಗೆ | ಆರ್‌ಸಿಸಿ | ಹೆಂಚಿನ | ಜನತಾ | ಬಾಡಿಗೆ |
| ೧. | ಚಳ್ಳಕೆರೆ | ೨೯೫ | ೪೩ | ೯ | ೧೫೬ | ೨೮ | ೫೨ | ೨ | ೫ |
| ೨. | ಚಿತ್ರದುರ್ಗ | ೧೯೯ | ೩೮ | ೧೧ | ೬೫ | ೨೦ | ೪೪ | ೨೧ | |
| ೩. | ಮೊಳಕಾಲ್ಮೂರು | ೮೨ | ೬ | ೧ | ೪೮ | ೧೨ | ೧೨ | ೧ | ೨ |
| ೪. | ಹಿರಿಯೂರು | ೪೨೮ | ೩೮ | ೧೭ | ೯೯ | ೫೩ | ೨೧೫ | ೩ | ೩ |
| ೫. | ಹೊಸದುರ್ಗ | ೧೫೮ | ೩೯ | ೧ | ೨೯ | ೩೩ | ೪೭ | ೯ | |
| ೬. | ಹೊಳಲ್ಕೆರೆ | ೨೨೯ | ೧೪ | ೦ | ೧ | ೧೮ | ೧೯೩ | ೧ | ೨ |
| | ಒಟ್ಟು | ೧೩೯೧ | ೧೭೮ | ೩೯ | ೩೯೮ | ೧೬೪ | ೫೬೩ | ೩೭ | ೧೨ |




ಒಂಟಿಯಾಗಿದ್ದ ಮಾನವ ಗುಂಪುಜೀವನಕ್ಕೆ ಕಾಲಿಟ್ಟಾಗ ಅವನ ಬದುಕುತ್ತಿದ್ದ ಮರದ ಪೊಟರೆಗಳ ವಾಸಸ್ಥಾನವು ಬದಲಾಯಿತು. ಜೊತೆಗೆ ಬಂಧುತ್ವ ಪರಿಕಲ್ಪನೆ ಬೆಳೆಯಿತು. ಶಕ್ತಿಯುತನಾಗಿದ್ದ ಮಾನವ ದುರ್ಬಲ ವ್ಯಕ್ತಿಗಳ ಜೀವನ ಜವಾಬ್ದಾರಿಯನ್ನು ವಹಿಸಿಕೊಂಡು ಕುಟುಂಬ ಎಂಬ ಪರಿಕಲ್ಪನೆ ಬೆಳೆಯಿತು. ಈ ಕುಟುಂಬಗಳು ತಮ್ಮ ಸದಸ್ಯರನ್ನು ಪ್ರಕೃತಿಯ ಸಹಜ ಪ್ರಕ್ರಿಯೆಗಳಿಂದ ಮಳೆ ಪ್ರವಾಹ ಬಿಸಿಲು ಇತ್ಯಾದಿಗಳಿಂದ ರಕ್ಷಿಸಿಕೊಳ್ಳಲು ಋತುಮಾನಕ್ಕೆ ಅನುಗುಣವಾಗಿ ತಮ್ಮ ನೆಲೆಯನ್ನು ಕಂಡುಕೊಂಡರು. ಇದರ ಪರಿಣಾಮವಾಗಿ ಅವರವರ ಆರ್ಥಿಕತೆ ಮತ್ತು ದೊರೆಯುವ ಕಚ್ಚಾ ಸಾಮಗ್ರಿಗಳಿಗೆ ಅನುಗುಣವಾಗಿ ಮನೆಯ ನಿರ್ಮಾಣವಾಗತೊಡಗಿತು. ಪಶುಪಾಲನೆ ಅಲೆಮಾರಿಯಾಗಿದ್ದ ಕಾಡುಗೊಲ್ಲ ಸಮುದಾಯ ಆರಂಭದಲ್ಲಿ ಗುಡಿಸಿಲು ರೊಪ್ಪಗಳನ್ನು ರಚಿಸಿಕೊಂಡು ಜೀವಿಸುತ್ತಿದ್ದರು. ಅಲೆಮಾರಿ ಬದುಕಿಗೆ ವಿದಾಯ ಹೇಳಿ ಸ್ಥಿರ ನೆಲೆಯ ಬದುಕಿಗೆ ಒಗ್ಗಿಕೊಂಡಾಗ ಟಿನ್, ಮಾಳಿಗೆ, ಆರ್.ಸಿ.ಸಿ, ಹೆಂಚಿನ ಮನೆಯ ಮಾದರಿಗಳನ್ನು ಅವರ ಆರ್ಥಿಕ ಶಕ್ತಿಗೆ ಅನುಸಾರವಾಗಿ ಕಟ್ಟಿಕೊಂಡು ಜೀವನ ನಡೆಸುತ್ತಿದ್ದಾರೆ. ಇವರ ನೆಲೆಯ ಮಾದರಿಯನ್ನು ಕೋಷ್ಟಕ ೪.೯ ತಿಳಿಯಪಡಿಸುತ್ತದೆ.

ಚಿತ್ರದುರ್ಗ ಜಿಲ್ಲೆಯ ಆರು ತಾಲೂಕುಗಳಲ್ಲಿ ೧೩೫೧ ಕಾಡುಗೊಲ್ಲ ಸಮುದಾಯದ ಕುಟುಂಬಗಳಲ್ಲಿ ೧೭೮ ಗುಡಿಸಿಲು, ೩೯ ಟಿನ್ ಮನೆಗಳು, ೩೫೮ ಮಾಳಿಗೆ, ೧೬೪ ಆರ್.ಸಿ.ಸಿ, ೩೭ ಜನತಾಮನೆ ಮತ್ತು ೧೨ ಕುಟುಂಬಗಳು ಬಾಡಿಗೆ ಮನೆಗಳಲ್ಲಿ ವಾಸಿಸುತ್ತಿದ್ದಾರೆ. ಅತಿ ಹೆಚ್ಚು ಗುಡಿಸಿಲು ಮನೆಗಳು ಅಂದರೆ ೪೩ ಚಳ್ಳಕೆರೆ ತಾಲೂಕಿನಲ್ಲಿವೆ. ೧೭೮ ಗುಡಿಸಿಲು ಮನೆಯ ವಾಸದ ಕುಟುಂಬಗಳು ಇಂದಿಗೂ ಜೀವಂತವಾಗಿರುವುದು ವಿಪರ್ಯಾಸವೇ ಸರಿ. ಪ್ರಸ್ತುತ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಗುಡಿಸಿಲು ಮುಕ್ತ ರಾಜ್ಯವನ್ನಾಗಿಸಲು ವಿವಿಧ ರೀತಿಯ ಯೋಜನೆಗಳ ಮೂಲಕ ಮನೆಗಳ ನಿರ್ಮಾಣ ಕಾರ್ಯದಲ್ಲಿ ಗ್ರಾಮ ಪಂಚಾಯಿತಿಗಳ ಮೂಲಕವೇ ಕಾರ್ಯರೂಪಕ್ಕೆ ತರುತ್ತಿದ್ದು ಅವುಗಳ ಅನುಷ್ಠಾನದಲ್ಲಿ ತಾರತಮ್ಯ ಉಂಟಾಗುವುದು ಸರಿಯಾದ ಫಲಾನುಭವಿಗಳಿಗೆ ಯೋಜನೆ ದೊರೆಯದೇ ಗುಡಿಸಿಲಿನಲ್ಲಿಯೇ ವಾಸಿಸುವ ಪರಿಸ್ಥಿತಿ ಬರಲು ಕಾರಣವಾಗಿದೆ. ಅಲ್ಲದೇ ಕಾಡುಗೊಲ್ಲ ಸಮುದಾಯದಲ್ಲಿ ರಾಜಕೀಯವಾಗಿ ಭಾಗವಹಿಸುವವರಲ್ಲಿ ಹಿಂದುಳಿಕೆಯು ಒಂದು ಕಾರಣವಾಗಿರಬಹುದು. ಜಿಲ್ಲೆಯ ಒಟ್ಟು ೧೩೫೧ ಕುಟುಂಬಗಳಲ್ಲಿ ೩೫೮ ಕುಟುಂಬಗಳು ಮಾಳಿಗೆ ಮನೆಯಲ್ಲಿ ವಾಸಿಸುತ್ತಿರುವವರು. ಮಾಳಿಗೆ ಮನೆಯು ವಿಶಿಷ್ಟ ರಚನೆಯಿಂದ ತಮ್ಮದೇ ಆದ ಪಾರಂಪರಿಕ ಜ್ಞಾನದಿಂದ ರೂಪಿಸಿಕೊಂಡಿರುತ್ತಾರೆ. ಇಂತಹ ಮನೆಗಳು ಚಿತ್ರದುರ್ಗ ಜಿಲ್ಲೆಯ ವೈಶಿಷ್ಟಗಳಲ್ಲಿ ಒಂದಾಗಿದೆ. ಆರ್ಥಿಕವಾಗಿ ಮತ್ತು ಸರ್ಕಾರಿ ಸೌಲಭ್ಯ ಪಡೆಯುವಲ್ಲಿ ಶಕ್ತವಾಗಿರುವ ಜನರಲ್ಲಿ ೫೬೩ ಕುಟುಂಬಗಳು ಸರ್ಕಾರಿ ಸಹಯೋಗದೊಂದಿಗೆ ಹೆಂಚಿನ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಇವು ಆಧುನಿಕತೆಗೆ ಮುಖ ಮಾಡಿದ ಕುಟುಂಬಗಳೆಂದು ಹೇಳಬಹುದು. ಹಿರಿಯೂರಿನಲ್ಲಿ ಅಧಿಕ ಜನಸಂಖ್ಯೆ ಕಾಡುಗೊಲ್ಲರಾಗಿದ್ದು, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಡಿತ ಸಾಧಿಸಿದ್ದಾರೆ. ಇದರ ಪರಿಣಾಮವಾಗಿ ೫೩ ಆರ್.ಸಿ.ಸಿ. ಮನೆಗಳನ್ನು ಕಾಣಬಹುದಾಗಿದೆ. ಉಳಿದಂತೆ ಇತರೆ ಮುಂದುವರಿದ ಸಮುದಾಯಗಳೊಂದಿಗೆ ಸೇರಿ ಜೀವನವಿಧಾನ ಬದಲಿಸಿರುವ ಹೊಸದುರ್ಗ ತಾಲೂಕಿನ ಕಾಡುಗೊಲ್ಲ ಸಮುದಾಯದ ಕುಟುಂಬಗಳಲ್ಲಿ ೩೩ ಆರ್.ಸಿ.ಸಿ. ಮನೆಗಳನ್ನು ಹೊಂದಿದ್ದಾರೆ.

ಒಟ್ಟಾರೆಯಾಗಿ ಕೋಷ್ಟಕ ೪.೯ರ ಅನ್ವಯ ೪೦% ಹೆಂಚಿನ ಮನೆ, ೨೮% ಮಾಳಿಗೆ ಮನೆ, ೧೨% ಆರ್.ಸಿ.ಸಿ. ಮನೆ, ೧೩% ಗುಡಿಸಿಲು ೩% ಟಿನ್ ಮತ್ತು ಜನತಾ ಮನೆಗಳು, ಅಂತಿಮವಾಗಿ ೧% ಬಾಡಿಗೆ ಮನೆಯ ನಿವಾಸಿಗಳನ್ನು ಕಾಣುತ್ತೇವೆ. ಇಲ್ಲಿ ಗುಡಿಸಿಲಿನ ಪ್ರಮಾಣ ೧೩% ಇದ್ದು ಗುಡಿಸಿಲು ವಾಸಸ್ಥಾನವನ್ನು ನಿವಾರಿಸುವುದು ಸರ್ಕಾರ ಮತ್ತು ಜನಪ್ರತಿನಿಧಿಗಳ ಆದ್ಯ ಕರ್ತವ್ಯವಾಗಿದ್ದು ಅವುಗಳ ನಿವಾರಣೆಯಲ್ಲಿ ಸೂಕ್ತ ಕ್ರಮ ಕೈಗೊಳ್ಳಬೇಕಾಗಿದೆ.

**ಮಾಳಿಗೆ ಮನೆಗಳು:** ಗುಡಿಸಿಲು ಮುಕ್ತ ಕಾಡುಗೊಲ್ಲರ ಹಟ್ಟಿಗಳು ಎಂದು ಹೇಳಲು ಸಾಧ್ಯವಾಗಲ್ಲ. ಏಕೆಂದರೆ ಕಾಡುಗೊಲ್ಲರು ಇನ್ನೂ ಸಹ ಆರ್ಥಿಕವಾಗಿ ಸಬಲರಾಗಿಲ್ಲ. ಅಪರೂಪಕ್ಕೆಂಬಂತೆ ಕೆಲವೇ ಕೆಲವು ಮಂದಿ ಮಾತ್ರ ಭೂಮಿಯ ಒಡೆತನವನ್ನು ಹೊಂದಿದ್ದಾರೆ. ಇವರ ಆದಾಯದ ಮೂಲವೇ ಪಶುಪಾಲನೆ. ಎಲ್ಲಾ ಸಮುದಾಯದವರು ಕಾಂಕ್ರೀಟಿನ ಕಟ್ಟಡಗಳನ್ನು ಕಟ್ಟಿಕೊಳ್ಳುವ ಕಾಲದಲ್ಲಿ

ಕಾಡುಗೊಲ್ಲರು ಹಳೆ ಕಾಲದ ಮಾಳಿಗೆಯ ಮನೆಯನ್ನು ಕಟ್ಟಿಕೊಳ್ಳುತ್ತಿದ್ದಾರೆ. ಮಾಳಿಗೆ ಮನೆಗೆ ಹೆಚ್ಚು ಖರ್ಚು ಮಾಡುವ ಅವಶ್ಯಕತೆ ಇರುವುದಿಲ್ಲ. ತಮ್ಮಸುತ್ತ ಮುತ್ತು ದೊರೆಯುವ ಕಲ್ಲು ಮಣ್ಣುಗಳಿಂದ ಗೋಡೆಯನ್ನು ಕಟ್ಟಿಕೊಳ್ಳುತ್ತಾರೆ. ಮಾಳಿಗೆ ಮನೆಗೆ ಟೀರುಗಳಾಗಿ ಬೇವಿನ ಮರಗಳನ್ನು ಬಳಸುತ್ತಾರೆ ಹಾಗೂ ಕಂಬಗಳನ್ನು ಬೇವಿನ ಮರಗಳಿಂದ ಮಾಡಿಸುತ್ತಾರೆ. ಮಾಳಿಗೆ ಮನೆಗಳು ಆಯತಾ ಕಾರದಲ್ಲಿ ಇರುತ್ತವೆ.

ಮೇಲ್ಚಾವಣಿಗೆ ಕಡಪದ ಕಲ್ಲುಗಳನ್ನು ಇತ್ತೀಚೆಗೆ ಬಳಸುತ್ತಾರೆ. ಹಿಂದೆ ಈಚಲು ಮರದ ಹಲಗೆಗಳನ್ನು ಅಚ್ಚುಕಟ್ಟಾಗಿ ಹೊಂದಿಸಿ ಅದರ ಮೇಲೆ ಕರಲು (ಜೌಗು) ಮಣ್ಣು ಹಾಕುತ್ತಿದ್ದರು. ಹೊರಾಂಗಣದಲ್ಲಿ ಜಗತಿಗಳಿರುತ್ತಿದ್ದವು. ಏಕೆಂದರೆ ತಮ್ಮ ಸಮುದಾಯವಲ್ಲದವರು ಯಾರಾದರೂ ಬಂದರೆ ಜಗತಿಯ ಮಲೆ ಕುಳಿತುಕೊಳ್ಳಬೇಕಿತ್ತು. ಒಳಾಂಗಣ ವಿಶಾಲವಾಗಿದ್ದು ಒಂದು ಮೂಲೆಯಲ್ಲಿ ಒರಳುಕಲ್ಲು ಇರಲೇಬೇಕು. ಅಡುಗೆ ಕೋಣೆ ಕಿರಿದಾಗಿರುತ್ತಿತ್ತು ಹಾಗೂ ಹೊಗೆ ಹೊರಹೋಗಲು ಜಾಲಂದ್ರ ಮಾಡುತ್ತಿದ್ದರು. ಒಂದು ವಿಪರ್ಯಾಸವೆಂದರೆ ಎಷ್ಟೋ ಮಾಳಿಗೆ ಮನೆಗಳಿಗೆ ಕಿಟಕಿಗಳೇ ಇರುವುದಿಲ್ಲ. ಚಿತ್ರದುರ್ಗದಲ್ಲಿ ಸಮೀಕ್ಷೆ ಮಾಡಿದಂತಹ ಸಮಯದಲ್ಲಿ ಚಳ್ಳಕೆರೆ ತಾಲ್ಲೂಕಿನಲ್ಲಿ ಒಟ್ಟು ೨೯೫ ಕುಟುಂಬಗಳಲ್ಲಿ ೧೫೬ ಮಾಳಿಗೆ ಮನೆಗಳಿರುವುದು ಸಮೀಕ್ಷೆಯಿಂದ ದೃಢಪಟ್ಟಿದೆ. ಹಾಗೆಯೇ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೮೨ ಕುಟುಂಬಗಳಲ್ಲಿ ೬೫ ಮಾಳಿಗೆ ಮನೆಗಳಿವೆ. ಹಿರಿಯೂರು ತಾಲ್ಲೂಕಿನಲ್ಲಿ ೪೨೮ ಕುಟುಂಬಗಳಲ್ಲಿ ೯೯ ಮಾಳಿಗೆ ಮನೆಗಳಿವೆ. ಹೊಸದುರ್ಗ ತಾಲ್ಲೂಕಿನಲ್ಲಿ ೧೫೮ ಕುಟುಂಬಗಳಲ್ಲಿ ೨೯ ಮಾಳಿಗೆ ಮನೆಗಳಿವೆ. ಹೊಳಲ್ಕೆರೆ ತಾಲ್ಲೂಕಿನಲ್ಲಿ ೨೨೯ ಕುಟುಂಬಗಳಲ್ಲಿ ೧ ಮಾಳಿಗೆ ಮನೆಯಿದೆ. ಚಿತ್ರದುರ್ಗ ತಾಲ್ಲೂಕಿನಲ್ಲಿ ೧೯೯ ಕುಟುಂಬಗಳಲ್ಲಿ ೬೫ ಮಾಳಿಗೆ ಮನೆಗಳಿರುವುದು ಕಂಡುಬಂದಿದೆ.

**ಹಂಚಿನ ಮನೆಗಳು:** ಇತ್ತೀಚೆಗೆ ಕಾಡುಗೊಲ್ಲರ ಬದುಕು ಸ್ಥಿತ್ಯಂತರ ಹೊಂದುತ್ತಿದೆ. ಮಾಳಿಗೆ ಮನೆಗಳು ನಾಜೂಕಾಗಿ ಕಾಣುವುದಿಲ್ಲ ಎಂದು ತಿಳಿದು ಚಿತ್ರದುರ್ಗದ ಪಶ್ಚಿಮದಿಕ್ಕಿನಲ್ಲಿ ವಾಸವಾಗಿರುವ ಕಾಡುಗೊಲ್ಲರು ಮೊದಲು ಕರಿಹಂಚಿನ ಮನೆಗಳನ್ನು ಕಟ್ಟುತ್ತಿದ್ದರು. ಆನಂತರ ಆ ಮನೆಗಳು ನಾಜೂಕಾಗಿ ಕಾಣುವುದಿಲ್ಲ ಎಂದು ತಿಳಿದು ಕೆಂಪು ಹಂಚಿನ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ಈ ತರದ ಮನೆಯಿಂದ ಮಳೆಗಾಲದಲ್ಲಿ ಸ್ವಲ್ಪ ತೊಂದರೆ ಬಿಟ್ಟರೆ ಉಳಿದಂತೆ ಎಲ್ಲಾ ಕಾಲಗಳಿಗೂ ಹೊಂದಿಕೊಳ್ಳುತ್ತವೆ. ಹಂಚಿನ ಮನೆಗಳು ಗೋಪುರಾಕಾರದಲ್ಲಿ ಇರುತ್ತವೆ. ಹೊಳಲ್ಕೆರೆ ಹಾಗೂ ಹೊಸದುರ್ಗ ತಾಲ್ಲೂಕುಗಳಲ್ಲಿ ನೆಲಸಿರುವ ಕಾಡುಗೊಲ್ಲರು ಭೂ ಹಿಡುವಳಿದಾರರಾಗಿರುವುದರ ಜೊತೆಗೆ ವಾಣಿಜ್ಯ ಬೆಳೆಗಳಾದ ತೆಂಗು ಹಾಗೂ ಅಡಿಕೆಯನ್ನು ಬೆಳೆಯುತ್ತಾರೆ. ಗೋಡೆ ಕಟ್ಟಲು ಮಣ್ಣಿನ ಇಟ್ಟಿಗೆಗಳನ್ನು ಬಳಸುತ್ತಾರೆ ನಂತರ ತೆಂಗು ಮತ್ತು ಅಡಿಕೆಯ ದಿಂಬುಗಳನ್ನು ಜೋಡಿಸಿ ಮೇಲ್ಚಾವಣೆಗೆ ಮಂಗಳೂರು ಹಂಚು ಬಳಸುತ್ತಾರೆ ಮತ್ತು ಮನೆಯ ಒಳಗಡೆ ದೊಡ್ಡ ಅಟ್ಟ ಮಾಡಿಕೊಳ್ಳುತ್ತಾರೆ. ಮಾಳಿಗೆ ಮನೆಯಲ್ಲಿಯೂ ಅಟ್ಟ ಮಾಡಬಹುದು ಆದರೆ ಮಾಳಿಗೆ ಮನೆ ಎತ್ತರ ಕಡಮೆ ಇರುತ್ತದೆ. ಆದರೆ ಹಂಚಿನ ಮನೆ ೨೦-೩೦ ಅಡಿಗಳವರೆಗೆ ಎತ್ತರವಿರುವುದರಿಂದ

ಅಟ್ಟ ಹಾಕಲು ಅನುಕೂಲಕರವಾಗಿರುತ್ತದೆ. ಅಟ್ಟದ ಮೇಲೆ ಮಲಗಬಹುದು ಇಲ್ಲವೇ ಅನೇಕ ಸರಕು ಸರಂಜಾಮುಗಳನ್ನು ಹಾಕಬಹುದು. ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ ಹಂಚಿನ ಮನೆಗಳ ಸರ್ವೆ ಮಾಡಿದಾಗ ನಮಗೆ ದೊರೆತ ಅಂಕಿ ಅಂಶವನ್ನು ದೃಢಪಡಿಸುತ್ತಿದ್ದೇನೆ. ಚಳ್ಳಕೆರೆ ತಾಲ್ಲೂಕಿನ ೨೯೫ ಕುಟುಂಬಗಳಲ್ಲಿ ೪೪ ಹಂಚಿನ ಮನೆಗಳು, ಮೊಳಕಾಲ್ಮೂರಿನಲ್ಲಿ ೮೨ ಕುಟುಂಬಗಳಿಗೆ ೧೨ ಹಂಚಿನ ಮನೆಗಳು, ಹಿರಿಯೂರು ತಾಲ್ಲೂಕಿನಲ್ಲಿ ೪೨೮ ಕುಟುಂಬಗಳಲ್ಲಿ ೨೧೫ ಮನೆಗಳಿವೆ. ಹೊಸದುರ್ಗ ತಾಲ್ಲೂಕಿನಲ್ಲಿ ೧೫೮ ಕುಟುಂಬಗಳಲ್ಲಿ ೪೭ ಹಂಚಿನ ಮನೆಗಳಿವೆ. ಹೊಳಲ್ಕೆರೆ ತಾಲ್ಲೂಕಿನಲ್ಲಿ ೨೨೯ ಕುಟುಂಬಗಳಲ್ಲಿ ೧೯೩ ಹಂಚಿನ ಮನೆಗಳಿರುವುದು ಕಂಡುಬಂದಿದೆ.

**ಸೀಟಿನ ಮನೆಗಳು ಅಥವಾ ಟಿನ್:** ಚಿತ್ರದುರ್ಗ ಚಳ್ಳಕೆರೆ ಹಾಗೂ ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಇತ್ತೀಚೆಗೆ ಸಿಮೆಂಟ್ ಸೀಟಿನ ಮನೆಗಳು ನಿರ್ಮಾಣವಾಗುತ್ತಿರುವುದು ಕಂಡುಬರುತ್ತದೆ. ಹಂಚಿನ ಮನೆಗಳಿಗಿಂತ ಈ ಮನೆಗಳು ಉತ್ತಮ ಮತ್ತು ಕಡಿಮೆ ಖರ್ಚಿನಿಂದ ತಯಾರಿಸಬಹುದಾದ ಮನೆಗಳಿವು. ಹಂಚಿನ ಮನೆಗಳು ಮಳೆಗಾಲದಲ್ಲಿ ಅನನುಕೂಲ ಉಂಟುಮಾಡುತ್ತವೆ ಎಂಬ ಕಾರಣದಿಂದ ಇದರ ಜೊತೆಗೆ ಕಾಡುಗೊಲ್ಲರು ಬಯಲುಪ್ರದೇಶಗಳಲ್ಲಿ ವಾಸ ಮಾಡುವುದರಿಂದ ಬಯಲುಪ್ರದೇಶಕ್ಕೆ ಅನುಗುಣವಾಗಿ ಸೀಟಿನ ಮನೆಗಳಿರುತ್ತವೆ. ಈ ಮನೆ ಕಟ್ಟಲು ತಮ್ಮ ಹೊಲದಲ್ಲಿಯೇ ದೊರೆಯುವ ಮಣ್ಣು ಕಲ್ಲು ಹಾಗೂ ಮರದ ದಿಮ್ಮಿಗಳನ್ನು ಬಳಸಿಕೊಳ್ಳುತ್ತಾರೆ ಈ ಮನೆಗಳು ಮಾಳಿಗೆ ಮನೆಗಳಷ್ಟು ದೊಡ್ಡವಾಗಿರುವುದಿಲ್ಲ, ಚಿಕ್ಕವಾದರೂ ಚೊಕ್ಕಟವಾಗಿರುತ್ತವೆ. ಬೇಸಿಗೆ ಕಾಲದಲ್ಲಿ ಬಿಸಿಲು ಜಾಸ್ತಿ ಇರುವುದರಿಂದ ಸೀಟಿನ ಮನೆ ತೆಂಗಿನ ಗರಿಗಳಲ್ಲಿ ಹಾಕುತ್ತಾರೆ. ಪ್ರತಿಯೊಂದು ಸೀಟಿನ ಮನೆಯ ಮುಂದೆ ತೆಂಗಿನ ಗರಿಯ ಚಪ್ಪರ ಹಾಕಿರುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಸಮೀಕ್ಷೆಯನ್ನು ಮಾಡಿದಂತಹ ಸಂದರ್ಭದಲ್ಲಿ ಕುಟುಂಬವಾರು ಸೀಟಿನ ಮನೆಗಳ ಲೆಕ್ಕ ಸಿಕ್ಕಿದೆ. ಚಳ್ಳಕೆರೆ ತಾಲ್ಲೂಕಿನಲ್ಲಿ ೨೯೫ ಕುಟುಂಬಗಳಲ್ಲಿ ೯ ಟಿನ್ ಮನೆಗಳಿರುವುದು ಕಂಡುಬಂದಿದೆ. ಚಿತ್ರದುರ್ಗ ತಾಲ್ಲೂಕಿನಲ್ಲಿ ೧೯೯ ಕುಟುಂಬಗಳಲ್ಲಿ ೧೧ ಟಿನ್ ಮನೆಗಳಿವೆ. ಹಾಗೆಯೇ ಮೊಳಕಾಲ್ಮೂರಿನಲ್ಲಿ ೪೨೮ ಕುಟುಂಬಗಳಲ್ಲಿ ೧೭ ಸೀಟಿನ ಮನೆಗಳಿವೆ ಹೊಸದುರ್ಗ ತಾಲ್ಲೂಕಿನಲ್ಲಿ ೧೫೮ ಕುಟುಂಬಗಳಲ್ಲಿ ೧ ಸೀಟಿನ ಮನೆಯಿದೆ ಹೊಳಲ್ಕೆರೆ ತಾಲ್ಲೂಕಿನ ೨೨೯ ಕುಟುಂಬಗಳಲ್ಲಿ ಒಂದು ಸೀಟಿನ ಮನೆ ಕಂಡುಬಂದಿಲ್ಲ.

**ಆರ್.ಸಿ.ಸಿ. ಮನೆಗಳು:** ಇತ್ತೀಚೆಗೆ ಕಾಡುಗೊಲ್ಲರ ಬದುಕು ಬದಲಾಗಿರುವ ಕಾರಣದಿಂದ ಕಾಡುಗೊಲ್ಲರ ಮನೆಗಳ ಸ್ಥಿತಿಗತಿ ಸುಧಾರಿಸಿದೆಂದು ಹೇಳಬಹುದು. ಕಾಡುಗೊಲ್ಲರು ಇತ್ತೀಚೆಗೆ ಕೆಲವರು ಸರ್ಕಾರಿ ಕೆಲಸ ಹಾಗೂ ವ್ಯಾಪಾರಗಳಲ್ಲಿ ತೊಡಗಿಕೊಂಡಿರುವುದರಿಂದ ಆರ್ಥಿಕತೆ ಸುಧಾರಿಸಿದ ಕಾರಣಗಳಿಂದ ಆರ್.ಸಿ.ಸಿ. ಮನೆಗಳನ್ನು ಕಟ್ಟುತ್ತಿರುವುದು ಕಂಡುಬಂದಿದೆ. ಚಳ್ಳಕೆರೆ ತಾಲ್ಲೂಕಿನಲ್ಲಿ ೨೯೫ ಕುಟುಂಬಗಳಲ್ಲಿ ೨೮ ಆರ್.ಸಿ.ಸಿ. ಮನೆಗಳಿವೆ. ಚಿತ್ರದುರ್ಗ ತಾಲ್ಲೂಕಿನಲ್ಲಿ ೧೯೯ ಕುಟುಂಬಗಳಿಗೆ ೨೦ ಆರ್.ಸಿ.ಸಿ. ಮನೆಗಳಿವೆ. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೫೩ ಮನೆಗಳಿವೆ. ಹೊಸದುರ್ಗ ತಾಲ್ಲೂಕಿನ ೧೫೮ ಕುಟುಂಬಗಳಲ್ಲಿ ೩೩ ಆರ್.ಸಿ.ಸಿ. ಮನೆಗಳಿವೆ. ಹೊಳಲ್ಕೆರೆ ತಾಲ್ಲೂಕಿನಲ್ಲಿ ೨೨೯ ಕುಟುಂಬಗಳಲ್ಲಿ

೧೮ ಆರ್.ಸಿ.ಸಿ. ಮನೆಗಳಿವೆ. ಒಟ್ಟಾರೆ ಹೇಳುವುದಾದರೆ ಕಾಡುಗೊಲ್ಲರು ಹಟ್ಟಿಗಳನ್ನು ಬಿಟ್ಟು ಪಟ್ಟಣಗಳನ್ನು ಸೇರಿಕೊಂಡು ಆರ್.ಸಿ.ಸಿ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಆದರೆ ಕೇವಲ ಕೆಲವೇ ಹಟ್ಟಿಗಳಲ್ಲಿ ಆರ್.ಸಿ.ಸಿ. ಮನೆಗಳಿರುವುದು ಕಂಡುಬಂದಿದೆ.

**ಜನತಾ ಮನೆಗಳು:** ಕಾಡುಗೊಲ್ಲರಿಗೆ ಜವಹರ್ ಲಾಲ್ ನೆಹರೂ ರೋಜ್‌ಗಾರ್ ಯೋಜನೆಯ ಮೂಲಕ ಅತಿ ಕಡು ಬಡವರಿಗಾಗಿ ಕರ್ನಾಟಕ ಸರ್ಕಾರ ಜನತಾ ಮನೆಗಳನ್ನು ಕಟ್ಟಿಸಿಕೊಡುವ ಕೆಲಸವನ್ನು ಮಾಡುತ್ತಿದೆ. ಆದುದರಿಂದ ಕಾಡುಗೊಲ್ಲರ ಹಟ್ಟಿಗಳು ಗುಡಿಸಿಲುಮುಕ್ತ ಹಟ್ಟಿಗಳಾಗಲು ಜನತಾ ಮನೆಗಳೇ ಕಾರಣವೆಂದು ಹೇಳಬಹುದು. ಚಳ್ಳಕೆರೆ ತಾಲ್ಲೂಕಿನಲ್ಲಿ ೨೯೫ ಕುಟುಂಬಗಳಿಗೆ ೨ ಜನತಾ ಮನೆಗಳಿರುವುದು ಕಂಡುಬಂದಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ೧೯೯ ಕುಟುಂಬಗಳಲ್ಲಿ ೨೧ ಜನತಾ ಮನೆಗಳಿರುವುದನ್ನು ನೋಡಬಹುದು. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೮೨ ಕುಟುಂಬಗಳಿಗೆ ೧ ಜನತಾ ಮನೆ ಇದೆ. ಹಿರಿಯೂರು ತಾಲ್ಲೂಕಿನಲ್ಲಿ ೪೨೮ ಕುಟುಂಬಗಳಲ್ಲಿ ೩ ಜನತಾ ಮನೆಗಳಿವೆ ಹೊಸದುರ್ಗ ತಾಲ್ಲೂಕಿನ ೧೫೮ ಕುಟುಂಬಗಳಿಗೆ ೯ ಜನತಾ ಮನೆಗಳಿವೆ. ಹೊಳಲ್ಕೆರೆ ತಾಲ್ಲೂಕಿನಲ್ಲಿ ೨೭೯ ಕುಟುಂಬಗಳಲ್ಲಿ ೧ ಜನತಾ ಮನೆ ಇದೆ.

**ಬಾಡಿಗೆ ಮನೆಗಳು:** ಕಾಡುಗೊಲ್ಲರು ಇತ್ತೀಚೆಗೆ ಬಾಡಿಗೆ ಮನೆಗಳ ಮೊರೆ ಹೋಗಿರುವುದನ್ನು ಸಮೀಕ್ಷೆಗಳಿಂದ ತಿಳಿದುಬಂದಿದೆ. ಇದಕ್ಕೆ ಕಾರಣವೆಂದರೆ ವಿದ್ಯಾಭ್ಯಾಸವನ್ನು ಪಡೆದುಕೊಂಡ ಕಾಡುಗೊಲ್ಲ ಯುವಕರು ಹಟ್ಟಿಯನ್ನು ತೊರೆದು ಪಟ್ಟಣಗಳನ್ನು ಸೇರಿದಂತಹ ಸಮಯದಲ್ಲಿ ಅನಿವಾರ್ಯವಾಗಿ ಬಾಡಿಗೆ ಮನೆಯ ಆಶ್ರಯ ಪಡೆದಿರುವುದು ಕಂಡುಬರುತ್ತದೆ. ಹಟ್ಟಿಗಳಲ್ಲಿದ್ದರೆ ಯಾವುದಾದರೂ ಒಂದು ಮನೆ ಖಾಲಿ ಇದ್ದರೆ ಬಾಡಿಗೆ ತೆಗೆದುಕೊಳ್ಳದೆ ಮನೆ ಕೊಡುತ್ತಾರೆ. ಆದರೆ ಪಟ್ಟಣಗಳಲ್ಲಿ ಹಾಗಾಗುವುದಿಲ್ಲ ಚಿತ್ರದುರ್ಗ ಜಿಲ್ಲೆಯಾದ್ಯಂತ ಸಮೀಕ್ಷೆಯನ್ನು ಕೈಗೊಂಡಾಗ ಚಳ್ಳಕೆರೆ ತಾಲ್ಲೂಕಿನಲ್ಲಿ ೨೯೫ ಕುಟುಂಬಗಳಿಗೆ ೫ ಬಾಡಿಗೆ ಮನೆಗಳಿವೆ. ಚಿತ್ರದುರ್ಗ ತಾಲ್ಲೂಕಿನಲ್ಲಿ ಬಾಡಿಗೆ ಮನೆಗಳು ಕಂಡುಬಂದಿಲ್ಲ. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೮೨ ಕುಟುಂಬಗಳಿಗೆ ೨ ಬಾಡಿಗೆ ಮನೆಗಳಿವೆ. ಹಿರಿಯೂರು ತಾಲ್ಲೂಕಿನಲ್ಲಿ ೪೨೮ ಕುಟುಂಬಗಳಿಗೆ ೩ ಬಾಡಿಗೆ ಮನೆಗಳಿವೆ. ಹೊಸದುರ್ಗ ತಾಲ್ಲೂಕಿನಲ್ಲಿ ೧೫೮ ಕುಟುಂಬಗಳಿಗೆ ಒಂದು ಬಾಡಿಗೆ ಮನೆ ಕಂಡುಬಂದಿಲ್ಲ. ಹೊಳಲ್ಕೆರೆ ತಾಲ್ಲೂಕಿನ ೨೭೯ ಕುಟುಂಬಗಳಿಗೆ ೨ ಬಾಡಿಗೆ ಮನೆಗಳಿರುವುದು ಕಂಡುಬಂದಿದೆ.

ಈ ಮೇಲಿನ ಸಮೀಕ್ಷೆಯನ್ನು ಗಮನಿಸಿದಾಗ ಗುಡಿಸಿಲುಗಳು ೧೩% ಮಾಳಿಗೆ ಮನೆಗಳು, ೨೮% ಆರ್.ಸಿ.ಸಿ. ಮನೆಗಳು, ೧೨% ಹಂಚಿನ ಮನೆಗಳು, ೪೦% ಟಿನ್ ಮನೆಗಳು, ೩% ಜನತಾ ಮನೆಗಳು, ೧% ಬಾಡಿಗೆ ಮನೆಗಳು ಇರುವುದು ಕಂಡುಬಂದಿದೆ.

ಒಟ್ಟಾರೆಯಾಗಿ ಕಾಡುಗೊಲ್ಲರ ವಾಸದ ಮನೆಗಳ ಬಗ್ಗೆ ತಿಳಿದುಕೊಂಡಾಗ ಇಲ್ಲಿಯೂ ಸಹ ಇವರು ಆರ್ಥಿಕವಾಗಿ ಉತ್ತಮ ಪರಿಸ್ಥಿತಿಯನ್ನು ಹೊಂದಿಲ್ಲವೆಂದು ಗೊತ್ತಾಗುತ್ತದೆ. ಕಾರಣ ಹಳೇ

ಕಾಲದ ಹಂಚು ಮತ್ತು ಮಾಳಿಗೆ ಮನೆಗಳೇ ಹೆಚ್ಚಾಗಿ ಕಂಡುಬಂದಿದ್ದು, ೧೩೯೧ ಕುಟುಂಬಗಳಲ್ಲಿ ೫೬೩ ಹಂಚಿನ ಮನೆಗಳು ಹಾಗೂ ೩೯೮ ಮಾಳಿಗೆ ಮನೆಗಳು ಕಂಡುಬಂದಿರುತ್ತವೆ. ಆರ್.ಸಿ.ಸಿ. ಮನೆಗಳು ಕೇವಲ ೧೬೧ ಇದ್ದು, ಈ ಸಮುದಾಯದವರಲ್ಲಿ ಪಕ್ಕಾ ಮನೆಗಳಿಗಿಂತ ಕಚ್ಚಾ ಮನೆಗಳೇ ಹೆಚ್ಚಾಗಿ ಕಂಡುಬರುತ್ತವೆ.

ಕಾಡುಗೊಲ್ಲ ಸಮುದಾಯದವರು ವಾಸಿಸುವ ಹಟ್ಟಿಗಳಲ್ಲಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ೫ ವರ್ಷದೊಳಗಿನ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗುತ್ತಿಲ್ಲ, ಕಾರಣ ಪೂರ್ವ ಪ್ರಾಥಮಿಕ ಶಾಲೆಗಳು ಹಾಗೂ ಅಂಗನವಾಡಿಗಳು ಕಾಡುಗೊಲ್ಲರ ಹಟ್ಟಿಗಳಲ್ಲಿ ಕಡಿಮೆ ಇರುವುದರಿಂದ ೫ ವರ್ಷದೊಳಗಿನ ಮಕ್ಕಳ ಶೈಕ್ಷಣಿಕ ಪ್ರಮಾಣ ಪ್ರತಿ ತಾಲ್ಲೂಕಿನಲ್ಲಿಯೂ ಕಡಿಮೆ ಕಂಡುಬರುತ್ತದೆ. ಆದರೆ ಇತ್ತೀಚೆಗೆ ಮಕ್ಕಳಿಗೆ ಶಿಕ್ಷಣ ಕೊಡಿಸುವಲ್ಲಿ ಕಾಡುಗೊಲ್ಲ ಸಮುದಾಯದವರು ಮುಂದೆ ಬರುತ್ತಿದ್ದಾರೆ. ಹಿಂದಿನ ಕಾಲಕ್ಕೆ ಹೋಲಿಸಿದಲ್ಲಿ ಇಂದು ಶಿಕ್ಷಣ ಪಡೆದವರ ಸಂಖ್ಯೆ ಸ್ವಲ್ಪ ಪ್ರಮಾಣದಲ್ಲಿ ಹೆಚ್ಚಾಗುತ್ತಿರುವುದನ್ನು ಕಾಣಬಹುದು. ಆದರೂ ಸಹ ಉನ್ನತ ಶಿಕ್ಷಣ ಪಡೆಯುವಲ್ಲಿ ತೀರಾ ಹಿಂದುಳಿದಿದೆ. ಈ ಕೆಳಗಿನ ಕೋಷ್ಟಕದ ಸಹಾಯದಿಂದ ೫ ವರ್ಷ ಹಾಗೂ ೬ ರಿಂದ ೧೧ ವರ್ಷದೊಳಗಿನ ಸಾಕ್ಷರಸ್ಥರನ್ನು ತಿಳಿಯಬಹುದು.

**ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲ್ಲೂಕುವಾರು ಲಿಂಗವಾರು ಸಾಕ್ಷರರ್ಹರಲ್ಲದವರು ಹಾಗೂ ಸಾಕ್ಷರರ್ಹರ ಪ್ರಮಾಣ.**

**ಕೋಷ್ಟಕ ೪.೧೦.**

| ತಾಲ್ಲೂಕುಗಳು | ಕುಟುಂಬಗಳು | ೦-೫ ಸಾಕ್ಷರರ್ಹರಲ್ಲದವರು | | | ೬-೧೧ ಸಾಕ್ಷರರ್ಹರು | | |
|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಚಳ್ಳಕೆರೆ | ೨೯೫ | ೩೫ | ೨೫ | ೬೦ | ೬೦೫ | ೫೩೭ | ೧೧೪೨ |
| ಚಿತ್ರದುರ್ಗ | ೧೯೯ | ೨೪ | ೧೪ | ೩೮ | ೪೩೯ | ೩೯೭ | ೮೩೬ |
| ಮೊಳಕಾಲ್ಮೂರು | ೮೨ | ೮ | ೯ | ೧೭ | ೧೮೨ | ೧೭೦ | ೩೫೨ |
| ಹಿರಿಯೂರು | ೪೨೮ | ೪೧ | ೩೬ | ೭೭ | ೯೮೩ | ೮೫೯ | ೧೮೪೨ |
| ಹೊಸದುರ್ಗ | ೧೫೮ | ೨೩ | ೧೨ | ೩೫ | ೩೩೦ | ೨೯೬ | ೬೨೬ |
| ಹೊಳಲ್ಕೆರೆ | ೨೨೯ | ೨೦ | ೧೯ | ೩೯ | ೫೦೧ | ೪೧೦ | ೯೧೧ |
| ಒಟ್ಟು | ೧೩೯೧ | ೧೫೧ | ೧೧೫ | ೨೬೬ | ೩೦೪೦ | ೨೬೬೯ | ೫೭೦೯ |

'ಶಿಕ್ಷಣವೇ ಶಕ್ತಿ' ಎಂದು ಹೇಳುವಂತೆ ಶಿಕ್ಷಣ ಮಾನವನ ನಿಪುಣತೆ ಮತ್ತು ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಮಹತ್ವಪೂರ್ಣ ಸ್ಥಾನ ಪಡೆದಿದೆ. ಶಿಕ್ಷಣ ಅಭಿವೃದ್ಧಿಯ ಮೂಲಮಂತ್ರ ಹಾಗೂ ಸಾಮಾಜಿಕ ಪರಿವರ್ತನೆಯ ಮೂಲಸಾಧನ. ಶಿಕ್ಷಣವನ್ನು ಆಲಕ್ಷಿಸಿ ಯಾವುದೇ ದೇಶ ತನ್ನ ಅಭಿವೃದ್ಧಿ ಸಾಧಿಸುವುದು ಸಾಧ್ಯವಿಲ್ಲ. ಶೈಕ್ಷಣಿಕವಾಗಿ ಮುಂದುವರಿದ ಯಾವುದೇ ದೇಶವಾದರೂ ಸಹ ತನ್ನ ಸಂಪನ್ಮೂಲಗಳನ್ನು ಸರಿಯಾದ ಕ್ರಮದಲ್ಲಿ ಬಳಸಿಕೊಡು ಆರ್ಥಿಕ ಪ್ರಗತಿಯತ್ತ ತನ್ನ ದಾಪುಗಾಲಿಡುತ್ತದೆ. ನಾವು ಯಾವುದೇ ಅಭಿವೃದ್ಧಿಶೀಲ ರಾಷ್ಟ್ರಗಳು ಹಾಗೂ ಹಿಂದುಳಿದ ರಾಷ್ಟ್ರಗಳನ್ನು ನೋಡಿದಾಗ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗಿಂತ ಹಿಂದುಳಿದ ರಾಷ್ಟ್ರಗಳಲ್ಲಿ ಶಿಕ್ಷಣದಲ್ಲಿ ಹಿಂದುಳಿದಿರುವಿಕೆಯನ್ನು ಗಮನಿಸಬಹುದು. ಶಿಕ್ಷಣ ಆರ್ಥಿಕ ಅಭಿವೃದ್ಧಿಯ ಮೂಲ ಸಾಧನವಿದ್ದಂತೆ. ಆದ್ದರಿಂದಲೇ 'ಶಿಕ್ಷಣ ರಕ್ಷಣೆಯಷ್ಟೇ ಮುಖ್ಯ' ಎಂದು ಖ್ಯಾತ ಶಿಕ್ಷಣತಜ್ಞ ಡಾ.ಎಚ್.ನರಸಿಂಹಯ್ಯ ಹೇಳುತ್ತಾರೆ.[೧೯] ಅಂತೆಯೇ ಶಿಕ್ಷಣದ ಪಾತ್ರವನ್ನು ಸಮರ್ಥವಾಗಿ ಮನಗಂಡಿದ್ದ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಶಿಕ್ಷಣವನ್ನು 'ಪ್ರಜ್ಞೆಯ, ಅಭಿವೃದ್ಧಿಯ ಮತ್ತು ಸಮಾಜದ ಮರುಸಂಘಟನೆಯ ಮೂಲ ಸಾಧನ.'[೨೦] ಡಾ.ಬಿಆರ್.ಅಂಬೇಡ್ಕರ್ ಅವರು 'ಶಿಕ್ಷಣದಿಂದ ಮಾತ್ರ ಶೋಷಣೆಯ ನಿರ್ಮೂಲನೆ ಸಾಧ್ಯ ಎಂದು ಹೇಳಿದ್ದರು. ಅವರು ಹೇಳುವಂತೆ ಶಿಕ್ಷಣವೊಂದೇ ದಲಿತರನ್ನು ಮೇಲಕ್ಕೆತ್ತುವ ಸಾಧನ. ಓದು, ಓದು, ಓದು, ಎಡೆಬಿಡದೇ ಓದು ಮತ್ತು ಆಳವಾದ ಚಿಂತನೆ ನಮ್ಮ ಬುದ್ಧಿವಂತಿಕೆಯನ್ನು ಹೆಚ್ಚಿಸಬೇಕು, ವೈಚಾರಿಕವಾಗಿ ಚಿಂತಿಸಬೇಕು. ಆಗ ಮಾತ್ರ ದಲಿತರು ಮೇಲಕ್ಕೆ ಬರಲು ಸಾಧ್ಯವಾಗುತ್ತದೆ.[೨೧]

ಸರ್ಕಾರ ಅನೇಕ ಯೋಜನೆಗಳನ್ನು ಜಾರಿಗೆ ತಂದು ಶಿಕ್ಷಣ ನೀಡಲು ಪ್ರಯತ್ನಿಸುತ್ತಿದ್ದರೂ ಸಹ ಇದನ್ನು ಸರಿಯಾಗಿ ಉಪಯೋಗಿಸಿಕೊಳ್ಳಲು ಸಮುದಾಯಗಳಿಗೆ ಸಾಧ್ಯವಾಗುತ್ತಿಲ್ಲ. ಇಂತಹ ಸಮುದಾಯಗಳಲ್ಲಿ ಕಾಡುಗೊಲ್ಲ ಸಮುದಾಯವೂ ಒಂದು. ಇವರಲ್ಲಿ ಶಿಕ್ಷಣದ ಕೊರತೆ ಬಹಳ ಇರುವುದು ಕಂಡುಬರುತ್ತದೆ. ವೆರಿಯರ್ ಎಲ್ವಿನ್ ಅವರು ಹೇಳುವಂತೆ 'ಬೆಳೆಯುತ್ತಿರುವ ಹೆಣ್ಣು ಮತ್ತು ಗಂಡುಮಕ್ಕಳನ್ನು ಶಾಲೆಗೆ ಕಳುಹಿಸಿಕೊಡುವುದು, ಮೂಲದಲ್ಲಿ ಅವರ ಅರ್ಥವ್ಯವಸ್ಥೆಗೆ ಮತ್ತು ಸಾಂಪ್ರದಾಯಿಕ ಶ್ರಮವಿಭಜನೆಗೆ ಅಡ್ಡಬರುತ್ತದೆ.[೨೨]

ಮೇಲ್ಕಂಡ ಸಮೀಕ್ಷೆಯನ್ನು ಗಮನಿಸಿದಾಗ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯವು ಚಳ್ಳಕೆರೆ ತಾಲ್ಲೂಕಿನಲ್ಲಿ ೨೯೫ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಲಿಂಗವಾರು ಸಾಕ್ಷರತೆಯ ಪ್ರಮಾಣ ಈ ರೀತಿ ಕಂಡುಬಂದಿದೆ. ಒಟ್ಟು ೬೦ ಜನರಲ್ಲಿ ೩೫ ಜನರು ಪುರುಷರು ಸಾಕ್ಷರಲ್ಲದವರು ಹಾಗೆನೆ ೨೫ ಜನ ಮಹಿಳೆಯರು ಶಿಕ್ಷಣವನ್ನು ಪಡೆದುಕೊಂಡಿಲ್ಲ ೧೦೦ಕ್ಕೆ ೩೫-೨೫ ಜನರು ಇನ್ನೂ ಸಹ ಶಿಕ್ಷಣದಿಂದ ದೂರ ಇರುವುದನ್ನು ಗುರುತಿಸಬಹುದು ೧೦೦ಕ್ಕೆ ೧೦೦ರಷ್ಟು ಶಿಕ್ಷಣ ಪಡೆದವರೆ. ಅಭಿವೃದ್ಧಿ ಹೊಂದುವುದು ಕಷ್ಟವಾಗಿದೆ. ಅಂತಹದರಲ್ಲಿ ಕಾಡುಗೊಲ್ಲರ ಅಭಿವೃದ್ಧಿ

ಯಾವ ರೀತಿ ಸಾಧ್ಯ. ಅದೇ ರೀತಿ ೧೧೪೨ ಜನರಲ್ಲಿ ೬-೬೧ ಸಾಕ್ಷರತೆಯನ್ನು ಹೊಂದಿದವರು. ಅದರಲ್ಲಿ ಗಂಡಸರ ಸಂಖ್ಯೆ ೬೦೫ ಹೆಣ್ಣು ಮಕ್ಕಳು ೫೩೭ ಸಾಕ್ಷರತೆಯನ್ನು ಹೊಂದಿದ್ದಾರೆ.

ಚಿತ್ರದುರ್ಗ ತಾಲ್ಲೂಕಿನಲ್ಲಿ ಶೈಕ್ಷಣಿಕ ಪ್ರಗತಿಯನ್ನು ಸಮೀಕ್ಷೆಗೆ ಒಳಪಡಿಸಿದಾಗ ಸಾಕ್ಷರತೆ ಹೊಂದಿಲ್ಲದವರು ೨೪ ಜನ ಪುರುಷರು ಹಾಗೂ ೧೪ ಜನರು ಸ್ತ್ರೀಯರು ೧೯೯ ಕುಟುಂಬಗಳಲ್ಲಿ ಕಂಡುಬಂದಿದ್ದಾರೆ. ಒಟ್ಟು ೩೮ ಜನರು ನಿರಕ್ಷರಸ್ತರು ಚಿತ್ರದುರ್ಗ ತಾಲ್ಲೂಕಿನಲ್ಲಿ ಕಂಡುಬಂದಿದ್ದಾರೆ. ಅದೇ ರೀತಿ ವಿದ್ಯಾವಚಿತರ ಸಂಖ್ಯೆ ೪೫೯ ಜನರು ಗಂಡಸರಾದರೆ ೩೯೭ ಜನರು ಹೆಂಗಸರು ಒಟ್ಟು ೮೩೬ ಜನರು ಶಿಕ್ಷಣ ವಂಚಿತರಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಪುರುಷರಿಗೆ ಹೋಲಿಸಿಕೊಂಡರೆ ಪುರುಷರಿಗಿಂತ ಮಹಿಳೆಯರೆ ಕಡಿಮೆ ಪ್ರಮಾಣದ ಶಿಕ್ಷಣವನ್ನು ಪಡೆದಿದ್ದಾರೆ. ಮಹಿಳೆಯರ ಪ್ರಮಾಣ ಹೆಚ್ಚುಸುವ ಅವಶ್ಯಕತೆ ಅನಿವಾರ್ಯವಾಗಿದೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೮೨ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬೇರೆ ತಾಲ್ಲೂಕುಗಳಿಗೆ ಹೋಲಿಸಿದರೆ ನಿರಕ್ಷರಸ್ಥರ ಪ್ರಮಾಣ ತುಂಬಾ ಕಡಿಮೆ ಇರುವುದು ತಿಳಿದುಬಂದಿದೆ. ಅದರಂತೆ ೮೨ ಕುಟುಂಬಗಳಲ್ಲಿ ಅನಕ್ಷರಸ್ಥರು ಪುರುಷರ ಸಂಖ್ಯೆ ಕೇವಲ ೮ ಮಾತ್ರ, ಹಾಗೆಯೇ ಮಹಿಳೆಯರ ಸಂಖ್ಯೆ ಕೇವಲ ೧೭. ಒಟ್ಟು ೧೭ ಜನರು ೮೨ ಕುಟುಂಬಗಳಲ್ಲಿ ಅನಕ್ಷರಸ್ಥರಿರುವುದು ಕಂಡುಬಂದಿದೆ. ಅದೇ ರೀತಿ ಅಕ್ಷರ ಬಲ್ಲವರ ಸಂಖ್ಯೆ ಗಂಡಸರು ೧೮೨ ಜನರಾದರೆ ಹೆಂಗಸರು ೧೭೦ ಜನರು. ಪುರುಷರಿಗಿಂತ ಕೇವಲ ೧೨ ಜನರು ಸ್ತ್ರೀಯರು ಕಡಿಮೆ ಇರುವುದು ತಿಳಿದುಬಂದಿದೆ.

ಹಿರಿಯೂರು ತಾಲ್ಲೂಕಿನಲ್ಲಿ ೪೨೮ ಕುಟುಂಬಗಳನ್ನು ಸಮೀಕ್ಷೆ ಮಾಡಿದಾಗ ಅದರಲ್ಲಿ ಅನಕ್ಷರಸ್ಥರು ೪೧ ಜನ ಗಂಡಸರು ೩೬ ಜನ ಹೆಂಗಸರು ಒಟ್ಟು ೭೭ ಜನರಿರುವುದು ತಿಳಿದುಬಂದಿದೆ. ಹಾಗೆಯೇ ಶಿಕ್ಷಣ ಕಲಿತವರ ಸಂಖ್ಯೆ ೯೮೩ ಜನ ಪುರುಷರು ೮೫೯ ಜನ ಮಹಿಳೆಯರು ೬-೬೧ ರ ವಯೋಮಾನದವರು ಶಿಕ್ಷಣ ಪಡೆದವರಾಗಿದ್ದಾರೆ. ಒಟ್ಟಾರೆಯಾಗಿ ೧೮೪೨ ಜನರು ಶಿಕ್ಷಣ ಕಲಿತವರಿದ್ದಾರೆ.

ಹೊಸದುರ್ಗ ತಾಲ್ಲೂಕಿನಲ್ಲಿ ೧೫೮ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದ್ದರೆ ಅದರಲ್ಲಿ ೨೫ ಜನ ಅನಕ್ಷರಸ್ಥರಿರುವುದು ಮತ್ತು ೧೨ ಜನ ಮಹಿಳೆಯರು ಅನಕ್ಷರಸ್ಥ ಮಹಿಳೆಯರಿದ್ದಾರೆ. ಒಟ್ಟು ೩೫ ಜನರು ಅನಕ್ಷರಸ್ಥರಿದ್ದಾರೆ. ಶಿಕ್ಷಣ ಪಡೆದ ಪುರುಷರ ಸಂಖ್ಯೆ ೩೩೦ ಗಂಡಸರಾದರೆ ೨೯೬ ಹೆಂಗಸರಿರುವುದು ಸಮೀಕ್ಷೆಯಿಂದ ತಿಳಿದುಬಂದಿದೆ. ಒಟ್ಟು ೬೨೬ ಜನರು ಶಿಕ್ಷಣ ವಂಚಿತರಿದ್ದಾರೆ. ೩೭೪ ಜನರು ಅಂದರೆ ೩೫% ಜನರು ಅನಕ್ಷರಸ್ಥರಿದ್ದಾರೆ.

ಹೊಳಲ್ಕೆರೆ ತಾಲ್ಲೂಕಿನಲ್ಲಿ ೨೨೯ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಅದರಲ್ಲಿ ಅನಕ್ಷರಸ್ಥರ ಸಂಖ್ಯೆ ೩೯ ಜನರಿರುವುದು ತಿಳಿದುಬಂದಿದೆ. ಅದರಲ್ಲಿ ಪುರುಷರ ಸಂಖ್ಯೆ ೨೦ ಜನರು ೧೯ ಜನ ಮಹಿಳೆಯರು ಅನಕ್ಷರಸ್ಥರು. ಅದೇ ರೀತಿ ಅಕ್ಷರಸ್ಥರ ಸಂಖ್ಯೆ ೫೦೧ ಜನ ಗಂಡಸರಾದರೆ ೪೧೦ ಜನರು ಮಹಿಳೆಯರು ಒಟ್ಟು ೮೯೧೧ ಜನರು ಅಕ್ಷರಸ್ಥರಿರುವುದು ತಿಳಿದುಬಂದಿದೆ

ಒಟ್ಟು ಇಡೀ ಜಿಲ್ಲೆಯಾದ್ಯಂತ ೧೩೯೧ ಕುಟುಂಬಗಳಲ್ಲಿ ಅನಕ್ಷರಸ್ಥ ಪುರುಷರ ಸಂಖ್ಯೆ ೧೫೧ ಮಹಿಳೆಯರ ಸಂಖ್ಯೆ ೧೧೫ ಒಟ್ಟು ೨೬೬ ಜನರು ಅನಕ್ಷರಸ್ಥರು. ವಿದ್ಯಾವಂಚಿತರ ಸಂಖ್ಯೆ ಗಂಡಸರು ೩೦೪೦ ಹಾಗೆಯೇ ಹೆಂಗಸರ ಸಂಖ್ಯೆ ೨೬೬೯ ಒಟ್ಟು ೫೭೦೯ ಜನರು ಶಿಕ್ಷಣ ಕಲಿತವರಿದ್ದಾರೆ.

ಒಟ್ಟಾರೆಯಾಗಿ ನೋಡುವುದಾದರೆ ಶಿಕ್ಷಣವು ಇಂದಿನ ಜಾಗತಿಕ ಯುಗದಲ್ಲಿ ಅತ್ಯಂತ ಮಹತ್ತರವಾದ ಪಾತ್ರವನ್ನು ಬೀರಿರುವುದನ್ನು ಕಾಣಬಹುದು. ಶಿಕ್ಷಣವು ಇಲ್ಲವಾದರೆ ಇಂದು ಏನನ್ನು ಸಾಧಿಸಲು ಸಾಧ್ಯವಾಗುವುದಿಲ್ಲ ಎಲ್ಲಾ ವಲಯಗಳಲ್ಲಿಯೂ ಸಹ ಶಿಕ್ಷಣದ ಅವಶ್ಯಕತೆಯು ಬೇಕೇ ಬೇಕು.

ಇಂತಹ ಶಿಕ್ಷಣದ ಅರಿವು ಮತ್ತು ಅದರ ಅವಶ್ಯಕತೆ ಕಾಡುಗೊಲ್ಲರಲ್ಲಿ ಇಂದಿನ ಆಧುನಿಕ ಯುಗದಲ್ಲಿ ಸಲ್ಪ ಮಟ್ಟಿಗೆ ಕಾಣಬಹುದಾಗಿದೆ. ಇದರಿಂದ ಇಂದಿನ ಕಾಡುಗೊಲ್ಲರ ಹಟ್ಟಿಗಳು ಆಧುನಿಕತೆಯ ಕಡೆಗೆ ಮುಖ ಮಾಡುತ್ತಿರುವುದು ಹಾಗೂ ಸಾಂಪ್ರದಾಯಿಕ ಕಂದಾಚಾರಗಳಿಂದ ಅತ್ಯಲ್ಪ ಮಟ್ಟಿಗೆ ಹೊರಬಂದಿದೆ. ಎಂದರೆ ಇಂದು ಕಾಡುಗೊಲ್ಲರು ತಮ್ಮ ಸಾಂಪ್ರದಾಯಿಕ ಆಚಾರ ವಿಚಾರಗಳಿಂದ ಆಧುನಿಕತೆಯತ್ತ ಬರುಲು ಪ್ರಯತ್ನಿಸುತ್ತಿದ್ದಾರೆಂದು ತಿಳಿಯುತ್ತದೆ.

**ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲೂಕುವಾರು, ಕುಟುಂಬವಾರು ಪಡಿತರ ಚೀಟಿ ಹೊಂದಿದವರ ಮತ್ತು ಹೊಂದಿರದವರ ಪ್ರಮಾಣ**

**ಕೋಷ್ಟಕ ೪.೧೧.**

| ಕ್ರ.ಸಂ. | ತಾಲೂಕುಗಳು | ಕುಟುಂಬ | ಪಡಿತರ ಚೀಟಿ | ಪಡಿತರ ಚೀಟಿ |
|---|---|---|---|---|
| | | | ಹೊಂದಿರುವ ಕುಟುಂಬಗಳು | ಹೊಂದಿರದ ಕುಟುಂಬಗಳು |
| ೧. | ಚಳ್ಳಕೆರೆ | ೨೯೫ | ೧೯೨ | ೧೦೩ |
| ೨. | ಚಿತ್ರದುರ್ಗ | ೧೯೯ | ೧೮೫ | ೧೪ |
| ೩. | ಮೊಳಕಾಲ್ಮೂರು | ೮೨ | ೭೭ | ೫ |

| ೪. | ಹಿರಿಯೂರು | ೪೨೮ | ೩೧೦ | ೧೧೮ |
|---|---|---|---|---|
| ೫. | ಹೊಸದುರ್ಗ | ೧೫೮ | ೧೨೮ | ೩೦ |
| ೬. | ಹೊಳಲ್ಕೆರೆ | ೨೨೯ | ೨೨೪ | ೫ |
| | ಒಟ್ಟು | ೧೩೯೧ | ೧೧೧೬ | ೨೭೫ |




ಭಾರತವು ವೈವಿಧ್ಯಮಯ ಸಂಸ್ಕೃತಿಯಂತೆಯೇ ಸಂಪನ್ಮೂಲಗಳ ಹಂಚಿಕೆಯಲ್ಲಿ ವೈವಿಧ್ಯತೆ ಹೊಂದಿದೆ. ಇದರಂತೆಯೇ ಮಳೆಯ ಹಂಚಿಕೆ ಮತ್ತು ಹವಾಮಾನ ವಾಯುಗುಣವು ವೈವಿಧ್ಯತೆಯಿಂದ ಕೂಡಿದೆ. ಮಣ್ಣು ಫಲವತ್ತತೆಯು ಸಹ ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿದೆ. ಭಾರತದ ಕೃಷಿಯು ಮಾನ್ಸೂನ್ ಮಳೆಯೊಡನೆ ಆಡುವ ಜೂಜಾಟವಿದ್ದಂತೆ ಸವಾಲಿನ ಕಾರ್ಯವಾಗಿದ್ದು ಅತಿವೃಷ್ಟಿ ಮತ್ತು ಅನಾವೃಷ್ಟಿಗಳಿಂದ ಜನರ ಮೂಲಭೂತ ಅವಶ್ಯಕತೆಗಳು ದೊರೆಯದೇ ಹಸಿವಿನಿಂದ ಸಾಯುವಂತಹ ಪ್ರಸಂಗಗಳು ಸ್ವಾತಂತ್ರ್ಯಪೂರ್ವದಿಂದಲೂ ಕಂಡುಬಂದಿದೆ. ಇದರ ಪರಿಣಾಮವಾಗಿ ಆಯಾ ರಾಜ್ಯಗಳು ತಮ್ಮ ಪ್ರಜೆಗಳಿಗೆ ಹಸಿವನ್ನು ನೀಗಿಸಲು ಹಲವಾರು ಯೋಜನೆಗಳನ್ನು ರೂಪಿಸಿದೆ ಮತ್ತು ರೂಪಿಸುತ್ತಿದೆ. ಇದರ ಫಲವಾಗಿ ಕರ್ನಾಟಕ ಸರ್ಕಾರ, ಆರ್ಥಿಕತೆಯನ್ನು(ಆದಾಯವನ್ನು) ಆಧರಿಸಿ APL BPL, ಅಂತ್ಯೋದಯ ಎಂದು ಪಡಿತರ ಕಾರ್ಡುಗಳನ್ನಾಗಿ ವಿಂಗಡಿಸಿ ಅನ್ನಭಾಗ್ಯ ಯೋಜನೆಯ ಮೂಲಕ

ಕುಟುಂಬದ ಪ್ರತಿ ಸದಸ್ಯರಿಗೆ ೭ ಕೆ.ಜಿ.ಯಂತೆ ಉಚಿತ ಅಕ್ಕಿಯನ್ನು ನೀಡಲಾಗುತ್ತಿದೆ. ಇದು ಬಡಜನರಿಗೆ ತುಂಬಾ ಉಪಯುಕ್ತವಾದರೂ ಸುಳ್ಳು ಆದಾರ ಪ್ರಮಾಣ ಪತ್ರ ನೀಡಿ ರೇಷನ್‌ಕಾರ್ಡ್ ಪಡೆದವರ ಸಂಖ್ಯೆ ಅಧಿಕವಾಗಿದೆ. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರಗಳು ಆಧಾರ್ ಲಿಂಕ್ ಮತ್ತು ಆದಾಯ ಪ್ರಮಾಣಪತ್ರಗಳನ್ನು ಪಡೆಯುವುದರ ಮೂಲಕ ಸುಳ್ಳು ಪಡಿತರ ಚೀಟಿಯನ್ನು ನಿಯಂತ್ರಿಸಿಲು ಕ್ರಮ ವಹಿಸಲಾಗುತ್ತಿದೆ. ಇಂತಹ ಪಡಿತರ ಚೀಟಿಗಳು ಕಾಡುಗೊಲ್ಲ ಸಮುದಾಯದಲ್ಲಿ ಎಷ್ಟು ಪ್ರಮಾಣದಲ್ಲಿ ವಿತರಣೆಗೊಂಡಿದೆ ಎಂಬುದನ್ನು ಕೋಷ್ಟಕ ೪.೧೨ ವಿವರಿಸುತ್ತದೆ.

ಕೋಷ್ಟಕ ೬.೧೧ರ ಪ್ರಕಾರ ಸಮೀಕ್ಷೆಗೊಳಪಟ್ಟ ೧೩೯೧ ಕುಟುಂಬಗಳಲ್ಲಿ ೧೧೧೬ ಕುಟುಂಬಗಳು ಪಡಿತರ ಚೀಟಿಯನ್ನು ಹೊಂದಿವೆ. ೨೭೫ ಕುಟುಂಬಗಳು ಪಡಿತರ ಚೀಟಿಯನ್ನು ಹೊಂದಿಲ್ಲ. ಇದರ ಅರ್ಥ ೨೭೫ ಕುಟುಂಬಗಳು ಅತಿ ಹೆಚ್ಚು ಜಮೀನು ಹೊಂದಿರುತ್ತವೆ, ಇಲ್ಲವೇ ಅವರು ಸರ್ಕಾರಿ ನೌಕರರಾಗಿರಬೇಕು. ಇನ್ನುಳಿದ ೧೧೧೬ ಕುಟುಂಬಗಳು ಸಣ್ಣ ರೈತರಾಗಿದ್ದು, ಬರಪೀಡಿತ ಬಯಲು ಸೀಮೆಯ ಸವಾಲಿನ ಕೃಷಿಯಲ್ಲಿ ತೊಡಗಿದವರಾಗಿದ್ದಾರೆ. ಶೇಕಡವಾರು ಗಮನಿಸುವುದಾದರೆ ೮೦.೨೩% ಜನರು ಪಡಿತರ ಚೀಟಿ ಹೊಂದಿದ್ದಾರೆ. ೧೯.೭೭% ಕುಟುಂಬಗಳು ಮಾತ್ರವೇ ಪಡಿತರ ಚೀಟಿಯನ್ನು ಹೊಂದಿಲ್ಲ. ಅಂದರೆ ೧೯.೭೭% ಜನರು ಮಾತ್ರವೇ ಆರ್ಥಿಕವಾಗಿ ಸುಸ್ಥಿತಿಯಲ್ಲಿರುವವರು ಎಂಬ ಅಂಶ ವ್ಯಕ್ತವಾಗುತ್ತದೆ. ಒಟ್ಟಾರೆಯಾಗಿ ಗಮನಿಸಿದಾಗ ೧೩೯೧ ಕುಟುಂಬಗಳಲ್ಲಿ ೧೧೧೬ ಕುಟುಂಬಗಳು ಪಡಿತರ ಚೀಟಿಯನ್ನು ಹೊಂದಿದಂತಹ ಕುಟುಂಬಗಳು. ಆದರೆ ಪಡಿತರ ಯಾರಿಗೆ ಅವಶ್ಯಕತೆ ಇದೆಯೋ ಅವರಿಗೆ ಇದರಿಂದ ಅನುಕೂಲವಾಗುತ್ತಿಲ್ಲ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕುಟುಂಬ ಸಮೀಕ್ಷೆಯಲ್ಲಿ ಪಡಿತರಕ್ಕೆ ಎಲ್ಲಾ ರೀತಿಯಲ್ಲೂ ಸಹ ಯೋಗ್ಯರಿದ್ದಾಗಲೂ ಸಹ ಪಡಿತರ ಇವರಿಗೆ ಸಿಕ್ಕಿರುವುದಿಲ್ಲ. ಇಂತಹ ಹಲವಾರು ಕುಟುಂಬಗಳನ್ನು ನಾನು ಗಮನಿಸಿದ್ದೇನೆ ಹಾಗೂ ಅವರಿಗೆ ಇನ್ನೊಂದು ಸಾರಿ ಪಡಿತರಕ್ಕೆ ಅರ್ಜಿ ಹಾಕಲು ತಿಳಿಸಿರುತ್ತೇನೆ. ಕಾಡುಗೊಲ್ಲ ಸಮುದಾಯದವರು ಈ ಪಡಿತರಕ್ಕೆ ಸಂಬಂಧಿಸಿದಂತೆ ಅವರು ಮಾಹಿತಿ ನೀಡುವ ಪ್ರಕಾರ ಈಗಾಗಲೇ ಪಡಿತರ ಚೀಟಿ ಪಡೆಯಲು ಸಾಕಷ್ಟು ಬಾರಿ ತಾಲ್ಲೂಕು ಹಾಗೂ ನಾಡ ಕಚೇರಿಗಳಿಗೆ ಅಲೆದು ಸಾಕಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಸರ್ಕಾರಿ ಸೌಲಭ್ಯಗಳು ಯಾರಿಗೆ ಅವಶ್ಯಕತೆ ಇರುತ್ತದೆಯೋ ಅವರಿಗೆ ದೊರೆಯುವುದು ಅಷ್ಟು ಸಲಭವಲ್ಲ.

ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲೂಕುವಾರು ಹಾಗೂ ಲಿಂಗವಾರು ಮತದಾರರ ಗುರುತಿನ ಚೀಟಿ ಹೊಂದಿದವರ ಮತ್ತು ಹೊಂದಿರದವರ ಪ್ರಮಾಣ

ಕೋಷ್ಟಕ ೪.೧೨.

| ಕ್ರ.ಸಂ. | ತಾಲೂಕುಗಳು | ಕುಟುಂಬ | ಗುರುತಿನ ಚೀಟಿ ಪಡೆಯಲು ಅರ್ಹರಿರುವ ವಯೋಮಾನದವರು | | | ಗುರುತಿನ ಚೀಟಿ ಪಡೆದವರು | | | ಗುರುತಿನ ಚೀಟಿ ಹೊಂದಿರದವರು | | |
|---|---|---|---|---|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧. | ಚಳ್ಳಕೆರೆ | ೨೯೫ | ೪೭೪ | ೪೨೪ | ೮೯೮ | ೩೯೨ | ೩೫೭ | ೭೪೯ | ೮೨ | ೬೭ | ೧೪೯ |
| ೨. | ಚಿತ್ರದುರ್ಗ | ೧೯೯ | ೨೯೩ | ೨೭೦ | ೫೬೩ | ೨೫೧ | ೨೪೫ | ೪೯೬ | ೪೨ | ೨೫ | ೬೭ |
| ೩. | ಮೊಳಕಾಲ್ಮೂರು | ೮೨ | ೧೨೮ | ೧೨೧ | ೨೪೯ | ೧೧೪ | ೧೦೭ | ೨೨೧ | ೧೪ | ೧೪ | ೨೮ |
| ೪. | ಹಿರಿಯೂರು | ೪೨೮ | ೭೯೧ | ೬೭೯ | ೧೪೭೦ | ೬೯೬ | ೫೭೯ | ೧೨೭೬ | ೯೫ | ೯೦ | ೧೮೪ |
| ೫. | ಹೊಸದುರ್ಗ | ೧೫೮ | ೨೧೫ | ೨೦೭ | ೪೨೨ | ೨೦೨ | ೧೯೯ | ೪೦೧ | ೧೩ | ೮ | ೨೧ |
| ೬. | ಹೊಳಲ್ಕೆರೆ | ೨೨೯ | ೪೦೮ | ೩೩೮ | ೭೪೬ | ೩೪೮ | ೨೮೯ | ೬೩೭ | ೬೦ | ೪೯ | ೧೦೯ |
| | ಒಟ್ಟು | ೧೩೯೧ | ೨೩೦೯ | ೨೦೨೯ | ೪೩೩೮ | ೨೦೦೩ | ೧೭೭೬ | ೩೭೮೦ | ೩೦೬ | ೨೫೩ | ೫೫೮ |




ಭಾರತದಲ್ಲಿ ಸುಮಾರು ೧೨೧ ಕೋಟಿ ಜನಸಂಖ್ಯೆ ಇದ್ದರೂ ಅವರೆಲ್ಲರೂ ವಯಸ್ಕ ಮತದಾನ ಪದ್ಧತಿಯಲ್ಲಿ ಭಾಗವಹಿಸಿ ತಮಗೆ ಇಷ್ಟವಾದ ಜನಪ್ರತಿನಿಧಿಗಳನ್ನು ಆಯ್ದುಕೊಳ್ಳಲು ಅವಕಾಶವಿಲ್ಲ. ಬದಲಾಗಿ ೧೮ ವರ್ಷ ವಯಸ್ಸಿನ ಪ್ರತಿಯೊಬ್ಬ ವ್ಯಕ್ತಿಯು ಮತದಾನದ ಹಕ್ಕು ಪಡೆಯುವುದರ ಮೂಲಕ ಮತ ಚಲಾಯಿಸುವಂತವನಾಗುತ್ತಾರೆ. ಸಂವಿಧಾನದ ೬೧ನೇ ತಿದ್ದುಪಡಿ ಆಗುವುದಕ್ಕಿಂತ ಮುಂಚಿತವಾಗಿ ೨೧ ವರ್ಷ ವಯಸ್ಸಿನವರು ಮಾತ್ರ ಮತ ಚಲಾಯಿಸುವ ಹಕ್ಕನ್ನು ಹೊಂದಿದ್ದರು. ಆದರೆ ೧೯೮೯ರಲ್ಲಿ ಸಂವಿಧಾನಕ್ಕೆ ೬೧ನೇ ತಿದ್ದುಪಡಿ ಮಾಡುವ ಮೂಲಕ ಮತದಾನದ ವಯಸ್ಸನ್ನು ೨೧ರಿಂದ ೧೮ಕ್ಕೆ ಇಳಿಸಲಾಯಿತು. ಇದರಿಂದಾಗಿ ಮತದಾರರ ಸಂಖ್ಯೆ ಏರಿಕೆಯಾಯಿತು. ಇದರ ಫಲವಾಗಿ ಪಿಯುಸಿಯಾದ ತರುಣರು ಸಹ ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಅವಕಾಶ ದೊರಕಿದಂತಾಯಿತು. ಮತ ಚಲಾವಣೆಗೆ ಕೇಂದ್ರ ಮತ್ತು ರಾಜ್ಯ ಚುನಾವಣಾ ಆಯೋಗಗಳು ವ್ಯಕ್ತಿಗಳಿಗೆ ಗುರುತಿನ ಚೀಟಿಯನ್ನು ನೀಡುತ್ತಿವೆ. ಈ ಚೀಟಿಗಳು ಮತದಾನಕ್ಕೆ ಅಷ್ಟೇ ಅಲ್ಲದೇ ಹಲವು ಸರ್ಕಾರಿ ಸೌಲಭ್ಯಗಳನ್ನು ಜನಸಂಖ್ಯಾ ಬಲವನ್ನು ಸೂಚಿಸುತ್ತವೆ. ಇಂತಹ ಪಡಿತರ ಚೀಟಿಯನ್ನು ಪಡೆದ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ಜನರ ಕುರಿತು ಮಾಹಿತಿಯನ್ನು ಕೋಷ್ಟಕ ೪.೧೩ ನೀಡುತ್ತದೆ.

ಸಮೀಕ್ಷೆಯಂತೆ ೧೫೩೧ ಕುಟುಂಬಗಳಲ್ಲಿ ೩೭೮೦ ಜನರು ಮತದಾನದ ಚೀಟಿಯನ್ನು ಪಡೆದಿದ್ದಾರೆ. ಇದರಲ್ಲಿ ೨೦೦೩ ಜನ ಪುರುಷರು. ೧೭೭೭ ಮಹಿಳಾ ಮತದಾರರಿದ್ದಾರೆ. ಅತಿ ಹೆಚ್ಚು ಮತದಾರರು

ಹಿರಿಯೂರು ತಾಲ್ಲೂಕಿನಲ್ಲಿದ್ದು ಪ್ರಸ್ತುತ ಸಾಮಾನ್ಯ ವಿಧಾನಸಭಾ ಕ್ಷೇತ್ರದಲ್ಲಿ ತಮ್ಮ ಸಮುದಾಯದ ಅಭ್ಯರ್ಥಿಯನ್ನೇ ಗೆಲ್ಲಿಸಿಕೊಂಡಿರುವುದು ಕಂಡುಬಂದಿದೆ. ಇದಕ್ಕೆ ಕಾರಣ ಅತಿ ಹೆಚ್ಚು ಮತದಾರರು ಹಾಗೂ ಇತ್ತೀಚೆಗೆ ತಮ್ಮ ನೆಲೆಯನ್ನು ಕಂಡುಕೊಂಡು ಈ ಸಮುದಾಯದವರೇ ಆಗಿರುವುದು ಇನ್ನುಳಿದಂತೆ ಚಳ್ಳಕೆರೆಯಲ್ಲಿ ಕೇವಲ ೭೪೯ ಜನರು, ಅತಿ ಕಡಿಮೆ ಎಂದರೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಕೇವಲ ೨೨೧ ಜನರು ಮಾತ್ರ ಚುನಾವಣೆಯ ಹಕ್ಕನ್ನು ಪಡೆದು ಅಲ್ಪಸಂಖ್ಯಾತರಾಗಿದ್ದಾರೆ. ಉಳಿದಂತೆ ೬೩೭ ಮತದಾರರಿರುವ ಹೊಳಲ್ಕೆರೆಯಲ್ಲಿ ನಿರ್ಣಯ ಪಾತ್ರ ವಹಿಸುತ್ತಿದ್ದಾರೆ.

ಇಷ್ಟೇ ಅಲ್ಲದೇ ಗುರುತಿನ ಚೀಟಿ ಹೊಂದಿದವರಲ್ಲಿ ವಯಸ್ಕರಾಗಿದ್ದು ಓಟಿನ ಚೀಟಿಯನ್ನು ಪಡೆದವರು ೫೫೮ ಮತ್ತು ೪೩೩೮ ಜನರಿದ್ದಾರೆ. ಒಟ್ಟಾರೆಯಾಗಿ ಕಾಡುಗೊಲ್ಲರ ಶಿಕ್ಷಣ ಪ್ರಮಾಣ ಅಧಿಕವಾಗಿದ್ದು, ಅದರಂತೆಯೇ ಹಿರಿಯೂರಿನಲ್ಲಿ ಅಧಿಕ ಸಂಖ್ಯೆಯ ಮತದಾರರಿದ್ದು, ಮೊಳಕಾಲ್ಮೂರಿನಲ್ಲಿ ಕಡಿಮೆ ಪ್ರಮಾಣದಲ್ಲಿ ಇದ್ದಾರೆ ಎಂದು ಸಮೀಕ್ಷೆ ತಿಳಿಸುತ್ತದೆ.

**ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲೂಕುವಾರು, ವಿಧವಾ ಮಾಶಾಸನ ಪ್ರಮಾಣ**

**ಕೋಷ್ಟಕ ೪.೧೩**

| ಕ್ರಸಂ. | ತಾಲೂಕುಗಳು | ಕುಟುಂಬ | ವಿಧವೆಯರು | | ವಿಧವಾವೇತನ | | ವಿ.ವೇ. ಹೊಂದಿರದವರು | |
|---|---|---|---|---|---|---|---|---|
| | | | ಹೆಣ್ಣು | ಒಟ್ಟು | ಹೆಣ್ಣು | ಒಟ್ಟು | ಹೆಣ್ಣು | ಒಟ್ಟು |
| ೧. | ಚಳ್ಳಕೆರೆ | ೨೯೫ | ೨೬ | ೨೬ | ೪೫ | ೪೫ | ೮ | ೮ |
| ೨. | ಚಿತ್ರದುರ್ಗ | ೧೯೯ | ೧ | ೧ | ೩೦ | ೩೦ | ೧೧ | ೧೧ |
| ೩. | ಮೊಳಕಾಲ್ಮೂರು | ೮೨ | ೬೭ | ೬೭ | ೨೧ | ೨೧ | ೫ | ೫ |
| ೪. | ಹಿರಿಯೂರು | ೪೨೮ | ೧೦ | ೧೦ | ೨೫ | ೨೫ | ೦ | ೦ |
| ೫. | ಹೊಸದುರ್ಗ | ೧೫೮ | ೧೧೭ | ೧೧೭ | ೧೫ | ೧೫ | ೭ | ೭ |
| ೬. | ಹೊಳಲ್ಕೆರೆ | ೨೨೯ | | | ೧೧ | ೧೧ | ೦ | ೦ |
| | ಒಟ್ಟು | ೧೩೯೧ | ೨೨೧ | ೨೨೧ | ೧೪೭ | ೧೪೭ | ೩೧ | ೩೧ |

ವ್ಯಕ್ತಿಯು ವಿವಾಹ ಎಂಬ ಸಂಸ್ಥೆಯ ಸದಸ್ಯನಾದಾಗ ಸಹಜವಾಗಿಯೇ ಇಂದು ಕುಟುಂಬದ ಮುಖ್ಯಸ್ಥನಾಗಿ ಒಂದು ಹೆಣ್ಣಿಗೆ ಗಂಡನಾಗುತ್ತಾನೆ. "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಎಂಬ ನಾಣ್ಣುಡಿಯಂತೆ ಆಕೆಯ ಸಂಪೂರ್ಣ ಜವಾಬ್ದಾರಿಯನ್ನು ಗಂಡನಾದವನು ನಿರ್ವಹಿಸಬೇಕಾಗುತ್ತದೆ. ಇವನ ಅಕಾಲಿಕ ಮರಣದಿಂದಾಗಿ ತನ್ನ ಸೌಭಾಗ್ಯತನವನ್ನು ಕಳೆದುಕೊಂಡು ಸಮುದಾಯದ ಕಾರ್ಯಕಟ್ಟೆಗಳಿಂದ ನಿಷೇಧಕ್ಕೆ ಒಳಗಾಗುತ್ತಾಳೆ. ವಿಧವೆಯ ಪಟ್ಟವನ್ನು ಅಲಂಕರಿಸಿ ಇತ್ತ ತವರುಮನೆಗೆ ಹೋಗದೇ ಗಂಡನ ಮನೆಯಲ್ಲಿಯೇ ಅಬಲೆಯ ಬಾಳು ಬಾಳುತ್ತಾಳೆ. ಇಂತಹ ಅಬಲೆಯರು ಮರುಮದುವೆಗೆ ಕಾಡುಗೊಲ್ಲ ಸಮುದಾಯದಲ್ಲಿ ಅರ್ಹರಲ್ಲ. ಇದೇ ತರಹದ ಸಂಕಷ್ಟ ಸ್ಥಿತಿಯ ವಿಧವೆಯರಿಗೆ ತಮ್ಮ ಮೂಲಬೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸರ್ಕಾರ ಸಹಾಯ ಧನವನ್ನು ನೀಡುತ್ತಿದೆ. ಕೋಷ್ಟಕ ೪.೧೪ರಲ್ಲಿ ತಿಳಿಸಿರುವಂತೆ ವಿಧವೆಯರ ಸಂಖ್ಯೆ ೧೪೭ ಇದೆ. ಇವರಿಗೆ ನೀಡುವ ಮಾಸಾಶನ ಪಡೆಯುವಲ್ಲಿ ಕಾಡುಗೊಲ್ಲ ಸಮುದಾಯದ ವಿಧವೆಯರು ಶಕ್ತರಾಗಿದ್ದಾರೋ ಇಲ್ಲವೋ ಎಂಬುದನ್ನು ಕೋಷ್ಟಕ ೪.೧೪ ತಿಳಿಸುತ್ತದೆ.

ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಒಟ್ಟು ೧೪೭ ಜನ ವಿಧವೆಯರಿದ್ದು ಇದರಲ್ಲಿ ೧೧೬ ಜನರು ವಿಧವಾವೇತನ ಪಡೆಯುತ್ತಿದ್ದು ೩೧ ಜನ ಈ ಮಾಸಾಶದಿಂದ ವಂಚಿತರಾಗಿದ್ದಾರೆ. ಇದಕ್ಕೆ ಕಾರಣ ಜನ ಪ್ರತಿನಿಧಿಗಳ ನಿರ್ಲಕ್ಷ್ಯತನ, ಅಧಿಕಾರಿವರ್ಗದವರ ಲಂಚಗುಳಿತನವು ಕಾರಣವಾಗಿರಬಹುದು. ಈ ಆರು ತಾಲೂಕುಗಳಲ್ಲಿ ಚಳ್ಳಕೆರೆಯಲ್ಲಿ ೪೫ ಜನ ವಿಧವಾವೇತನ ಪಡೆಯುತ್ತಿದ್ದಾರೆ. ಒಟ್ಟಾರೆಯಾಗಿ ಚಿತ್ರದುರ್ಗ ತಾಲ್ಲೂಕಿನಲ್ಲಿ ಮಾತ್ರ ವಿಧವಾವೇತನ ಪಡೆದವರ ಪ್ರಮಾಣ ಅಧಿಕವಾಗಿ ಕಂಡು ಬರುತ್ತದೆ.

ಸಮೀಕ್ಷೆಗೊಳಪಟ್ಟ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲೂಕುವಾರು, ಲಿಂಗವಾರು ಸರ್ಕಾರಿ ಸೌಲಭ್ಯಗಳ ಇತರೆ ಪ್ರಮಾಣ

ಕೋಷ್ಟಕ ೪.೧೪.

| ಕ್ರ.ಸಂ. | ತಾಲೂಕುಗಳು | ಕುಟುಂಬ | ಸರ್ಕಾರಿ ಸೌಲಭ್ಯಗಳು | | | | | | | | |
|---|---|---|---|---|---|---|---|---|---|---|---|
| | | | ಅಂಗವಿಕಲ | | | ವೃದ್ಧಾಪ್ಯವೇತನ | | | ಶಿಷ್ಯವೇತನ | | |
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧. | ಚಳ್ಳಕೆರೆ | ೨೯೫ | ೮ | ೦ | ೮ | ೭ | ೯ | ೧೬ | ೪ | ೩ | ೭ |
| ೨. | ಚಿತ್ರದುರ್ಗ | ೧೯೯ | | ೭ | ೭ | ೨ | ೫ | ೭ | | | |
| ೩. | ಮೊಳಕಾಲ್ಮೂರು | ೮೨ | ೪ | ೦ | ೪ | ೩ | ೮ | ೧೧ | ೫ | ೪ | ೯ |
| ೪. | ಹಿರಿಯೂರು | ೪೨೮ | ೧ | ೧ | ೨ | ೫ | ೮ | ೧೩ | ೬ | ೦ | ೬ |
| ೫. | ಹೊಸದುರ್ಗ | ೧೫೮ | ೨ | | ೨ | ೩ | ೪ | ೭ | | ೧ | ೧ |
| ೬. | ಹೊಳಲ್ಕೆರೆ | ೨೨೯ | ೦ | ೦ | ೦ | ೬ | ೫ | ೧೧ | ೧೧ | ೯ | ೨೦ |
| | ಒಟ್ಟು | ೧೩೯೧ | ೧೫ | ೧ | ೧೬ | ೨೪ | ೪೧ | ೬೫ | ೨೮ | ೨೨ | ೫೦ |

ಮಾನವನ ವಿಕಾಸವನ್ನು ಗಮನಿಸಿದಾಗ ಒಂಟಿತನದ ಬದುಕಿಗೆ ಇತಿಶ್ರೀ ಹಾಡಿ ಗುಂಪು ಬದುಕಿಗೆ ಕಾಲಿಟ್ಟಾಗಿನಿಂದಲೂ ಮಾನವ ಸಂಬಂಧಗಳ ಸಂಕೀರ್ಣ ಬಲೆಯಿಂದ ಪ್ರಬಲರಿಂದ ದುರ್ಬಲರ ರಕ್ಷಣೆಯ ಕಾರ್ಯ ನಡೆಯಿತು. ಈ ಪ್ರಬಲವೇ ಗುಂಪಿನ ನಾಯಕ ಮುಂದಾಳಾಗಿ ನಿಯೋಜಿಸಲ್ಪಟ್ಟವನು. ಚಾರ್ಲ್ಸ್ ಡಾರ್ವಿನ್‌ನ ವಿಕಾಸ ಸಿದ್ಧಾಂತದಿಂದ ಪ್ರೇರೇಪಿತವಾದ ಸಾಮಾಜಿಕ ಒಪ್ಪಂದ ಸಿದ್ಧಾಂತದಂತೆ (Social Contract) ಪ್ರಬಲರಾದವರು ದುರ್ಬಲರಾಧವರನ್ನು ತುಳಿಯುತ್ತಾ ನಾಯಕನಾಗುವ, ಅಂದರೆ ಪ್ರಬಲರು ಬದುಕುವರು ದುರ್ಬಲರು ಸಾಯುವರು ಎಂಬ ಪರಿಕಲ್ಪನೆಯನ್ನು ಸಮಾಜದಲ್ಲಿ ರೂಪಿಸಿದ್ದೇ ಆದಲ್ಲಿ ಅನುತ್ಪಾದಕ ವರ್ಗವೆಂದು ಕರೆಯಲ್ಪಡುವ ಇತರರ ನೆರಳಿನಲ್ಲಿ ಆಶ್ರಯ ಬಯಸಿ ಬದುಕುವ ಅಂಗವಿಕಲರು, ವೃದ್ಧರು ಮತ್ತು ಮಕ್ಕಳ ಸ್ಥಿತಿ ಅಮಾನವೀಯವಾಗುವುದು. ಇಂತಹ ಪ್ರಬಲರ ದಬ್ಬಾಳಿಕೆ ಇಂದಿನ ರಕ್ಷಣೆ ಮತ್ತು ಅಭಿವೃದ್ಧಿಯ ದೃಷ್ಟಿಯಿಂದ ಕಾನೂನಾತ್ಮಕವಾಗಿ ಬೆಂಬಲ ನೀಡಿರುವುದು. ಇಂತಹ ಅನುತ್ಪಾದಕರ ಬದುಕು ಸುಗಮವಾಗಿ ಸಾಗಲು ಸಹಕಾರಿಯಾಗಿದೆ. ಇವರ ಅಭಿವೃದ್ಧಿಗಾಗಿ ಸರ್ಕಾರ, ಅಂಗವಿಕಲರಿಗೆ ಮಾಸಿಕವೇತನ, ವೃದ್ಧರಿಗೆ ವೃದ್ಧಾಪ್ಯವೇತನ ಮತ್ತು ಮಕ್ಕಳಿಗೆ ಶಿಷ್ಯವೇತನದ ರೂಪದಲ್ಲಿ ಅವರ ಮೂಲಭೂತ ಅವಶ್ಯಕತೆಗೆ ನೆರವಾಗುತ್ತಲಿದೆ. ಈ ನಿಟ್ಟಿನಲ್ಲಿ ಈ ಅನುತ್ಪಾದಕ ವರ್ಗ ಎಲ್ಲಾ ಸಮುದಾಯಗಳಲ್ಲಿ ಕಂಡು ಬರುತ್ತಿದೆ. ಕಾಡುಗೊಲ್ಲರನ್ನೇ ಈ ವರ್ಗವು ಹೇಗೆ ಸರ್ಕಾರಿ ಸೌಲಭ್ಯಗಳನ್ನು ಪಡೆದು ತಮ್ಮ ಕಷ್ಟದಾಯಕ ಬದುಕನ್ನು ಸಾಗಿಸುತ್ತಿದ್ದಾರೆ ಎಂಬುದನ್ನು ಕೋಷ್ಟಕ ೪.೧೫ ತಿಳಿಯಪಡಿಸುತ್ತದೆ.

ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದಲ್ಲಿ ೧೬ ಜನ ಅಂಗವಿಕಲರು ಅಂಗವಿಕಲರ ವೇತನ ಪಡೆಯುತ್ತಿರುವರು. ಈ ೧೬ ಜನ ಜನರಲ್ಲಿ ಕೇವಲ ಒಬ್ಬ ಮಹಿಳೆ ಮಾತ್ರ ಅಂಗ ವೈಫಲ್ಯದಿಂದ ಬಳಲುತ್ತಾ ಮಾಸಾಶನ ಪಡೆಯುತ್ತಿದ್ದಾಳೆ. ವೃದ್ಧಾಪ್ಯವೇತನ ಪಡೆಯುತ್ತಿರುವವರ ಸಂಖ್ಯೆ ೬೫ ಇದ್ದು ಇದರಲ್ಲಿ ೨೪ ಜನ ಪುರುಷರು ೪೧ ಮಂದಿ ಮಹಿಳೆಯರಿದ್ದಾರೆ. ಇದನ್ನು ಗಮನಿಸಿದಾಗ ವೃದ್ಧರಲ್ಲಿ ಮಹಿಳೆಯರ ಪ್ರಮಾಣ ಅಧಿಕವಿರುವುದು ಕಂಡುಬರುತ್ತದೆ. ಉಳಿದಂತೆ ಅನುತ್ಪಾದಕರಲ್ಲಿ ಮಕ್ಕಳು ವಿದ್ಯಾಭ್ಯಾಸದಲ್ಲಿ ನಿರತರಾಗಿದ್ದಾಗ, ಅವರು ತಂದೆ ತಾಯಿ ಪೋಷಕರನ್ನೇ ಅವಲಂಬಿಸಿ ಬದುಕುತ್ತಾರೆ. ಇಂತಹ ಮಕ್ಕಳಿಗೆ ವಿದ್ಯಾರ್ಥಿವೇತನ ನೀಡುವ ಮೂಲಕ ಶಿಕ್ಷಣ ಸೌಲಭ್ಯ ಪಡೆಯಲು ಅನುಕೂಲ ಮಾಡಿಕೊಡಲಾಗಿದೆ. ಜಿಲ್ಲೆಯ ಸಮೀಕ್ಷೆಯ ಅಂಕಿ ಅಂಶದಂತೆ ಒಟ್ಟು ೫೦ ಮಕ್ಕಳು ಶಿಷ್ಯವೇತನ ಪಡೆಯುತ್ತಿರುವವರು. ಇವರಲ್ಲಿ ೨೮ ಗಂಡು ೨೨ ಹೆಣ್ಣು ಮಕ್ಕಳಿದ್ದಾರೆ. ಕಾಡುಗೊಲ್ಲ ಸಮುದಾಯವು ಹಿಂದುಳಿದ ವರ್ಗದ ಮೀಸಲಾತಿ ಅಡಿಯಲ್ಲಿ ಸೌಲಭ್ಯ ಪಡೆಯುತ್ತಿದ್ದು ಪ್ರಸ್ತುತ ವಿದ್ಯಾಸಿರಿಯಂತಹ ಸಹಾಯಧನ ಯೋಜನೆಗಳು ಕಾಡುಗೊಲ್ಲರು ಸೇರಿದಂತೆ ಇತರ ಹಿಂದುಳಿದ ವರ್ಗಗಳ ಶೈಕ್ಷಣಿಕ ಪ್ರಗತಿ ಸಾಧಿಸಲು ನೆರವಾಗಿದೆ.

ಒಟ್ಟಾರೆಯಾಗಿ ಅವಲೋಕಿಸಿದಾಗ ಪ್ರಸ್ತುತ ಅಧ್ಯಾಯವು ಕಾಡುಗೊಲ್ಲರ ಪ್ರಸ್ತುತ ಸ್ಥಿತಿಗತಿಯನ್ನು ತಿಳಿಸುತ್ತಾ ಅವರ ಹಿಂದಿನ ಸ್ಥಿತಿ ಹೇಗಿತ್ತು, ಈಗ ಯಾವ ಕಾರಣಗಳಿಂದ ಗತಿಸಿದೆ ಎಂಬುದನ್ನು

ತಿಳಿಸುತ್ತದೆ. ಈ ಅಧ್ಯಾಯದಲ್ಲಿ ಕಾಡುಗೊಲ್ಲರ ಜನಸಂಖ್ಯೆಯ ಹಂಚಿಕೆ, ಲಿಂಗಾನುಪಾತ, ಶೈಕ್ಷಣಿಕ ಪ್ರಮಾಣ, ಕಸುಬುಗಳ ಪ್ರಮಾಣ, ಪಶುಸಂಪತ್ತಿನ ಪ್ರಮಾಣ. ಭೂಹಿಡುವಳಿಗಳ ಹಂಚಿಕೆ, ಸರ್ಕಾರಿ ಸೌಲಭ್ಯಗಳನ್ನು ಪಡೆದ ಫಲಾನುಭವಿಗಳ ಪ್ರಮಾಣ, ವಾಸದ ನೆಲೆಯ ಮಾದರಿ, ವೈವಾಹಿಕ ಸ್ಥಾನಮಾನ, ಮತದಾರರ ಪ್ರಮಾಣ, ಇತ್ಯಾದಿ ಅಂಶಗಳ ಕುರಿತಾಗಿ ಮಾಹಿತಿ ನೀಡುತ್ತದೆ. ಜೊತೆಗೆ ಸ್ಥಿತಿಯು ಗತಿಸಲು ಕಾರಣವೇನು ಮತ್ತು ಅದರ ಪರಿಣಾಮಗಳೇನು ಎಂಬ ಅಂಶಗಳ ಕುರಿತು ವಿಶ್ಲೇಷಣಾತ್ಮಕ ಮಾಹಿ ಯನ್ನು ಈ ಅಧ್ಯಾಯವು ನೀಡುತ್ತದೆ.

**ಅಡಿ ಟಿಪ್ಪಣಿಗಳು**

೧. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲ, ಸಮಾಜೋ, ಸಾಂಸ್ಕೃತಿಕ ಅಧ್ಯಯನ, ೨೦೦೫, ಪುಟ–೧೧೨.

೨. www.drdo.gov.in

೩. ವಿಮಲ ಅಮಲಪ್ಪ, ಕಾಡುಗೊಲ್ಲರ ಆರ್ಥಿಕ ಸ್ಥಿತಿಗತಿಗಳು, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ, ೨೦೦೯, ಪುಟ–೧೮೮.

೪. ಅದೇ, ಪುಟ–೧೮೮.

೫. ಶಂಕರ ನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ೧೯೮೨, ಪುಟ–೩೩.

೬. ಗುರುಲಿಂಗಯ್ಯ ಎಂ., ಕರ್ನಾಟಕದ ಗೊಲ್ಲ ಸಮುದಾಯ, ಸಮಾಜೋ, ಸಾಂಸ್ಕೃತಿಕ ಅಧ್ಯಯನ, ೨೦೦೫, ಪುಟ–೧೧೫.

೭. ವಿರುಪಾಕ್ಷಪ್ಪ ಜಿ., ಕಾಡುಗೊಲ್ಲರ ದೈವಗಳ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಅಪ್ರಟಿತ ಮಹಾಪ್ರಬಂಧ, ೨೦೧೯, ಪುಟ–೩೧.

೮. ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪುಟ–೪೭, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೧೭.

೯. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲ ಸಮುದಾಯ ಪುಟ–೧೦೫, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.

೧೦. ಅದೇ, ಪುಟ–೧೦೯.

೧೧. ಲೂಯಿಸ್. ಎ.ಎ.ಡಿ., ಟ್ರೈಬ್ಸ್ ಆಫ್ ಮೈಸೂರು, ಪು–೮೬, ೧೯೬೩.

೧೨. ಅಂಬೇಡ್ಕರ್ ಬರೆಹಗಳು ಮತ್ತು ಭಾಷಣಗಳು, ಸಂ.೧, ಅಂಬೇಡ್ಕರ್ ಪು–೭, ೧೯೯೦.

೧೩. ಎಂ.ಚಿದಾನಂದ ಮೂರ್ತಿ, ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಪು-೪, ೧೯೮೫.

೧೪. ಪ್ರಭಾಕರ ಎ.ಎಸ್., ಆದಿವಾಸಿ ಆಖ್ಯಾನ, ಅಲೆಮಾರಿಗಳ ಶಾಪಗ್ರಸ್ತ ಪಯಣ, ಪು-೪೧೫, ಸಂ, ಸಿದ್ದಾರ್ಥ ಪ್ರಕಾಶನ, ಹೊಸಪೇಟೆ,೨೦೦೮.

೧೫. ಪ್ರಭಾಕರ, ಎ.ಎಸ್., ಆದಿವಾಸಿ ಆಖ್ಯಾನ, ಕಾಡುಗೊಲ್ಲರ ಬದುಕಿನ ಅರ್ಥವ್ಯವಸ್ಥೆ, ಕಾಳೇಗೌಡ ನಾಗವಾರ, ಪು-೩೬೮, ಸಂ. ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೮.

೧೬. ಜೋಷಿ ಶಂ.ಬಾ., ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ, ಭಾಗ ೨, ೧೯೬೬, ಪು-೩.

೧೭. ಪ್ರಭಾಕರ. ಎ.ಎಸ್., ಆದಿವಾಸಿ ಆಖ್ಯಾನ, ಕಾಡುಗೊಲ್ಲರ ಬದುಕಿನ ಅರ್ಥವ್ಯವಸ್ಥೆ, ಕಾಳೇಗೌಡ ನಾಗವಾರ, ಪು-೩೬೯, ಸಂ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೮.

೧೮. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲ, ೨೦೦೮, ಪು-೧೧೨.

೧೯. ಎಚ್ಚಾರ್ಕೆ, ಭಾರತದ ಆರ್ಥಿಕ ವ್ಯವಸ್ಥೆ, ೨೦೦೨, ಪು-೫೧೨.

೨೦. ರಾಮನ್ ಬಿಎಸ್., ಭಾರತದ ಆರ್ಥಿಕ ಅಭಿವೃದ್ಧಿ, ೨೦೦೫, ಪು-೧೬೧.

೨೧. ಬಿ. ಪ್ರಭಾಕರ ಶಿಶಿಲ, ಅಭಿವೃದ್ಧಿ ಮತ್ತು ಯೋಜನಾ ಅರ್ಥಶಾಸ್ತ್ರ, ೧೯೯೭, ಪು-೩೮೬.

೨೨. Elwin V.A, New Delhi for Tribal India, ೧೯೬೩, ಪು-೧೦೩

## ಅಧ್ಯಾಯ : ಐದು

# ಕಾಡುಗೊಲ್ಲರ ಮೇಲೆ ಜಾಗತೀಕರಣದ ಪ್ರಭಾವಗಳು

೫.೧. ಪೀಠಿಕೆ

೫.೨. ಕಾಡುಗೊಲ್ಲರ ಸಾಮಾಜಿಕ ಬದುಕಿನ ಮೇಲೆ ಜಾಗತೀಕರಣದ ಪರಿಣಾಮಗಳು

೫.೩. ಸಮುದಾಯ ಶುದ್ಧತೆ ಮತ್ತು ಕಾಡುಗೊಲ್ಲ ಸಮುದಾಯ

೫.೪. ಕಾಡುಗೊಲ್ಲರ ಆರ್ಥಿಕತೆಯ ಮೇಲೆ ಜಾಗತೀಕರಣದ ಪ್ರಭಾವ

೫.೫. ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲ ಸಮುದಾಯದ ಭಾಗವಹಿಸುವಿಕೆ

೫.೬. ವರ್ತಮಾನ ಮತ್ತು ಕಾಡುಗೊಲ್ಲ ಸಮುದಾಯ

## ಅಧ್ಯಾಯ : ಐದು

# ಕಾಡುಗೊಲ್ಲರ ಮೇಲೆ ಜಾಗತೀಕರಣದ ಪ್ರಭಾವಗಳು

### ೫.೧. ಪೀಠಿಕೆ

ಜಾಗತಿಕ ಇತಿಹಾಸವನ್ನು ಗ್ರಹಿಸಿದಾಗ ಯುರೋಪ್ ಜಗತ್ತಿನ ಇತರ ಎಲ್ಲಾ ಖಂಡಗಳಿಗಿಂತ ವೇಗವಾಗಿ ಆಧುನಿಕತೆಯೆಡೆಗೆ ಮುಖ ಮಾಡಿ ಅವುಗಳನ್ನು ಹಿಡಿತ/ಅಧೀನದಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸಿ ಯಶಸ್ಸು ಸಾಧಿಸಿದೆ ಮತ್ತು ಸಾಧಿಸುತ್ತಿದೆ. ಯುರೋಪಿನ ಪೋರ್ಚುಗಲ್‌ನ ಲಿಬ್ಬನ್ ನಗರದಲ್ಲಿ ಆರಂಭವಾದ ನಾವಿಕ ಶಾಲೆ ಪ್ರಪಂಚದ ಭೌಗೋಳಿಕ ಮೇರೆಯನ್ನು ಅರಿಯಲು ಮತ್ತು ಸಂಪತ್ತನ್ನು ದೋಚಲು ಕಾರಣವಾಯಿತು. ಸಾಗರಯಾನಕ್ಕೆ ಪ್ರೇರಣೆ, ಭಾರತ ಮತ್ತು ಯುರೋಪಿನ ಭೂಮಾರ್ಗದ ಕೇಂದ್ರ ಅಥವಾ ಜಂಕ್ಷನ್ ಆಗಿದ್ದ ಕಾನ್‌ಸ್ಟಾಂಟಿನೋಪಲ್ ನಗರವನ್ನು ಟರ್ಕರು ೧೪೫೩ರಲ್ಲಿ ತಮ್ಮ ಅಧೀನಕ್ಕೆ ತೆಗೆದುಕೊಂಡು ಯೂರೋಪಿಯನ್ನರನ್ನು ನಿರ್ಬಂಧಿಸಿ ಇದರ ಪರಿಣಾಮವಾಗಿ ಜಲಮಾರ್ಗದ ಅನ್ವೇಷಣೆಗಳು ಜರುಗಿದವು. ಸಾಗರಯಾನದ ಜೊತೆ ಜೊತೆಗೆ ಕಾಂಪಲ್, ದಿಕ್ಸೂಚಿ, ದೂರದರ್ಶಕ, ಇತ್ಯಾದಿ ಸ್ಥಳ ಪತ್ತೆಯ ಮತ್ತು ಮಾರ್ಗದ ರೂಪರೇಶೆಗಳನ್ನು ತಯಾರಿಸಲು ನೆರವಾದ ಉಪಕರಣಗಳ ಆವಿಷ್ಕಾರವು ನಡೆಯಿತು.

ಯುರೋಪಿನಲ್ಲಾದ ಈ ಆವಿಷ್ಕಾರಗಳು ಹೇರಳವಾದ ಸಂಪನ್ಮೂಲಗಳ ಕ್ರೋಢೀಕರಣ ಮತ್ತು ಯಂತ್ರಗಳ ಬಳಕೆಯಿಂದ ಕೈಗಾರಿಕಾ ಕ್ರಾಂತಿ ಆಯಿತು. ಇದರ ಫಲವಾಗಿ ವಸಾಹಾತುಶಾಹಿ ನೀತಿ ಅಸ್ತಿತ್ವಕ್ಕೆ ಬಂದಿತು. ವಸಾಹತುಗಳು ಕೈಗಾರಿಕರಣದ ಮೂಲ ಬೇರುಗಳ ರೀತಿಯಲ್ಲಿ ಯಂತ್ರಗಳಿಗೆ ಬೇಕಾದ ಕಚ್ಚಾಸಾಮಗ್ರಿಗಳನ್ನು ಒದಗಿಸುವ ಕೇಂದ್ರಗಳಾದವು. ಸಿದ್ಧವಸ್ತುಗಳ ತಯಾರಿಕೆ ಮಾತ್ರ ಯುರೋಪಿನಲ್ಲಿ ಸಿದ್ಧಗೊಂಡ ವಸ್ತುಗಳ ಮಾರುಕಟ್ಟೆಯಾಗಿ ಮತ್ತೊಮ್ಮೆ ವಸಾಹತು ನೆಲೆಗಳು ರೂಪಗೊಂಡವು. ಇದರಿಂದಾಗಿ ಮಾರುಕಟ್ಟೆಯ ವಿಸ್ತರಣೆ ಜಗತ್ತಿನಾದ್ಯಂತ ವಿಸ್ತರಿಸಿ, ಏಕೀಕೃತ ವ್ಯಾಪಾರ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು. ಇದರ ಜೊತೆಗೆ ಗ್ರಾಮಸಂಸ್ಕೃತಿ ಮರೆಯಾಗಿ ನಗರ ಸಂಸ್ಕೃತಿ ಕಡೆಗೆ ಜನರು ಮಾರುಹೋದರು. ಇದನ್ನೆ ನಾವು ನಗರೀಕರಣ ಮತ್ತು ಉಪನಗರೀಕರಣ ಎಂದು ಹೇಳುತ್ತೇವೆ. ಕೈಗಾರೀಕರಣ ಮತ್ತು ನಗರೀಕರಣದ ಪರಿಣಾಮ ಭಾರತದ ಜಾತಿ ಆಧಾರಿತ ಸಮಾಜ

ಸೇರಿದಂತೆ ಪಾಶ್ಚಿಮಾತ್ಯ ವರ್ಗಸಮಾಜವು ತೀವ್ರಗತಿಯ ಸ್ಥಿತ್ಯಂತರಕ್ಕೆ ಕಾರಣವಾಯಿತು. ಇದರಿಂದಾಗಿ ಕುಟುಂಬದ ರಚನೆ ಗಾತ್ರ ಪ್ರಾಥಮಿಕ ಮತ್ತು ಮಾಧ್ಯಮಿಕ ಕಾರ್ಯಗಳು ಮತ್ತು ಸಾಮಾಜೀಕರಣದ ಪ್ರಕ್ರಿಯೆಗಳಲ್ಲಿ ಬದಲಾವಣೆಯುಂಟಾಯಿತು. ಈ ಕೈಗಾರಿಕೀಕರಣದ ತರುವಾಯ ವಸಾಹತು ದೇಶಗಳು ಸ್ವಾತಂತ್ರ್ಯಗೊಂಡು ಆಳಿದ ಸಂಪನ್ಮೂಲಗಳನ್ನು ಬಳಸಿಕೊಂಡು ಜಾಗತಿಕ ಮಟ್ಟದಲ್ಲಿ ಮೂರು ಮಾದರಿಯ ವರ್ಗೀಕರಣದ ದೇಶಗಳು ಅಸ್ತಿತ್ವಕ್ಕೆ ಬಂದವು. ಅವುಗಳನ್ನು ಅಭಿವೃದ್ಧಿ ಹೊಂದಿದ, ಅಭಿವೃದ್ಧಿ ಹೊಂದುತ್ತಿರುವ ಮತ್ತು ಅಭಿವೃದ್ಧಿ ಹೊಂದದ ದೇಶಗಳು ಎಂದು ಕರೆಯಲಾಯಿತು. ವಸಾಹತುಶಾಹಿತ್ವವನ್ನು ವಿಶ್ವಸಂಸ್ಥೆ ಮತ್ತು ಲೀಗ್ ಆಫ್ ನೇಷನ್ ನಂತಹ ಅಂತರರಾಷ್ಟ್ರೀಯ ಮಟ್ಟದ ಸಂಸ್ಥೆಗಳು ದುರ್ಬಲಗೊಳಿಸಿದವು. ಆದರೆ ಈ ವಸಾಹತುಶಾಹಿತ್ವ ವ್ಯಾಪಾರದ ಹಿನ್ನೆಲೆಯಲ್ಲಿ ಸಾಮ್ರಾಜ್ಯಶಾಹಿತ್ವದ ರೂಪ ಪಡೆಯಿತು. ಸಾಮ್ರಾಜ್ಯಶಾಹಿತ್ವದ ಆಕ್ರಮಣದ ಸ್ವರೂಪದಲ್ಲಿ ವ್ಯಾಪಾರ ಸಮರ ಕಂಡುಬಂದಿತು. ಇಲ್ಲಿ ಆರ್ಥಿಕ ಅಂಶಗಳ ಮೂಲಕ ಅಧೀನತೆ ಮತ್ತು ಪ್ರಬಲತೆಯ ಪಟ್ಟಗಳು ರೂಪಿತವಾದವು. ಈ ಸ್ವರೂಪದಲ್ಲಿ ಶ್ರೀಮಂತ ದೇಶಗಳು ಶ್ರೀಮಂತವಾಗುತ್ತಾ ಬಡರಾಷ್ಟ್ರಗಳು ಇನ್ನೂ ತಳಮಟ್ಟಕ್ಕೆ ತನ್ನ ಆರ್ಥಿಕತೆಯನ್ನು ರೂಪಿಸಿಕೊಂಡವು. ಆರ್ಥಿಕ ಅಂಶಗಳು ಪ್ರಪಂಚದ ಎಲ್ಲಾ ಆಗುಹೋಗುಗಳಿಗೂ ಕಾರಣವಾಗುತ್ತದೆ ಎಂಬ ಕಾರ್ಲ್ ಮಾರ್ಕ್ಸ್ ಅವರ ಅಭಿಪ್ರಾಯ ನಿಜಕ್ಕೂ ಪ್ರಸ್ತುತವಾಗಿದೆ. ಸಾಮ್ರಾಜ್ಯಶಾಹಿತ್ವದ ನಂತರದಲ್ಲಿ ಶ್ರೀಮಂತರ ದೇಶಗಳು ಬಡದೇಶಗಳನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಜಾಗತಿಕ ನಾಯಕರಾಗಲು ಮತ್ತು ತಮ್ಮ ಹಿತಾಸಕ್ತಿಗಳನ್ನು ಇವರ ಮೇಲೆ ಹೇರಲು ಪ್ರಯತ್ನಿಸಿದರು. ಇದರ ಫಲವಾಗಿ ಶೀತಲ ಸಮರದಂತಹ ಬುಸುಗುಟ್ಟಿದ ವಾತಾವರಣ ಜಗತ್ತಿನಾದ್ಯಂತ ಸೃಷ್ಟಿಯಾಯಿತು. ಈ ಶೀತಲ ಸಮರದಲ್ಲಿ ಪ್ರಜಾಪ್ರಭುತ್ವ V/S ಸಮಾಜವಾದಿ ರಾಷ್ಟ್ರಗಳ ಧ್ರುವೀಕರಣವು ನಡೆಯಿತು. ಇಂದಿಗೂ ಪ್ರಜಾಪ್ರಭುತ್ವದ ರಾಷ್ಟ್ರಗಳಿಗೆ USA ನಾಯಕನಾಗಿ ಕಮ್ಯೂನಿಷ್ಟ್ ರಾಷ್ಟ್ರಗಳ ಗುಂಪಿನ ನಾಯಕನಾಗಿ ರಷ್ಯಾ ಮತ್ತು ಚೀನಾಗಳು ಹೊರಹೊಮ್ಮಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ಭಾರತ ಅಲಿಪ್ತ ರಾಷ್ಟ್ರವಾಗಿ ತಟಸ್ಥವಾಗಿದ್ದರೂ ಸಹ ಅಮೆರಿಕ ಮತ್ತು ಚೀನಾದ ಟ್ರೇಡ್‌ವಾರ್‌ನಲ್ಲಿ ಭಾಗಿಯಾಗುವುದು ೪ ನೇ ದೊಡ್ಡ ಆರ್ಥಿಕತೆ ಹೊಂದಿರುವ ಭಾರತಕ್ಕೆ ಅನಿವಾರ್ಯವಾಗಿದೆ. ಜಾಗತಿಕವಾಗಿ ಆರ್ಥಿಕ ಸಮರದ ಅವಧಿಯಲ್ಲಿ LPG ಎಂಬ ಆರ್ಥಿಕ ನೀತಿಯ ಭಾರತವನ್ನು ೧೯೯೧ರಿಂದ ಆಕ್ರಮಿಸಿದೆ. ಈ ಹಿಂದೆ ಭಾರತ ಮುಚ್ಚಿದ ಆರ್ಥಿಕತೆ(Closed Economy) ಹೊಂದಿತ್ತು. ಇದರ ಪರಿಣಾಮವಾಗಿ Foreign exchange investment(ವಿದೇಶಿ ವಿನಿಮಯ ಹೂಡಿಕೆಯ ಹಣ) ಕೇವಲ ೧೩ ದಿನಗಳಿಗೆ ಮಾತ್ರ ಪೂರೈಕೆಗೆ ಮಾತ್ರ ಸೀಮಿತವಾಗಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಭಾರತ IMFನ ಬಳಿ ಸಾಲ ಕೇಳಿತು. ಆಗ IMF ಇದಕ್ಕೆ ನಿರಾಕರಿಸಿತು. ಇದಕ್ಕೆ ಕಾರಣ ಭಾರತ ಈ ಹಿಂದೆ IMFನ ಹತ್ತಿರ ಸಾಲ ಪಡೆದಿತ್ತು ಮತ್ತು ಅದನ್ನು ತೀರಿಸದೇ ಮತ್ತೆ ಸಾಲ ಕೇಳಿದ್ದಕ್ಕಾಗಿ IMFನಿಂದ ಭಾರತಕ್ಕೆ ಸಾಲದ ನೆರವು ದೊರೆಯಲಿಲ್ಲ. ಇಂತಹ ಸಂದರ್ಭದಲ್ಲಿ ಪಿ.ವಿ. ನರಸಿಂಹರಾವ್ ಪ್ರಧಾನಮಂತ್ರಿ, ಡಾ.ಮನಮೋಹನ್ ಸಿಂಗ್ ಅವರು ಹಣಕಾಸು ಮಂತ್ರಿಯಾಗಿದ್ದರು. ಇವರಿಬ್ಬರು ಯೋಜಿಸಿದ

ನೀತಿಯನ್ನು"ರಾವ್ ಮೋಹನ್ ಮಾಡೆಲ್" ಎಂದು ಕರೆದರು. ೧೯೯೧ ರಲ್ಲಿ ಭಾರತವು ಮುಚ್ಚಿದ ಆರ್ಥಿಕ ನೀತಿಯಿಂದ ಹೊರಬಂದು ತೆರೆದ ಆರ್ಥಿಕ ನೀತಿಗೆ ಹೊಂದಿಕೊಂಡಿತು. ಇದಕ್ಕೆ ಕಾರಣ IMF ವಿಧಿಸಿದ ಕರಾರುಗಳು. ಭಾರತ ಬೇಡಿಕೆ ಇಟ್ಟ ಸಾಲವನ್ನು ನೀಡಲು ಕೆಲವೊಂದು ಕರಾರುಗಳನ್ನು ವಿಧಿಸಿತು. ಇದರಂತೆ ಭಾರತ "ನ್ಯೂ ಎಕನಾಮಿಕ್ ಪಾಲಿಸಿ" ಎಂಬ ಹೆಸರಿನಲ್ಲಿ LPG ಎಂಬ ನೀತಿಗೆ ಅನಿವಾರ್ಯವಾಗಿ ಹೊಂದಿಕೊಳ್ಳಬೇಕಾಯಿತು. LPG ಎಂದರೆ Liberalization, Privatization & Globalization ಕನ್ನಡದಲ್ಲಿ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ಎಂದಾಗುತ್ತದೆ. ಈ ಮೂರು ಪರಿಕಲ್ಪನೆಗಳನ್ನು ಭಾರತ ತನ್ನ ಆರ್ಥಿಕ ನೀತಿಯಲ್ಲಿ ಅಳವಡಿಸಿಕೊಳ್ಳಬೇಕಾಯಿತು.

ಉದಾರೀಕರಣ ಎಂದರೆ ಭಾರತ ಈವರೆಗೆ ಆರ್ಥಿಕ ನೀತಿಯಲ್ಲಿ ವಿಧಿಸಿದ ಷರತ್ತುಗಳನ್ನು ಸಡಿಲಗೊಳಿಸುವುದು ಖಾಸಗೀಕರಣವೆಂದರೆ ಭಾರತ ಈ ಹಿಂದೆ ಖಾಸಗಿ ವಲಯದ ಸಂಸ್ಥೆಗಳ ಸಹಭಾಗಿತ್ವವನ್ನು ನಿರ್ಬಂಧಿಸಲಾಗಿತ್ತು. ಖಾಸಗಿ ಸಂಸ್ಥೆಗಳಿಗೆ ಭಾರತದ ಆರ್ಥಿಕ ನೀತಿಯಲ್ಲಿ ಅವಕಾಶ ಕಲ್ಪಿಸುವುದು ಹೊಸ ಆರ್ಥಿಕ ನೀತಿಯ ಷರತ್ತಾಗಿತ್ತು. ಇನ್ನುಳಿದಂತೆ ಜಾಗತೀಕರಣ ಭಾರತದ ಆರ್ಥಿಕತೆಯನ್ನು ಜಾಗತಿಕ ಆರ್ಥಿಕತೆಯಿಂದ ಮುಕ್ತ ಆರ್ಥಿಕ ಅವಕಾಶಗಳನ್ನು ಒದಗಿಸುವುದು.

ಇದರಿಂದಾಗಿ ಆರ್ಥಿಕ ವಹಿವಾಟಿನಲ್ಲಿ ತೀವ್ರಗತಿಯ ಏರಿಕೆ ಉಂಟಾಗುವುದು ಎಂಬ ಹಿನ್ನೆಲೆಯಲ್ಲಿ IMF ಮತ್ತು LPGಯ ಪರಿಕಲ್ಪನೆಯಲ್ಲಿ ಷರತ್ತುಗಳನ್ನು ಸರಳೀಕರಣಗೊಳಿಸಿ ಭಾರತದ ಆರ್ಥಿಕತೆಯನ್ನೆ ಬದಲಾಯಿಸಿತು. ಇದರಿಂದ ಭಾರತದ ಸಾಂಪ್ರದಾಯಿಕ ನೀತಿಗಳು ಬದಲಾದವು. ಮುಚ್ಚಿದ ನೀತಿಗಳು ತೆರೆದುಕೊಂಡಾಗ ಸಹಜವಾಗಿಯೇ ವಿದೇಶಿ ಕಂಪನಿಗಳು ಭಾರತದಲ್ಲಿ ಬಂಡವಾಳ ಹೂಡಿಕೆಯಲ್ಲಿ ಸ್ಪರ್ಧೆಗಿಳಿದ್ದವು. ಇವುಗಳ ಸ್ಪರ್ಧೆಯ ನಡುವೆ ಭಾರತದ ಆರ್ಥಿಕ ಮೂಲಗಳು ಆರ್ಥಿಕ ಸಂಕಷ್ಟಕ್ಕೆ ತಳ್ಳಲ್ಪಟ್ಟವು. ಅಷ್ಟೇ ಅಲ್ಲ, ಜಾಗತೀಕರಣ ಎಂಬ ಪ್ರಕ್ರಿಯೆ ಕೇವಲ ಆರ್ಥಿಕತೆಗೆ ಅಷ್ಟೇ ಸೀಮಿತವಾದುದ್ದಲ್ಲ, ಬದಲಾಗಿ ಭಾರತೀಯ ಸಮಾಜದಲ್ಲಿನ ಉಪವ್ಯವಸ್ಥೆ ಮತ್ತು ಕಾರ್ಯಗಳ ಮೇಲೆ ಪ್ರಭಾವ ಬೀರಿತು. ಇಡೀ ವಿಶ್ವವೇ ಒಂದು ಮಾರುಕಟ್ಟೆಯಾಗಿ ರೂಪಿತವಾಯಿತು. ಇದರಿಂದ ಭಾರತೀಯ ಪಾರಂಪರಿಕ ಜ್ಞಾನ ಪೇಟೆಯಾಗಿ ವಿದೇಶೀಯ ಕಂಪನಿಗಳ ಬಂಡವಾಳವಾಯಿತು. ವಿಶಿಷ್ಟ ಸಂಸ್ಕೃತಿ ಹೊಂದಿದ ಬುಡಕಟ್ಟುಗಳು ಮತ್ತು ಅಲೆಮಾರಿ ಸಮುದಾಯಗಳು ತಮ್ಮ ಜೀವನ ವಿಧಾನವನ್ನೇ ಬದಲಾಯಿಸಿಕೊಳ್ಳಬೇಕಾಯಿತು. ಇಂತಹ ಸಮುದಾಯಗಳಲ್ಲಿ ಪಶುಪಾಲಕರಾಗಿ ಪ್ರತ್ಯೇಕ ನೆಲೆಯಲ್ಲಿ ವಾಸಿಸುತ್ತಿದ್ದ ಕಾಡುಗೊಲ್ಲರ ಬದುಕು ಜಾಗತೀಕರಣದ ಫಲವಾಗಿ ಹೇಗೆ ಸ್ಥಿತ್ಯಂತರಕ್ಕೆ ಒಳಗಾಗಿದೆ ಎಂಬುದನ್ನು ಅರಿಯುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

### ೫.೨. ಕಾಡುಗೊಲ್ಲರ ಸಾಮಾಜಿಕ ಬದುಕಿನ ಮೇಲೆ ಜಾಗತೀಕರಣದ ಪರಿಣಾಮಗಳು

ಸಮರ್ಪಕವಾದ ಮತ್ತು ಪರಿಣಾಮಕಾರಿಯಾದ ಆರ್ಥಿಕ ನೀತಿಯು ಯವುದೇ ರಾಷ್ಟ್ರಕ್ಕೆ ಅತ್ಯಾವಶ್ಯಕವಾದುದು. ಅದರಲ್ಲಿಯೂ ಸುಖೀರಾಜ್ಯದ ಕಲ್ಪನೆಯನ್ನು ನನಸಾಗಿಸಲು ಹಾಗೂ

ಅಭಿವೃದ್ಧಿಯ ಸಾಧನೆಯೊಡನೆಯೇ ಅಭಿವೃದ್ಧಿಯ ಫಲಗಳನ್ನು ಜನರಿಗೆ ತಲುಪಲು ಸುಸಂಗತವಾದ ಆರ್ಥಿಕ ನೀತಿಯ ಮಹತ್ವವನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ. ಬದಲಾದ ಸನ್ನಿವೇಶಗಳಿಗೆ ಅನುಗುಣವಾಗಿ ಆರ್ಥಿಕ ನೀತಿಯೂ ಮಾರ್ಪಡಿಸಲ್ಪಟ್ಟರೆ ಅಭಿವೃದ್ಧಿ ಸಾಧನೆಯ ಆಶೋತ್ತರಗಳು ಸುಲಭವಾಗಿ ಈಡೇರಬಲ್ಲವು. ಭಾರತದಲ್ಲಿ ೧೯೯೧ರಲ್ಲಿ ಹೊಸ ಆರ್ಥಿಕ ನೀತಿಯನ್ನು ಜಾರಿಗೆ ತರಲಾಯಿತು. ದೇಶದ ಆರ್ಥಿಕ ನೀತಿ ಧೋರಣೆಯನ್ನು ಹಳೆಯ ಜಾಡಿನಿಂದ ಹೊಸ ದಿಕ್ಕಿನೆಡೆಗೆ ಹೊರಳಿಸುವುದು ಇದರ ಉದ್ದೇಶವಾಗಿದ್ದಿತು. ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣ ಭಾರತದ ಹೊಸ ಆರ್ಥಿಕ ನೀತಿಯ ಅವಿಭಾಜ್ಯ ಅಂಗಗಳಾಗಿವೆ. ಕೈಗಾರಿಕೆಯನ್ನು ಸ್ಥಾಪಿಸುವ ಮತ್ತು ಬೆಳೆಸುವ ಬಗೆಗೆ ಉದ್ಯಮಿಗಳಿಗೆ ಮುಕ್ತ ವಾತಾವರಣವನ್ನು ಕಲ್ಪಿಸುವುದು ಉದಾರೀಕರಣದ ಉದ್ದೇಶವಾಗಿದೆ.[೧]

ಇಂತಹ ಹೊಸ ಆರ್ಥಿಕ ನೀತಿಯು ಬುಡಕಟ್ಟುಗಳ ತಮ್ಮ ಸಾಂಪ್ರದಾಯಿಕ ಬದುಕಿನ ಸ್ವಾತಂತ್ರ್ಯವನ್ನು ಕಿತ್ತುಕೊಂಡು ಅವರ ಆಚಾರ ವಿಚಾರಗಳು ಹಾಗೂ ಅವರ ಸಂಸ್ಕೃತಿಗಳಿಗೆ ಪೆಟ್ಟು ಕೊಟ್ಟಿದೆ.

ಅಂತರರಾಷ್ಟ್ರೀಯ ಹಣಕಾಸಿನ ಕ್ಷೇತ್ರದಲ್ಲಿ ಸಹಕಾರ ಸಾಧಿಸುವ ನಿಟ್ಟಿನಲ್ಲಿ ಅಂತರರಾಷ್ಟ್ರೀಯ ನಿಧಿ(IMF)ಯನ್ನು ಸ್ಥಾಪಿಸಲಾಯಿತು. ಜಗತ್ತಿನಲ್ಲಿ ವಿವಿಧ ದೇಶಗಳ ತ್ವರಿತ ಆರ್ಥಿಕ ಅಭಿವೃದ್ಧಿಗೆ ಹಣಕಾಸನ್ನು ಒದಗಿಸಲು ಒಂದು ಜಾಗತಿಕ ಬ್ಯಾಂಕನ್ನು ಸ್ಥಾಪಿಸಲಾಯಿತು. ಈ ಎರಡು ಅಂತರರಾಷ್ಟ್ರೀಯ ಸಂಸ್ಥೆಗಳ ಕಾರ್ಯ ಸಾಧನೆಗಳಿಂದ ಉತ್ತೇಜಿತರಾದ ವಿವಿಧ ಅಂತರರಾಷ್ಟ್ರೀಯ ವ್ಯಾಪಾರ ಕ್ಷೇತ್ರದಲ್ಲಿ ಸಹಕಾರ ಸಾಧಿಸಲು ಮತ್ತು ಜಾಗತಿಕ ವ್ಯಾಪಾರ ಪ್ರಮಾಣವನ್ನು ಹೆಚ್ಚಿಸುವ ನಿಟ್ಟಿನಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಯೋಚಿಸಲು ಪ್ರಾರಂಭ ಮಾಡಿದವು. ಆರೋಗ್ಯಕರ ವಿದೇಶಿ ವ್ಯಾಪಾರ ಬೆಳವಣಿಗೆಗೆ ಅಗತ್ಯವಾದ ವಾತಾವರಣವನ್ನು ಸೃಷ್ಟಿಸಬೇಕೆಂಬ ನಿಲುವು ಅನೇಕ ದೇಶಗಳದಾಗಿತ್ತು. ವ್ಯಾಪಾರ ಕ್ಷೇತ್ರದಲ್ಲಿದ್ದ ಅನಗತ್ಯ ನಿರ್ಬಂಧಗಳನ್ನು ತೆಗೆದುಹಾಕಬೇಕೆಂಬ ಹಲವು ದೇಶಗಳ ಬೇಡಿಕೆಯ ಹಿನ್ನೆಲೆಯಲ್ಲಿ ೧೯೪೮ರಲ್ಲಿ 'ಹವಾನಾ'ದಲ್ಲಿ ಅಂತರರಾಷ್ಟ್ರೀಯ ವ್ಯಾಪಾರ ಮತ್ತು ಉದ್ಯೋಗದ ವಿಚಾರಗಳ ಮೇಲೆ ಒಂದು ಜಾಗತಿಕ ಸಮ್ಮೇಳನ ನಡೆಯಿತು. ಇದರ ಫಲವಾಗಿ ಗ್ಯಾಟ್(GATT)ಉಟ್ಟಿಕೊಂಡಿತು. 'ಅಂತರರಾಷ್ಟ್ರೀಯ ವ್ಯಾಪಾರ ನಡೆಸಲು ಪರಸ್ಪರ ಸ್ವೀಕೃತವಾದ ನಿಯಮಗಳನ್ನು ಒಳಗೊಂಡ ಒಪ್ಪಂದವೇ ಗ್ಯಾಟ್(GATT)ಒಪ್ಪಂದವಾಗಿದೆ.[೨]

ಗ್ಯಾಟ್(GATT)ನ ಅಧಿವೇಶನಗಳು ಅಥವಾ ಮಾತುಕಥೆಯ ಸುತ್ತುಗಳನ್ನು ಗಮನಿಸಿದಾಗ ಎಂಟನೇ ಸುತ್ತಿನ ಉರುಗ್ವೆ ಸುತ್ತಿನ ಮಾತುಕಥೆಗಳಲ್ಲಿ ಡಂಕೆಲ್ ಪ್ರಸ್ತಾವನೆಗಳನ್ನು ಇಲ್ಲಿ ಚರ್ಚಿಸಬೇಕಾಗುತ್ತದೆ, ಕಾರಣ ಇಲ್ಲಿ ಸಾಂಪ್ರದಾಯಿಕ ತಂತ್ರಜ್ಞಾನವನ್ನು ಮೂಲನಿವಾಸಿಗಳ ಅನುಮತಿಯಿಲ್ಲದೇ ಆ ತಂತ್ರಜ್ಞಾನಗಳನ್ನು ಬಳಸಿಕೊಂಡು ಉತ್ಪಾದನಾ ಕ್ರಮದಲ್ಲಿ ಆಧುನಿಕ ತಂತ್ರಜ್ಞಾನವನ್ನು ಸಾಂಪ್ರದಾಯಿಕ ತಂತ್ರಜ್ಞಾನದೊಂದಿಗೆ ಲೇಪಿಸಿ ಹೊಸ ವಸ್ತುಗಳ ಉತ್ಪಾದನೆ ಮಾಡಿ ಅವುಗಳಿಗೆ ತನ್ನ ಸ್ವಾಮ್ಯದ ಹಕ್ಕನ್ನು (Patent) ಪಡೆದುಕೊಂಡು ಮೂಲವಾಸಿಗಳಿಗೆ ಬಾಭಕ್ಕೆ ಮಾರಾಟ ಮಾಡುವ ತಂತ್ರವನ್ನು

ಪರದೇಶಿ ಕಂಪನಿಗಳ ಉದ್ದೇಶವಾಗಿತ್ತು. ತಾವು ಕಂಡುಹಿಡಿದ ಸಾಂಪ್ರದಾಯದ ತಂತ್ರಜ್ಞಾನವನ್ನು ತಾವೇ ಬಳಸಲು ಇನ್ನೊಬ್ಬರ ಅಪ್ಪಣೆ ಪಡೆಯಬೇಕಾದ ಸಂದಿಗ್ಧತೆಯಲ್ಲಿ ಬಡಕಟ್ಟು ಜನರಿದ್ದಾರೆ.

'ಇಂದು ಪ್ರಪಂಚದಾದ್ಯಂತ ಜಾಗತೀಕರಣದ ಕುರಿತು ಅನೇಕ ಚರ್ಚೆಗಳಾಗುತ್ತಿವೆ. ಇಡೀ ಜಗತ್ತು ಜಾಗತೀಕರಣ ಕುರಿತು ಯೋಚಿಸುತ್ತಿರುವ ತೀವ್ರತೆಯಿಂದಲೇ, ಅದರ ಅನಿವಾರ್ಯತೆ ಮತ್ತು ಅಪಾಯಗಳೆರಡನ್ನು ಇವತ್ತು ನಾವು ನೋಡಬಹುದು. ಜಾಗತೀಕರಣದ ಚರ್ಚೆ ಹೆಚ್ಚು ತೀವ್ರವಾಗಿರುವುದು ಭಾರತದಂತಹ ಅನೇಕ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ. ಒಂದೆಡೆ ಇಂತಹ ದೇಶಗಳು, ವಸಹತುಶಾಹಿಯು ಜಾಗತೀಕರಣದ ಹೆಸರಲ್ಲಿ ನಡೆಸಲಿರುವ ಮರು ಆಕ್ರಮಣದ ಕುರಿತು ಆತಂಕಗೊಂಡಿದ್ದರೆ, ಜಾಗತೀಕರಣದ ಫಲವಾಗಿ ಹುಟ್ಟಿರುವ ಉದಾರೀಕರಣ ಮತ್ತು ಜಾಗತೀಕರಣಗಳಿಂದ ಜಾಗತಿಕ ಮಟ್ಟದ ತಂತ್ರಜ್ಞಾನದ ಪ್ರವಾಹದಲ್ಲಿ ಒಂದಾಗಿ ಅಭಿವೃದ್ಧಿ ಸಾಧಿಸುವ ತವಕವೂ ಹೆಚ್ಚುತ್ತಿದೆ.[೩] ಈ ಜಾಗತೀಕರಣದಿಂದ ದೇಶಗಳಿಗೆ ಅನುಕೂಲಕ್ಕಿಂತ ಅನನುಕೂಲವೇ ಹೆಚ್ಚಾಗಿದೆ. ಕಾರಣ ಸ್ವದೇಶಿ ಕೈಗಾರಿಕೆಗಳು ವಿದೇಶಿ ಪೈಪೋಟಿಯಿಂದ ನಲುಗಿ ಅವುಗಳ ಜೊತೆ ಸ್ಪರ್ಧೆ ಮಾಡಲಿಕ್ಕೆ ಆಗದೇ ಇನ್ನೂ ಬಾಲ್ಯಾವಸ್ಥೆಯಲ್ಲಿ ತಮ್ಮ ಕೈಗಾರಿಕೆಗಳಿಗೆ ಬೀಗಜಡಿಯಲು ಮುಂದಾಗಿವೆ. ಕಾರಣ ಅಭಿವೃದ್ಧಿಶೀಲ ರಾಷ್ಟ್ರಗಳ ಉತ್ಪಾದನಾ ಪದ್ಧತಿ ಹಾಗೂ ಉತ್ಪಾದನಾ ತಂತ್ರಜ್ಞಾನ ಮುಂದುವರಿದ ದೇಶಗಳಿಗೆ ಹೋಲಿಸಿದರೆ ತುಂಬಾ ನಿಕೃಷ್ಟವಾಗಿರುವುದನ್ನು ಕಾಣುತ್ತೇವೆ. ಜಾಗತೀಕರದಿಂದಾಗಿ ರಕ್ಷಣಾ ವ್ಯಾಪಾರವನ್ನು ಕೈಬಿಟ್ಟು ಮುಕ್ತವ್ಯಾಪಾರಕ್ಕೆ ಮುಂದಾಗಿರುವ ದೇಶಗಳು ರಕ್ಷಣೆಯ ವಿಧಾನಗಳಾದ ಸುಂಕ ಮತ್ತು ಕೋಟಾ(ದೇಯಾಂಶ)ಗಳನ್ನು ಕೈಬಿಟ್ಟಿರುವುದರಿಂದ ವಿದೇಶಿ ಕೈಗಾರಿಕೆಗಳ ಆಧುನಿಕ ಉತ್ಪಾದನಾ ತಂತ್ರಜ್ಞಾನದ ಜೊತೆ ಪೈಪೋಟಿ ನಡೆಸಲು ಸಾಧ್ಯವಾಗದೇ ತಾವು ಉತ್ಪಾದಿಸಿದ ಸರಕುಗಳಿಗೆ ಬೇಡಿಕೆ ಇಲ್ಲದೇ ಉತ್ಪಾದನಾಂಗಗಳು ತಮ್ಮ ಕೆಲಸ ಕಳೆದುಕೊಂಡು ನಿರುದ್ಯೋಗಿಗಳಾಗಿರುವುದನ್ನು ಇತ್ತೀಚಿನ ದಿನಗಳಲ್ಲಿ ನೋಡುತ್ತೇವೆ, ಇದೇ ಕಾರಣಕ್ಕೆ ಸ್ವದೇಶಿ ಉತ್ಪಾದನಾ ವ್ಯವಸ್ಥೆ ಕುಸಿದು ಒಟ್ಟು ಸ್ವದೇಶಿ ಉತ್ಪನ್ನ ದಾಖಲೆಯ ಇಳಿತವಾಗಿರುವುದನ್ನು ಗಮನಿಸಿದ್ದೇವೆ. ೧೯ನೇ ಶತಮಾನದಲ್ಲೇ ಜಾನ್ ಮೇನಾರ್ಡ್ ಕೇನ್ಸ್ ತನ್ನ ಸಾಮಾನ್ಯ ಸಿದ್ಧಾಂತದಲ್ಲಿ ಯಾವುದೇ ದೇಶ ಆರ್ಥಿಕ ಮುಗ್ಗಟ್ಟಿನಿಂದ ಹೊರಬರಬೇಕಾದರೆ ಮುಕ್ತವ್ಯಾಪಾರವನ್ನು ಬಿಟ್ಟು ರಕ್ಷಣಾ ವ್ಯಾಪಾರವನ್ನು ಅಳವಡಿಸಿಕೊಳ್ಳಬೇಕೆಂದು ಸಲಹೆ ನೀಡಿದ್ದರು. ೧೯೨೯-೩೨ರ ಪ್ರಪಂಚದ ಮಹಾ ಆರ್ಥಿಕ ಬಿಕ್ಕಟ್ಟಿಗೆ ಪರಿಹಾರ ಕಂಡುಕೊಳ್ಳಲು ಅಂದಿನ ಸಂಪ್ರದಾಯವಾದ ಸಿದ್ಧಾಂತದ ಆರ್ಥಿಕ ವಿಚಾರಧಾರೆಯಾದ ಮುಕ್ತ ವ್ಯಾಪಾರದ ಆರ್ಥಿಕ ಚಿಂತನೆ ಹಾಗೂ ಸಂಪ್ರದಾಯ ಪಂಥದ ಅರ್ಥಶಾಸ್ತ್ರಜ್ಞರ ನಿಲುವುಗಳನ್ನು ಟೀಕಿಸಿ ಆಗಿನ ಕಾಲದಲ್ಲಿಯೇ ರಕ್ಷಣಾವ್ಯಾಪಾರಕ್ಕೆ ಹೆಚ್ಚಿನ ಮನ್ನಣೆ ನೀಡಿದ್ದರು.[೪]

'ಮೂರನೇ ಜಗತ್ತಿನ ದೇಶಗಳಿಗೆ ಜಾಗತೀಕರಣವನ್ನು ಸುಲಭವಾಗಿ ನುಂಗುವಂತೆಯೂ ಇಲ್ಲ ಅಥವಾ ಹೊರಹಾಕುವುದಕ್ಕೂ ಆಗುವುದಿಲ್ಲ.[೫]

'ವಿಶ್ವ ಮಾರುಕಟ್ಟೆಗೂ ನಮಗೂ ಯಾವ ಸಂಬಂಧವೂ ಬೇಡ ಎಂದು ಯಾವುದೋ ಹಿಂದುಳಿದ ದೇಶ ಘೋಷಿಸಿಕೊಂಡ ಕೂಡಲೇ ಅವುಗಳ ಆಂತರಿಕ ವ್ಯವಸ್ಥೆ ಎಂತಹ ಹೊಡೆತಗಳಿಂದ ಜರ್ಜರಿತವಾಗುತ್ತದೆಂದು ಅರ್ಥಶಾಸ್ತ್ರದ ಪ್ರಾಥಮಿಕ ಪಾಠಗಳನ್ನು ಕಲಿತ ಯಾರಿಗಾದರೂ ಅರ್ಥವಾಗುತ್ತದೆ.[೬]

ಈ ಮೇಲಿನ ಎಲ್ಲಾ ಹಿನ್ನೆಲೆಗಳನ್ನು ಗಮನಿಸಿದಾಗ ಇದು ಕಾಡುಗೊಲ್ಲರ ಮೇಲೆ ಯಾವ ರೀತಿ ಪರಿಣಾಮಗಳನ್ನು ಬೀರಿದೆ ಎನ್ನುವುದನ್ನು ನೋಡುವುದಾದರೆ ಕಾಡುಗೊಲ್ಲರು ಹಿಂದೆ ಪಶುಪಾಲಕರಾಗಿದ್ದರು. ಅವರಿಗೆ ಜಾಗತೀಕರಣದಿಂದ ಹುಲ್ಲುಗಾವಲುಗಳು ಅಭಿವೃದ್ಧಿಯ ನೆಪದಲ್ಲಿ ಇಂದು ಕಣ್ಮರೆಯಾಗಿ ಅವರು ತಮ್ಮ ಮೂಲ ವೃತ್ತಿ ಪಶಪಾಲನೆಯನ್ನು ಮುಂದುವರೆಸಲಾಗದೇ ಇತ್ತ ಹೊಸ ಸಂಪ್ರದಾಯಗಳಿಗೆ ಹೊಂದಿಕೊಳ್ಳದೇ ಅತಂತ್ರ ಸ್ಥಿತಿಯಲ್ಲಿದ್ದಾರೆ. ಸರ್ಕಾರದ ಅಭಿವೃದ್ಧಿಗೋಸ್ಕರ ಅಳವಡಿಸಿಕೊಂಡ ಕಾರ್ಯಗಳಿಗೆ ಇದ್ದ ಅಲ್ಪ ಸ್ವಲ್ಪ ಜಮೀನುಗಳನ್ನು ಸರ್ಕಾರಕ್ಕೆ ಬಿಟ್ಟುಕೊಟ್ಟು ಬಂದಂತಹ ಹಣದಲ್ಲಿ ಕ್ಷಣಿಕ ಸುಖಕ್ಕೋಸ್ಕರ ಭೋಗದ ಜೀವನವನ್ನು ನಡೆಸುತ್ತ ಕೆಲಸವಿಲ್ಲದೆ ನಿರುದ್ಯೋಗಿಗಳಾಗಿರುವುದನ್ನು ನೋಡುತ್ತಿದ್ದೇವೆ.

ಕಾಡುಗೊಲ್ಲರ ಸಾಮಾಜಿಕ ಬದುಕು ಎಂದಾಕ್ಷಣ ಬಂಧುತ್ವ ವ್ಯವಸ್ಥೆ, ವಿವಾಹ, ಕಾಡುಗೊಲ್ಲರ ನ್ಯಾಯವ್ಯವಸ್ಥೆ ಹಾಗೂ ಸಾಂಪ್ರದಾಯಿಕ ಕಸುಬುಗಳು ಇದರ ಪ್ರಮುಖ ಭಾಗಗಳಾಗಿ ಕಂಡು ಬರುತ್ತವೆ. ಕಾಡುಗೊಲ್ಲ ಸಮುದಾಯದ ಮೇಲೆ ಈ ಜಾಗತೀಕರಣ ಯಾವ ಪ್ರಭಾವವನ್ನು ಬೀರಿದೆ ಎಂದು ಈ ಕೆಳಕಂಡ ಅಂಶಗಳಿಂದ ತಿಳಿಯಬಹುದು.

**ಬಂಧುತ್ವವ್ಯವಸ್ಥೆ**

ಭಾರತೀಯ ಸಮಾಜದಲ್ಲಿ ಕುಟುಂಬವು ಪಿತೃಪ್ರಧಾನ ಲಕ್ಷಣವನ್ನು ಹೊಂದಿದೆ. ಆರ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದ ನಾಡಿನ ಜೀವನಕ್ಕೆ ಸೇರಿಹೋದ ಸಮುದಾಯಗಳಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿದೆ. ಆದರೆ ಬಹುತೇಕ ಬುಡಕಟ್ಟುಗಳಲ್ಲಿ ಮಾತೃಪ್ರಧಾನ ವ್ಯವಸ್ಥೆಯನ್ನು ಕಾಣಬಹುದು. ಉದಾ. ಕೇರಳದ ನಾಯರ್‌ಗಳಲ್ಲಿನ ತರವಾಡ ಮತ್ತು ಇಲ್ಲಂ ಕುಟುಂಬಗಳು ಪ್ರಸ್ತುತ ನಿದರ್ಶನವಾಗುತ್ತವೆ. ಇಂತಹ ಕುಟುಂಬಗಳ ವ್ಯವಸ್ಥೆಯು ಕಾಡುಗೊಲ್ಲರಲ್ಲಿ ಮಹಿಳಾ ಸಮಾನತೆಯ ಪ್ರತೀಕವಾಗಿತ್ತು. ಮಹಿಳೆಯು ಕುಟುಂಬದಲ್ಲಿ ಪುರುಷನಷ್ಟೇ ಸಮಾನವಾಗಿ ಸ್ಥಾನಮಾನ ಮತ್ತು ದುಡಿಮೆಯಲ್ಲಿ ಸಹಭಾಗಿಯಾಗುತ್ತಿದ್ದಳು, ಮನೆಕೆಲಸ, ರೊಪ್ಪ ಶುದ್ಧೀಕರಣ ಮತ್ತು ಕುರಿಕಾಯುವ ಇತ್ಯಾದಿ ಕೆಲಸಗಳ ಮೂಲಕ ಪುರುಷನಿಗೆ ನೇರವಾಗಿ ಸಾಮಾಜಿಕ ಜೀವನ ಸುಗಮವಾಗಿ ನಡೆಯಲು ಕಾರಣವಾಗಿದ್ದವು. ಜೊತೆಗೆ ಗುಡಿಸಲು ಮತ್ತು ರೊಪ್ಪದ ಬದುಕು ಕಾಡುಗೊಲ್ಲರದಾಗಿತ್ತು. ಆದರೆ ಜಾಗತೀಕರಣದ ಪ್ರಭಾವದಿಂದ ಊರಿನಿಂದ ಬಹುದೂರ ಉಳಿದಿದ್ದ ಪ್ರತ್ಯೇಕ ಹಟ್ಟಿಗಳು ಆಧುನಿಕತೆ ಮತ್ತು ಜಾಗತೀಕರಣದ ಪ್ರಭಾವದಿಂದ ಹಟ್ಟಿ ಸಂಸ್ಕೃತಿಯನ್ನು ಕಳೆದುಕೊಳ್ಳುತ್ತಿವೆ. ಗುಡಿಸಲಿನ ಜಾಗದಲ್ಲಿ ಹೆಂಚಿನ, ಆರ್.ಸಿ.ಸಿ, ಟಿನ್ ಮತ್ತು ಜನತಾ ಮನೆಗಳು ನಿರ್ಮಾಣವಾಗಿವೆ ಮತ್ತು ಆಗುತ್ತಲಿವೆ.

ಪ್ರತ್ಯೇಕವಾಗಿದ್ದ ನೆಲೆಗಳು, ನಿರ್ಬಂಧಗಳಿಂದ ಕೂಡಿದ್ದವು. ಆದರೆ ಇಂದು ಆನಿರ್ಬಂಧಗಳು ಕಾನೂನು ಮತ್ತು ಶಿಕ್ಷಣ ಇತ್ಯಾದಿಗಳು ಇವರ ಮನಸ್ಥಿತಿ ಬದಲಾಯಿಸಲು ಪ್ರಯತ್ನಿಸಿದಾಗ ಕಡಿಮೆ ಪ್ರಮಾಣದಲ್ಲಿ ತಮ್ಮ ಕಠಿಣ ನಿಲುವುಗಳನ್ನು ಸಡಿಲಗೊಳಿಸುವಂತೆ ಮಾಡಿವೆ.

ಈ ಹಿಂದೆ ಕಾಡುಗೊಲ್ಲರು ಅವಿಭಕ್ತ ಕುಟುಂಬದಲ್ಲಿ ವಾಸಿಸುತ್ತಿದ್ದರು. ಆಗ ಇಲ್ಲಿ ಶ್ರಮವಿಭಜನೆ ಜಾರಿಯಲ್ಲಿತ್ತು. ಶ್ರಮವಿಭಜನೆ ಮೂಲಕ ಕಟುಂಬದ ಮೂಲಕಸುಬುಗಳನ್ನು ವಿಭಜಿಸಿ ಒಬ್ಬಬ್ಬರೂ ಒಂದೊಂದು ಕಾಯಕವನ್ನು ನೆರವೇರಿಸುತ್ತಿದ್ದರು. ತಮ್ಮ ಶ್ರಮಶಕ್ತಿ ಪರಿಪೂರ್ಣತೆಯಿಂದ ಕೂಡಿದ್ದು, ಆ ಕೆಲಸಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದರು. ಆದರೆ ಇತ್ತೀಚೆಗೆ ವಿಭಕ್ತ ಕುಟುಂಬಗಳು ಹೆಚ್ಚಾಗಿ ಕಾಡುಗೊಲ್ಲರಲ್ಲಿ ಕಂಡುಬರುತ್ತಿವೆ. ಇದರಿಂದ ಶ್ರಮವಿಭಜನೆ ಕಾಡುಗೊಲ್ಲರಲ್ಲಿ ಕಾಣುತ್ತಿಲ್ಲ. ಈ ಒಂದು ಶ್ರಮ ವಿಭಜನೆಯಿಂದಾಗಿ ಕಾಡುಗೊಲ್ಲರಲ್ಲಿ ಮರೆಮಾಚು ನಿರುದ್ಯೋಗವೆಂಬುದು ಕಾಣುತ್ತಿರಲಿಲ್ಲ.

ಕುಟುಂಬವು ಭಾರತೀಯ ಸಾಮಾಜಿಕ ವ್ಯವಸ್ಥೆಯ ಪ್ರಮುಖ ಸಂಸ್ಥೆಯಾಗಿದೆ. ಭಾರತದಾದ್ಯಂತ ಹಲವು ರೀತಿ ಬುಡಕಟ್ಟುಗಳನ್ನು ಕಾಣಬಹುದಾಗಿದ್ದು ಕಾಡುಗೊಲ್ಲ ಸಮುದಾಯವು ಒಂದು ಪ್ರಮುಖ ಬುಡಕಟ್ಟಾಗಿದೆ. ಇವರಲ್ಲಿ ಪ್ರಮುಖವಾಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಕಾಣುತ್ತೇವೆ. ದಕ್ಷಿಣ ಭಾರತದ ಕೆಲವು ಬುಡಕಟ್ಟುಗಳನ್ನು ಮತ್ತು ಕೇರಳದ ನಾಯರ್‌ಗಳಲ್ಲಿ ಬಿಟ್ಟರೆ ಎಲ್ಲಾ ಕಡೆಗಳಲ್ಲಿ ಪಿತೃಪ್ರಧಾನ, ಪಿತೃವಂಶೀಯ ಕುಟುಂಬಗಳನ್ನು ಕಾಣಬಹುದಾಗಿದೆ. ಇದರಂತೆಯೇ ಕರ್ನಾಟಕದಲ್ಲಿ ವಾಸಿಸುತ್ತಿರುವ ಕಾಡುಗೊಲ್ಲ ಕುಟುಂಬಗಳು ಕೂಡ ಪಿತೃವಂಶೀಯ ವ್ಯವಸ್ಥೆಯನ್ನು ಅನುಸರಿಸಿಕೊಂಡು ಬಂದಿವೆ. ಕಾಡುಗೊಲ್ಲರಲ್ಲಿ ಬಂಧುತ್ವ ಮತ್ತು ಆಸ್ತಿ ಹಂಚಿಕೆ ಪುರುಷರ ಮೂಲಕ ನಡೆಯುತ್ತದೆ. ಕುಟುಂಬದಲ್ಲಿ ಪುರುಷನು ಕುಟುಂಬದ ಕರ್ತನಾಗಿರುತ್ತಾನೆ. ಕುಟುಂಬದಲ್ಲಿ ನಡೆಯುವ ಎಲ್ಲಾ ರೀತಿ ಕೆಲಸ ಕಾರ್ಯಗಳಿಗೆ ಕುಟುಂಬದ ಯಜಮಾನನೇ ಜವಾಬ್ದಾರನಾಗಿರುತ್ತಾನೆ. ಕುಟುಂಬದ ವಿಷಯದಲ್ಲಿ ಮಹಿಳೆಯರ ಜೊತೆ ಚರ್ಚಿಸದೆ ಪುರುಷನೇ ಪ್ರಧಾನವಾಗಿ ನಿರ್ಧಾರಗಳನ್ನು ಕೈಗೊಳ್ಳುತ್ತಾನೆ. ಬೇರೆ ವಿಷಯಗಳಲ್ಲಿ ಸ್ತ್ರೀಯರಿಗೆ ಉತ್ತಮ ರೀತಿಯಾದ ಸ್ಥಾನಮಾನಗಳನ್ನು ನೀಡಲಾಗಿದೆ. ಮನೆಯ ಕೆಲಸಗಳಲ್ಲಿ ಹೆಣ್ಣನ್ನು ಕೀಳಾಗಿ ಕಾಣುವುದಿಲ್ಲ. ಮನೆಯ ಜವಾಬ್ದಾರಿ ಮತ್ತು ಹೆಚ್ಚಿನ ಸ್ಥಾನಮಾನವನ್ನು ಮಹಿಳೆಯರೇ ಹೊಂದಿದ್ದಾರೆ. ಈ ಅಂಶಗಳು ಬುಡಕಟ್ಟು ಸಮಾಜಗಳಲ್ಲಿ ಕಂಡುಬರುವ ಲಕ್ಷಣಗಳಾಗಿವೆ. ಈ ಒಂದು ಜಾಗತೀಕರಣ ಮತ್ತು ಆಧುನಿಕತೆಯ ಪ್ರಭಾವದಿಂದ ಹೆಣ್ಣುಮಕ್ಕಳಿಗೆ ಕುಟುಂಬದ ಜವಾಬ್ದಾರಿ ಬೀಳುತ್ತಿದೆ. ಮದುವೆ ಸಂದರ್ಭದಲ್ಲಿ ವಧುವಿನ ಕಡೆಯವರು ವರನ ಕಡೆಯವರಿಗೆ ತೆರ ಕೊಡುವ ಪದ್ಧತಿಯಂತೆ ಕಾಡುಗೊಲ್ಲ ಜನಾಂಗದಲ್ಲಿ ವರದಕ್ಷಿಣೆ ಪಡೆಯುವ ಪದ್ಧತಿಯು ತುಂಬ ವಿರಳವಾಗಿರುವುದು ಕಂಡುಬರುತ್ತದೆ.

ಕಾಡುಗೊಲ್ಲ ಸಮುದಾಯದಲ್ಲಿ ಪ್ರಸ್ತುತ ದಿನಗಳಲ್ಲಿಯೂ ಸಹ ಕುಟುಂಬದಲ್ಲಿನ ಎಲ್ಲಾ ಸದಸ್ಯರೂ ಕೂಡ ಒಟ್ಟಿಗೆ ಜೀವಿಸುತ್ತಿದ್ದು ಅವಿಭಕ್ತ ಕುಟುಂಬವ್ಯವಸ್ಥೆಯನ್ನು ಇಂದಿಗೂ ಸಹ ಪಾಲಿಸುತ್ತಿದ್ದಾರೆ.

ಕಾಡುಗೊಲ್ಲರ ಕುಟುಂಬಗಳು ಪಶುಪಾಲನೆ, ಹೈನುಗಾರಿಕೆ, ಕುರಿಸಾಕಾಣಿಕೆ ಮತ್ತು ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವುದರಿಂದ ಈ ಕೆಲಸಗಳಿಗೆ ಹೆಚ್ಚಿನ ಜನರ ಅವಶ್ಯಕತೆ ಇರುವುದರಿಂದ ಅವಿಭಕ್ತ ಕುಟುಂಬಗಳಲ್ಲಿಯೇ ವಾಸಿಸುತ್ತಿದ್ದಾರೆ. ಕಾಡುಗೊಲ್ಲರು ಪ್ರಮುಖವಾಗಿ ಸಂಬಂಧಗಳಿಗೆ ಮಹತ್ವವನ್ನು ನೀಡಲಾಗಿದ್ದು, ಈ ಕಾರಣದಿಂದಾಗಿಯೇ ಪರಸ್ಪರ ಕೂಡಿ ಬಾಳುವ ಉದ್ದೇಶದಿಂದ ಅವಿಭಕ್ತ ಕುಟುಂಬಗಳಲ್ಲಿಯೇ ಇರಲು ಇಷ್ಟ ಪಡುತ್ತಾರೆ. ಪ್ರಸ್ತುತ ದಿನಗಳಲ್ಲಿ ಕಡಿಮೆ ಸಂಖ್ಯೆಯಲ್ಲಿರುವ ಉದ್ಯೋಗಸ್ಥರು ಹಾಗೂ ನಗರಗಳಲ್ಲಿ ವಾಸಿಸುತ್ತಿರುವವರು ಅವಿಭಕ್ತ ಕುಟುಂಬಗಳಿಂದ ವಿಭಕ್ತ ಕುಟುಂಬಗಳ ಕಡೆಗೆ ಮುಖ ಮಾಡುತ್ತಿದ್ದಾರೆ. ಈ ಅವಿಭಕ್ತ ಕುಟುಂಬಗಳಲ್ಲಿ ಪತಿ-ಪತ್ನಿ ಹಾಗೂ ವಿವಾಹವಾಗದ ಮಕ್ಕಳಿರುತ್ತಾರೆ. ಆಧುನೀಕರಣ ಜಾಗತೀಕರಣ ನಗರೀಕರಣ ಪ್ರಕ್ರಿಯೆಗಳಿಂದ ಶಿಕ್ಷಣ ಪಡೆದಂತಹ ಯುವ ಸಮುದಾಯದವರು ವಿಭಕ್ತ ಕುಟುಂಬಗಳ ಕಡೆಗೆ ಆಕರ್ಷಿತರಾಗಿದ್ದಾರೆ. ಗ್ರಾಮಗಳಲ್ಲಿ ವಾಸಿಸುವ ಕುಟುಂಬಗಳ ಮೇಲೆಯೂ ಇದರ ಪ್ರಭಾವ ಬೀರಿದ್ದು ಗ್ರಾಮಗಳಲ್ಲಿಯೂ ವಿಭಕ್ತ ಕುಟುಂಬಗಳ ಪ್ರಭಾವ ಹೆಚ್ಚಾಗುತ್ತಿವೆ. ಕಾಡುಗೊಲ್ಲರು ತಮ್ಮ ಬಂಧುತ್ವವ್ಯವಸ್ಥೆಯಲ್ಲಿ ಬಂಧು ಬಳಗದವರನ್ನು ಅಣ್ಣ-ತಮ್ಮಂದಿರು ಮತ್ತು ನೆಂಟರು ಎಂದು ಎರಡು ವಿಧಗಳಾಗಿ ಕಾಣುತ್ತಾರೆ. ತಮ್ಮ ಕುಟುಂಬದ ಆಸ್ತಿಯಲ್ಲಿ ಪಾಲನ್ನು ಪಡೆಯುವವರು ಅಣ್ಣತಮ್ಮಂದಿರೆಂದು ಹಾಗೂ ಇತರರನ್ನು ನೆಂಟರೆಂದು ಕರೆಯಲಾಗುತ್ತದೆ. 'ಕುಲ ಹಾಗೂ ವಂಶದವರೆಲ್ಲ ದಾಯಾದಿಗಳಾದರೆ ಮದುವೆ ಮುಖಾಂತರ ಸಂಬಂಧ ಬೆಳೆಸಿದವರು ನೆಂಟರೆನಿಸಿಕೊಳ್ಳುತ್ತಾರೆ'[೭] ಹೀಗೆ ಬಂಧುತ್ವದ ಕಲ್ಪನೆಯನ್ನು ನೋಡಬಹುದು.

ಜಾಗತೀಕರಣದ ಪ್ರಭಾವದಿಂದ ಕಾಡುಗೊಲ್ಲರು ನಗರದ ಸಂಸ್ಕೃತಿಗೆ ಮಾರುಹೋಗಿ ಅದೇ ಸಂಸ್ಕೃತಿಯನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಆದರೆ ಕಾಡುಗೊಲ್ಲ ಸಮುದಾಯದ ಮೇಲೆ ಜಾಗತೀಕರಣ ಎಷ್ಟೇ ಪ್ರಭಾವ ಬೀರಿದರೂ ಕಾಡುಗೊಲ್ಲರು ಸಾಮಾಜಿಕವಾಗಿ ಎಲ್ಲಾ ಪಾರಂಪರಿಕ ಅನುಸರಣಾ ಪದ್ಧತಿಯನ್ನು ಪೂರ್ಣ ಪ್ರಮಾಣದಲ್ಲಿ ಬಿಟ್ಟುಕೊಡದೇ ಇರುವುದು ಕಂಡುಬಂದಿರುತ್ತದೆ.

**ವಿವಾಹ**

ಮದುವೆ ಸಾಮಾಜಿಕ ಜೀವನದಲ್ಲಿ ಒಂದು ಮುಖ್ಯವಾದ ಅಂಶವಾಗಿದೆ. ಇತರೆ ಬಡುಕಟ್ಟು ಸಂಪ್ರದಾಯದಲ್ಲಿರುವಂತಹ ವಿವಾಹಕ್ಕೆ ಸಂಬಂಧಿಸಿದ ಆಚರಣೆಗಳನ್ನು ಕಾಡುಗೊಲ್ಲರಲ್ಲಿಯೂ ಸಹ ಕಾಣಬಹುದಾಗಿದೆ. ಕಾಡುಗೊಲ್ಲರಲ್ಲಿ ಮದುವೆಗೆ ಸಂಬಂಧಿಸಿದಂತೆ ವಿಶಿಷ್ಟ ಆಚರಣೆಗಳನ್ನು ಕಾಣಬಹುದು(ಈ ಆಚರಣೆಗಳನ್ನು ಮೂರನೇ ಅಧ್ಯಯದಲ್ಲಿ ವಿವರಿಸಲಾಗಿದೆ). ಈ ವಿವಾಹಕ್ಕೆ ಆಚರಣೆಗೆ ಸಂಬಂಧಿಸಿದಂತೆ ಹಿಂದೆ ಕಾಡುಗೊಲ್ಲರು ಸಮಾರು ೮ರಿಂದ ೧೦ ದಿನಗಳ ಕಾಲ ಮದುವೆ ಸಮಾರಂಭ ನಡೆಯುತ್ತಿದ್ದವು. ಆದರೆ ಇಂದಿನ ಆಧುನಿಕತೆಯ ಹಾಗೂ ಜಾಗತೀಕರಣದ ಛಾಯೆ ಕಾಡುಗೊಲ್ಲ ಸಮುದಾಯದ ಮೇಲೆ ಬಿದ್ದಿದ್ದು ಹಾಗೂ ಇತರೆ ಸಮುದಾಯಗಳ ಪ್ರಭಾವದಿಂದ ಕಾಡುಗೊಲ್ಲರಲ್ಲಿಯೂ ಸಹ ನೋಂದಣಿ ವಿವಾಹ ಮತ್ತು ಅಂತರಜಾತೀಯ ವಿವಾಹವನ್ನು ಇತ್ತೀಚಿನ

ದಿನಗಳಲ್ಲಿ ಕಾಣುತ್ತೇವೆ. ಎಚ್.ವಿ.ನಂಜುಂಡಯ್ಯನವರು ಕಾಡುಗೊಲ್ಲರ ಮದುವೆಯ ವಿಧಿ ವಿಧಾನ, ಆಚಾರ ವಿಚಾರಗಳ ಬಗ್ಗೆ ಈ ಮುಂದಿನಂತೆ ಹೇಳುತ್ತಾರೆ. 'Marriage among them is generally adult but infant marriage may take place. A woman should not die unmarried. Polygamy is recognised, but polyandry is unknown.'[೮]

ಹಿಂದಿನ ವಿವಾಹಪದ್ಧತಿಯು ಶಾಸ್ತ್ರೋಕ್ತವಾಗಿ ತಿಂಗಳಗಟ್ಟಲೆ ನಡೆಯುತ್ತಿದ್ದವು. ಅವು ಗುರು–ಹಿರಿಯರ ನಿರ್ದೇಶನದಂತೆ ಕಟ್ಟುನಿಟ್ಟಾದ ಕ್ರಮಗಳಲ್ಲಿ ನಡೆಯುತ್ತಿದ್ದವು. ಇದರ ನೇತೃತ್ವ ಅಥವಾ ಮದುವೆ ನಡೆಸಿಕೊಡುವುದರಲ್ಲಿ ಪೂಜಾರಿಯ ಪಾತ್ರ ಪ್ರಮುಖವಾಗಿರುತ್ತಿತ್ತು. ಇಲ್ಲಿ ಸಂಗಾತಿಯ ಆಯ್ಕೆಯಲ್ಲಿ ಮಹಿಳೆಗೆ ಸ್ವಾತಂತ್ರ್ಯವಿರಲಿಲ್ಲ. ಆದರೆ ಇಂದು ಕಾಡುಗೊಲ್ಲರ ಮದುವೆಗಳು ಕೆಲವೇ ಗಂಟೆಗಳಲ್ಲಿ ಅಥವಾ ಒಂದು ದಿನದಲ್ಲೇ ನಡೆಸಿ ಪೂರ್ಣಗೊಳಿಸುತ್ತಾರೆ. ಅದು ಕುಟುಂಬದ ಮುಖ್ಯಸ್ಥರ ಅಪೇಕ್ಷೆಯಂತೆ ನಡೆಯುತ್ತಿದ್ದವು. ಆದರೆ ಇಂದಿನ ವಿವಾಹ ಕಾರ್ಯಕ್ರಮಗಳು ಕೆಲವೇ ದಿನಕ್ಕೆ ಸೀಮಿತವಾಗಿದೆ. ಕಾರಣ ಶಿಕ್ಷಣ, ಮಹಿಳಾ ಸಬಲೀಕರಣದಂತಹ ಚಿಂತನೆಗಳು, ಪ್ರೇಮವಿವಾಹ ಮತ್ತು ಅಂತರ್ ಜಾತಿಯ ವಿವಾಹಕ್ಕ ಕಾರಣವಾಗುತ್ತಿದೆ. ಮನೆಯ ಮುಂದೆ ನಡೆಯುತ್ತಿದ್ದು ವಿವಾಹಗಳು ಇಂದು ರಿಜಿಸ್ಟರ್, ಸಾಮೂಹಿಕ ವಿವಾಹ, ಕಲ್ಯಾಣ ಮಂಟಪಗಳಲ್ಲಿ ನಡೆಯುತ್ತಿದೆ. ಇದಕ್ಕೆ ಅವರ ಆರ್ಥಿಕತೆ ಮತ್ತು ಕಾನೂನಿನ ಅರಿವು ಮತ್ತೆ ಅನ್ಯ ಸಮುದಾಯಗಳ ಪ್ರೇರಣೆ ಮತ್ತು ಆಧುನಿಕತೆಯ ಪ್ರಭಾವ ಆಗಿರಬಹುದು.

**ಕಾಡುಗೊಲ್ಲರ ನ್ಯಾಯವ್ಯವಸ್ಥೆ**

ಭಾರತೀಯ ಸಮಾಜದ ಪ್ರಮುಖ ಲಕ್ಷಣಗಳೆಂದರೆ ಅವಿಭಕ್ತ ಕುಟುಂಬ ವ್ಯವಸ್ಥೆ, ಜಾತಿ ಪದ್ಧತಿ ಮತ್ತು ನ್ಯಾಯ ಪಂಚಾಯ್ತಿಗಳು ಎಂದು ಹೇಳಲಾಗುತ್ತದೆ. ಪ್ರತಿಯೊಂದು ಸಮಾಜವು ತನ್ನ ಉಳಿವಿಗೆ ಮತ್ತು ಪ್ರತಿಯೊಬ್ಬ ಸದಸ್ಯನ ರಕ್ಷಣೆಯ ದೃಷ್ಟಿಯಿಂದ ಸಮಾಜದಲ್ಲಿ ಸಾಮಾಜಿಕ ನಿಯಂತ್ರಣ ವ್ಯವಸ್ಥೆಯನ್ನು ರೂಪಿಸಿಕೊಂಡಿರುತ್ತದೆ. ಈ ವ್ಯವಸ್ಥೆ ತನ್ನ ಸದಸ್ಯರ ಏಕೀಕೃತಗೊಳಿಸುತ್ತಾ ಸಮಾಜವು ಸನ್ಮಾರ್ಗದಲ್ಲಿ ಸಾಗಲು ಕಾರಣವಾಗುವುದು. ಪ್ರಾಚೀನ ಸಮಾಜದಲ್ಲಿ ಅನೌಪಚಾರಿಕ ಸಾಮಾಜಿಕ ನಿಯಂತ್ರಣ ಪದ್ದತಿ ಅಸ್ತಿತ್ವದಲ್ಲಿತ್ತು. ಅನೌಪಚಾರಿಕ ನಿಯಂತ್ರಣ ಪದ್ಧತಿಯಲ್ಲಿ ವ್ಯಕ್ತಿ ಮತ್ತು ಸಮಾಜವನ್ನು ನಂಬಿಕೆ/ ನಿಷೇಧಗಳು, ಸಂಪ್ರದಾಯ ಆಚರಣೆಗಳು, ಬಹಿಷ್ಕಾರ, ನ್ಯಾಯ ಪಂಚಾಯ್ತಿಗಳ ಮೂಲಕ ವ್ಯಕ್ತಿ ಸಮಾಜ ವಿರೋಧಿಯ ಚಟುವಟಿಕೆಯಲ್ಲಿ ತೊಡಗಿದಾಗ ಅವನನ್ನು ತಿದ್ದಲೂ ಆ ಮೂಲಕ ಸಮಾಜವನ್ನು ಸರಿದಾರಿಯತ್ತಾ ಸಾಗಲು ಹಾಗೂ ತನ್ನ ಪೂರ್ವಿಕರು ಹಾಕಿಕೊಟ್ಟಿದ್ದ ನಿಯಮಗಳು ಮತ್ತು ಮೌಲ್ಯಗಳನ್ನು ಮುಂದಿನ ತಲೆಮಾರಿಗಳಿಗೆ ಸಮರ್ಪಕವಾಗಿ ಹಸ್ತಾಂತರಿಸಲು ಈ ಅನೌಪಚಾರಿಕ ನಿಯಂತ್ರಣ ವ್ಯವಸ್ಥೆ ಪ್ರಮುಖವಾದ ಪಾತ್ರ ವಹಿಸುತ್ತಿತ್ತು. ಈ ವ್ಯವಸ್ಥೆಯು ಬೇರೆ ಬೇರೆ ಸಮುದಾಯಗಳಲ್ಲಿ ಬೇರೆಯ ಹೆಸರು ಮತ್ತು ಸ್ವರೂಪಗಳೊಂದಿಗೆ ಅಸ್ತಿತ್ವದಲ್ಲಿತ್ತು. ಅದೇ ರೀತಿಯಾಗಿ ಮ್ಯಾಸಬೇಡ ಮತ್ತು ಕಾಡುಗೊಲ್ಲರ ಸಮುದಾಯಗಳಲ್ಲಿ ಕಟ್ಟೆಮನೆ ಮತ್ತು ಗುಡಿಕಟ್ಟೆಗಳು ಎಂಬ ಹೆಸರಿನಲ್ಲಿ

ನ್ಯಾಯ ಪಂಚಾಯ್ತಿಯ ವ್ಯವಸ್ಥೆಯನ್ನು ಹೊಂದಿದ್ದವು. ಎರಡು ಸಮುದಾಯಗಳ ಜೀವನವಿಧಾನ ಹೆಚ್ಚು ಕಡಿಮೆ/ ಬಹುತೇಕ ಸಾಮ್ಯತೆಯಿಂದ ಕೂಡಿದೆ. ಅವರ ಒಂದು ಭಾಗವಾಗಿ ಕಟ್ಟೆಮನೆ/ ಗುಡಿಕಟ್ಟೆಗಳು ವ್ಯವಸ್ಥೆಯು ಒಂದಾಗಿದೆ.

ಕಾಡುಗೊಲ್ಲರ ಐತಿಹ್ಯಗಳ ಪ್ರಕಾರ ಕಾಡುಗೊಲ್ಲರ ಕಟ್ಟೆಮನೆಗಳು ಮೊದಲು ಅವಿಭಜಿತ ಆಂಧ್ರ ಪ್ರದೇಶದ ರೇಪಲ್ಲಿ ಮತ್ತು ಮಾಪಲ್ಲಿಗಳಾಗಿದ್ದುವು ಎಂದು ತಿಳಿಯುತ್ತದೆ. ಇವರ ವಲಸೆ ಆಂಧ್ರದಿಂದ ಕರ್ನಾಟಕದ ಕಡೆಗೆ ಆರಂಭವಾಗಿ ನೆಲೆ ನಿಂತಾಗ ಚಿತ್ರದುರ್ಗ ಜಿಲ್ಲೆಯ ಹಾಲೇನಹಳ್ಳಿ ಮತ್ತು ಪಾಲೇನಹಳ್ಳಿಗಳಿಗೆ ಸ್ಥಳಾಂತರಗೊಂಡವು. ನಂತರದಲ್ಲಿ ಕುಲ/ಬೆಡಗುಗಳಲ್ಲಿ ವಿಭಜನೆ, ಜನಸಂಖ್ಯೆಯ ಏರಿಕೆ, ಸಾಂಪ್ರದಾಯಿಕ ವೈರುಧ್ಯಗಳ ಪರಿಣಾಮವಾಗಿ ಈ ಎರಡು ಕಟ್ಟೆಮನೆಗಳು ಸೇರಿದಂತೆ ಓಬವ್ವನಹಳ್ಳಿ, ತಾಳವಟ್ಟಿ ಹಾಗೂ ರಾಮೇನಹಳ್ಳಿ ಎಂಬ ಊರುಗಳಲ್ಲಿ ನೂತನ ಕಟ್ಟೆಮನೆಗಳು ರಚಿತವಾದುವು. ಇಲ್ಲಿ ಕಟ್ಟೆಮನೆಗಳು ಸುಪ್ರೀಂ ಕೋರ್ಟ್‌ನ ಮಾದರಿಯಲ್ಲಿ ಅಂತಿಮ ನ್ಯಾಯ ನಿರ್ಣಯದ ಕೇಂದ್ರಗಳಾಗಿದ್ದವು. ಇದಕ್ಕಿಂತ ಮುಂಚಿತವಾಗಿ ಕುಟುಂಬ ಮತ್ತು ಕುಲದ ಹಿರಿಯರ ನೇತೃತ್ವದಲ್ಲಿ ಪಂಚಾಯ್ತಿಗಳು ನಡೆಯುತ್ತಿದ್ದವು. ಇವುಗಳ ನಿರ್ಣಯಗಳನ್ನು ಕಡ್ಡಾಯವಾಗಿ ಪಾಲಿಸಬೇಕು. ಪಾಲಿಸದವನು ಕುಲದಿಂದ ಸಮುದಾಯದ ಶಿಕ್ಷೆಗೆ ಗುರಿಯಾಗಬೇಕಿತ್ತು. ಇಂತಹ ನ್ಯಾಯಪದ್ಧತಿಯು ತಮ್ಮೊಳಗಿನ ವೈರುಧ್ಯಗಳನ್ನು ತಾವೇ ಪರಿಹರಿಸಿಕೊಳ್ಳಲು ಮತ್ತು ಇತರೆ ಸಮುದಾಯಗಳ ಮಧ್ಯಪ್ರವೇಶವನ್ನು ನಿಯಂತ್ರಿಸಲು ಮತ್ತು ಸಾಮಾಜಿಕ ಐಕಮತ್ಯೆ ಸಾಧಿಸಲು ಮತ್ತು ಕಟ್ಟೆಮನೆ ಮತ್ತು ಗುಡಿಕಟ್ಟೆಗಳು ಸಹಾಯಕವಾಗಿದ್ದವು.

ಪ್ರಸ್ತುತ ಜಾಗತೀಕರಣ ಸಂದರ್ಭದಲ್ಲಿ ಈ ನ್ಯಾಯ ಪಂಚಾಯ್ತಿಯ ತನ್ನ ಸ್ಥಾನಮಾನಗಳನ್ನು ಕಳೆದುಕೊಳ್ಳುತ್ತಿದೆ. ಔಪಚಾರಿಕ ಸಾಮಾಜಿಕ ನಿಯಂತ್ರಣಗಳಾದ ಕಾರಾಗೃಹ, ಪೋಲೀಸ್, ಕೋರ್ಟ್‌ಗಳು ಅನೌಪಚಾರಿಕ ನಿಯಂತ್ರಣಗಳ ಮೇಲೆ ಸವಾರಿ ಹೊಂದಿವೆ. ಇದಕ್ಕೆ ಕಾರಣ, ಧಾರ್ಮಿಕ ನಂಬಿಕೆ/ ನಿಷೇಧಗಳ ಮೇಲೆ ಜನರು ಇಟ್ಟಿರುವ ಭರವಸೆಗಳು ಜಾಗತಿಕರಣದಿಂದ ಅಸ್ತಿತ್ವ ಕಳೆದುಕೊಂಡಿವೆ. ಇಡೀ ಜಗತ್ತೇ ಔಪಚಾರಿಕ ನಿಯಂತ್ರಣದಿಂದ ಸಮಾಜ ಸರಿದಾರಿಯೆಡೆಗೆ ಸಾಗಲು ಪ್ರಯತ್ನಿಸುವ ಸಂದರ್ಭದಲ್ಲಿ ಈ ಒಂದು ಸಮುದಾಯ ತನ್ನ ಸಂಪ್ರದಾಯಿಕ ನ್ಯಾಯಪದ್ಧತಿ ಅನುಕರಿಸಿ ಅದನ್ನು ಸಮರ್ಪಕವಾಗಿ ಅನುಷ್ಠನಗೊಳಿಸಲು ಕಷ್ಟ ಸಾಧ್ಯ. ಶಿಕ್ಷಣದಿಂದ ಹಕ್ಕು ಮತ್ತು ಕರ್ತವ್ಯ(ಸಂವಿಧಾನ) ಗಳ ಅರಿವಿನಿಂದ ವ್ಯಕ್ತಿ ಸ್ವಾತಂತ್ರ್ಯ ಅಧಿಕವಾಗಿದ್ದು ಅವುಗಳನ್ನು ವಿರೋಧಿಸುವ ಒಂದು ವರ್ಗ ಪ್ರತಿಯೊಂದು ಸಮುದಾಯದಲ್ಲಿಯೂ ಅಸ್ತಿತ್ವದಲ್ಲಿರುತ್ತದೆ. ಇದಕ್ಕೆ ರಾಜಾರಾಮನೋಹನ ರಾಯ್, ಪೆರಿಯಾರ್, ನಾರಾಯಣಗುರು, ಅಂಬೇಡ್ಕರ್‌ರಂತಹ ಮೇಧಾವಿಗಳು ಧಾರ್ಮಿಕತೆಯ ಹೆಸರಿನಲ್ಲಿ ನಡೆಯುವ ಶೋಷಣೆ ಮತ್ತು ಮೌಢ್ಯತೆಗಳನ್ನು ತೊಲಗಿಸಲು ತಳಸಮುದಾಯಗಳ ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯವಾಗಿ ವಿಶೇಷವಾದಂತಹ ಅವಕಾಶಗಳನ್ನು ಸಂವಿಧಾನದಲ್ಲಿ ಒದಗಿಸಿಕೊಟ್ಟರು. ಪ್ರಸ್ತುತ ಅದು ಭಾರತೀಯರ ಪ್ರಜೆಗಳ ಹಕ್ಕುಗಳ ಪ್ರತಿಪಾದಿಸುವ ಗ್ರಂಥ. ಈ ಸಂವಿಧಾನವು

ಸಾರ್ವತ್ರಿಕ ನೀತಿ ನಿಯಮಗಳನ್ನು ರೂಪಿಸಿ ಸಮಾನತೆ, ಸ್ವಾತಂತ್ರ್ಯ, ಭ್ರಾತೃತ್ವ, ಶ್ರಮ ಫಲವಾಗಿ ಅಸ್ತಿತ್ವದಲ್ಲಿದೆ. ಹಾಗಾಗಿ ಅದನ್ನು ಅನುಸರಿಸುವುದು ಪ್ರತಿಯೊಬ್ಬ ಶೋಷಿತನ ಮತ್ತು ಶೋಷಕನ ಕರ್ತವ್ಯವಾಗಿದೆ. ಇಂತಹ ಸಂದರ್ಭವು ಕಾಡುಗೊಲ್ಲರ ಆಧುನಿಕತೆಯತ್ತ ಮುಖ ಮಾಡಿದೆ. ಪ್ರಸ್ತುತ ದಿನಗಳಲ್ಲಿ ನ್ಯಾಯ ನಿರ್ದೇಶನಗಳು, ಕಟ್ಟೆಮನೆ/ ಗುಡಿಕಟ್ಟುಗಳನ್ನು ಪ್ರವೇಶಿಸದೇ ನೇರವಾಗಿ ಪೊಲೀಸ್ ಕೋರ್ಟ್ ಇತ್ಯಾದಿ ಔಪಚಾರಿಕ ನಿಯಂತ್ರಣಗಳನ್ನು ಅನುಸರಿಸಲಾಗುತ್ತಿದೆ. ಇದಕ್ಕೆ ಕಾರಣ ಸಮುದಾಯದ ಐಕ್ಯತೆಯಲ್ಲಿ ಅನೈಕ್ಯತೆ ಉಂಟಾಗಿರುವುದು ಮತ್ತು ಧರ್ಮದ ಹೆಸರಿನಲ್ಲಿ ನಡೆಯುವ ಅನುವಂಶೀಯ ಪಾರಮ್ಯವನ್ನು ಕೊನೆಗೊಳಿಸುವುದು ಕಾರಣವಾಗಿರಬಹುದು. ಎಲ್ಲಕ್ಕಿಂತ ಮುಖ್ಯವಾಗಿ ವ್ಯಕ್ತಿ ಮತ್ತು ಸಮಾಜದಲ್ಲಿನ ಪರಸ್ಪರ ಹೊಂದಿಕೆಯ ಅರಿವು ಇಲ್ಲದಿರುವುದು ಇಲ್ಲಿ ವ್ಯಕ್ತಿ ಬೇರೆ ಸಮುದಾಯ ಬೇರೆ ಎಂಬ ಮನಸ್ಥಿತಿಗಳು ಪ್ರಚಲಿತದಲ್ಲಿವೆ. ಆದರೆ ಅನೌಪಚಾರಿಕ ನಿಯಂತ್ರಣವು ಬಹುಬೇಗ ಪರಿಹಾರ ಕಂಡುಕೊಳ್ಳಲು ನೆರವಾಗುತ್ತಿತ್ತು ಮತ್ತು ದ್ವೇಷ ಅಸೂಯೆ ತಾತ್ಕಾಲಿಕವಾಗಿದ್ದವು. ಆದರೆ ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲ ಸಮುದಾಯದಲ್ಲಿ ಔಪಚಾರಿಕ ನಿಯಂತ್ರಣಗಳಿಂದ ದ್ವೇಷ ಅಸೂಯೆಗಳು ದೀರ್ಘವಾಗಿ ವಿಸ್ತರಿಸಿ ಪರಸ್ಪರ ಸೋದರತ್ವಕ್ಕೆ ವಿರುದ್ಧ ದಿಕ್ಕಿನೆಡೆಗೆ ಸಮುದಾಯವನ್ನು ದೂಡಿರುವುದು ಕಂಡುಬರುತ್ತಿವೆ.

ಆಧುನೀಕರಣ ಸಂದರ್ಭದಲ್ಲಿಯೂ ನ್ಯಾಯಾಲಯ ವ್ಯವಸ್ಥೆ ಮತ್ತು ಪೊಲೀಸ್ ವ್ಯವಸ್ಥೆ ಜಾರಿಯಲ್ಲಿದ್ದರೂ ಸಹ ಕಾಡುಗೊಲ್ಲ ಜನಾಂಗದಲ್ಲಿ ತಮ್ಮದೇ ರೀತಿಯಾದಂತಹ ಬಲಿಷ್ಠ ನ್ಯಾಯವ್ಯವಸ್ಥೆಯನ್ನು ಒಳಗೊಂಡಿದ್ದು ತಮ್ಮ ಸಮುದಾಯದಲ್ಲಿನ ಸಮಸ್ಯೆಗಳಿಗೆ ತಾವೇ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಈ ಜನಾಂಗದಲ್ಲಿ ಗುರು-ಹಿರಿಯರಿಗೆ ವಿಶೇಷವಾದ ಸ್ಥಾನಮಾನಗಳಿದ್ದು ಅವರು ನೀಡುವ ಆದೇಶಗಳನ್ನು ಚಾಚೂ ತಪ್ಪದೇ ತಮ್ಮ ಸಮುದಾಯದವರ ಆಜ್ಞೆಗಳನ್ನು ಪಾಲಿಸಲಾಗುವುದು. ಈ ನ್ಯಾಯ ಪಂಚಾಯಿತಿಯ ವ್ಯವಸ್ಥೆಯಲ್ಲಿ ಹಟ್ಟಿಯ ಗೌಡರು, ಪೂಜಾರಿಗಳು, ಉನ್ನತ ರೀತಿಯ ರಾಜಕೀಯ ಸ್ಥಾನಮಾನಗಳು, ಉನ್ನತ ಶಿಕ್ಷಣವನ್ನು ಪಡೆದಂತಹ ವ್ಯಕ್ತಿಗಳು ಹಾಗೂ ಹಟ್ಟಿಯ ಹಿರಿಯರಿರುತ್ತಾರೆ. ಇವರು ನೀಡುವ ಆಜ್ಞೆಯೇ ಸಂವಿಧಾನಬದ್ಧವಾಗಿ ನೀಡುವ ನ್ಯಾಯಾಲಯಗಳ ಆದೇಶಗಳಂತೆಯೇ ಈ ನ್ಯಾಯ ಪಂಚಾಯಿತಿಯಲ್ಲಿ ನೀಡುವ ಅದೇಶಗಳು ಅಷ್ಟೇ ಪರಿಣಾಮಕಾರಿಯಾಗಿರುತ್ತವೆ. ಇವರು ಆಜ್ಞೆಗಳನ್ನು ಮೀರುವುದು ಶಿಕ್ಷಾರ್ಹ ಅಪರಾಧವಾಗಿದ್ದು ಹಟ್ಟಿಗಳಿಂದ ಬಹಿಷ್ಕರಿಸಲಾಗುತ್ತದೆ. ಈ ಕಾಡುಗೊಲ್ಲ ಸಮುದಾಯದಲ್ಲಿ ಮದುವೆ, ಆಸ್ತಿಯ ಹಂಚಿಕೆ ಕೌಟುಂಬಿಕ ಸಮಸ್ಯೆಗಳು ಏನಾದರೂ ಕಂಡುಬಂದಲ್ಲಿ ಈ ಜನಾಂಗದ ನ್ಯಾಯ ಪಂಚಾಯಿತಿಯ ಮೊರೆ ಹೋಗುವುದರ ಮೂಲಕ ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲಾಗುತ್ತದೆ. ಈ ಜನಾಂಗದ ಮೇಲೆ ಇತರೆ ಜನಾಂಗಗಳ ಆಕ್ರಮಣ ಅಥವಾ ದೌರ್ಜನ್ಯಗಳು ನಡೆದರೆ ಹಟ್ಟಿಯ ಜನರೆಲ್ಲರೂ ಸೇರಿ ಈ ವಿಷಯದ ಬಗ್ಗೆ ಚರ್ಚಿಸುವುದರ ಮೂಲಕ ನ್ಯಾಯ ಪಂಚಾಯಿತಿಯ ಆದೇಶದಂತೆ ಸೂಕ್ತ ಪ್ರಕ್ರಿಯೆಗಳನ್ನು ನೀಡುವುದರ ಮೂಲಕ ತಮ್ಮ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ತಮ್ಮ ಸಮುದಾಯದಲ್ಲಿಯೇ ಸಂಭವಿಸುವಂತಹ ಮಡಿ-ಮೈಲಿಗೆ, ಹುಟ್ಟು-

ಸಾವು, ನಿಯಮಗಳ ಉಲ್ಲಂಘನೆಯಾದಾಗ ಉದಾಹರಣೆಗೆ ಚಪ್ಪಲಿಗಳಲ್ಲಿ ಹೊಡೆದಾಡುವುದು, ಸಮಾನ ಕುಲದಲ್ಲಿ ವಿವಾಹವಾಗುವುದು, ಅಂತರ್ ಜಾತಿಯ ವಿವಾಹ, ಗಂಡ–ಹೆಂಡತಿಯ ಬೇರ್ಪಡಿಕೆ ಈ ಎಲ್ಲಾ ಸಮಸ್ಯೆಗಳಿಗೆ ತಮ್ಮ ನ್ಯಾಯ ಪಂಚಾಯಿತಿಯಲ್ಲಿಯೇ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಇವರು ನೀಡುವ ನ್ಯಾಯ–ತೀರ್ಮಾನವು, ಸತ್ಯ–ಅಸತ್ಯತೆ, ವಾದ–ತೀರ್ಮಾನಗಳನ್ನು ಪರಿಶೀಲಿಸಿ ಪಾರದರ್ಶಕವಾದ ತೀರ್ಪುಗಳನ್ನು ನೀಡುವುದರ ಮೂಲಕ ಅನ್ಯಾಯಕ್ಕೆ ಒಳಗಾದ ವ್ಯಕ್ತಿಗೆ ನ್ಯಾಯವನ್ನು ಒದಗಿಸುವುದರ ಮೂಲಕ, ತಪ್ಪು ಮಾಡಿದ ವ್ಯಕ್ತಿಗೆ ದಂಡ ವಿಧಿಸುವುದರ ಮೂಲಕ ಅಥವಾ ಶಿಕ್ಷೆ, ಸಾಮಾಜಿಕ ಬಹಿಷ್ಕಾರ, ಧರ್ಮದೇಟು ಈ ರೀತಿಯ ಶಿಕ್ಷೆಗಳನ್ನು ನೀಡುವುದರ ಮೂಲಕ ಈ ತಪ್ಪುಗಳು ಮತ್ತೆ ಮರುಕಳಿಸದಂತೆ ಮಾಡಿ ಸಾಮಾಜಿಕ ಶಾಂತಿ ಮತ್ತು ಭದ್ರತೆಯ ದೃಷ್ಟಿಯಿಂದ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯಲಾಗುವುದು. ಈ ಬಗೆಯ ನ್ಯಾಯ ಪಂಚಾಯಿತಿಯು ಅಸ್ತಿತ್ವದಲ್ಲಿದ್ದು ಪರಿಣಾಮಕಾರಿಯಾಗಿದೆ. ಪ್ರಸ್ತುತ ಆಧುನೀಕರಣ ಪ್ರಭಾವದಿಂದ ತುಂಬ ವಿರಳ ಸಂಖ್ಯೆಯಲ್ಲಿ ಕಾನೂನಿನ ಮೊರೆ ಹೋಗುವುದನ್ನು ಇತ್ತೀಚಿನ ದಿನಗಳಲ್ಲಿ ಕಂಡುಬರುತ್ತಿದೆ.

**೫.೩. ಸಮುದಾಯದ ಶುದ್ಧತೆ ಮತ್ತು ಕಾಡುಗೊಲ್ಲ ಸಮುದಾಯ**

ಕಾಡುಗೊಲ್ಲ ಸಮುದಾಯದವರು ಪ್ರತ್ಯೇಕ ನೆಲೆಯಲ್ಲಿ ವಾಸಿಸುವರು. ಇವರ ಜೀವನದಲ್ಲಿ ಹಟ್ಟಿ ಸಂಸ್ಕೃತಿಯನ್ನು ಯಥಾವತ್ತಾಗಿ ಪಾಲಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಪಶುಪಾಲನೆ ಪಾರಂಪರಿಕ ವೃತ್ತಿಯಾಗಿರುವ ಕಾರಣ ಪಶುಗಳೇ ಇವರಿಗೆ ದೈವ ಮತ್ತು ಸಂಪತ್ತಿನ ಸೂಚಕಗಳಾಗಿವೆ. ಇಂತಹ ಪಶು ಮತ್ತು ಕುರಿಗಳನ್ನು ಸಾಕುವಲ್ಲಿ ನಿಯತ್ತಾದ ಸೇವೆಯನ್ನು ಸಲ್ಲಿಸುವರು. ತಮಗೆ ಬೇಕಾದರೆ ಆಹಾರ ನೀರು ಇಲ್ಲವಾದರೂ ಸಹ ಅವುಗಳಿಗೆ ಅಗತ್ಯಕ್ಕೆ ತಕ್ಕಂತೆ ಮೇವು ನೀರು ಇತ್ಯಾದಿಗಳನ್ನು ಒದಗಿಸಲಾಗುವುದು. ಇವರು ಹಟ್ಟಿಗಳಲ್ಲಿ ವಾಸಿಸುವುದರಿಂದ ಗುಡಿಸಿಲು ಮನೆಗೆ ಹೊಂದಿಕೊಂಡಂತೆ ಕಾಡಿನ ಮುಳ್ಳಿನ ಗಿಡಗಳಿಂದ ರೊಪ್ಪಗಳನ್ನು ನಿರ್ಮಿಸುವರು. ಈ ರೊಪ್ಪಗಳು ಇವರಿಗೆ ಪವಿತ್ರ ಸ್ಥಳಗಳಾಗಿದ್ದು ದಿನ ನಿತ್ಯದ ಆಹಾರ ತಯಾರಿಕೆಯ ನಂತರ ಸರಗವನ್ನು ಇಡೀ ರೊಪ್ಪದ ಸುತ್ತ ಹಾಕಲಾಗುವುದು ಮತ್ತು ಈ ರೊಪ್ಪಗಳಿಗೆ ಯಾವುದೇ ಅನಿಷ್ಟದ ಪ್ರಾಣಿ ಪಕ್ಷಿಗಳು, ಅಂದರೆ ಕೋಳಿ ಇವರಿಗೆ ನಿಷೇಧಿತವಾಗಿರುವುದರಿಂದ ಕೋಳಿ ಸಾಕಾಣಿಕೆಯು ಜಾಗತೀಕರಣ ಪ್ರಭಾವದ ಸೂಚಕವಾಗಿ ಕಂಡುಬರುತ್ತದೆ. ಹಾಗೆಯೇ ಮಾಸಿಕ ಋತುಸ್ರಾವದಂತಹ ಮಡಿ ಮೈಲಿಗೆಯ ಸಂದರ್ಭದಲ್ಲಿ ಸ್ತ್ರೀಯರನ್ನು ಪ್ರತ್ಯೇಕ ಗುಡಿಸಿಲಿನಲ್ಲಿ ೩ ದಿನಗಳ ಕಾಲ ಬಿಡಲಾಗುವುದು. ಇದು ಅವರ ದೃಷ್ಟಿಯಲ್ಲಿ ಮಡಿ ಮೈಲಿಗೆಯನ್ನು ಕರಾರುವಕ್ಕಾಗಿ ಶುದ್ಧೀಕರಣವಾಗಬೇಕು, ಇಲ್ಲವಾದರೆ ದೇವರ ದೃಷ್ಟಿಯಲ್ಲಿ ನಾವುಗಳು ದ್ರೋಹಿಗಳಾಗುತ್ತೇವೆ ಎಂಬ ಧಾರ್ಮಿಕ ಭಯ ಅವರನ್ನು ಕಾಡುತ್ತಿದೆ. ಇದನ್ನು ವೈಜ್ಞಾನಿಕವಾಗಿ ಗ್ರಹಿಸಿದಾಗ ದಿನನಿತ್ಯ ಪುರುಷರಷ್ಟೇ ಸಮಾನವಾಗಿ ದುಡಿಯುವ ಮಹಿಳೆಯ ತಿಂಗಳಾಂತ್ಯದಲ್ಲಿ ಮಾಸಿಕ ಸ್ರಾವಕ್ಕೆ ಒಳಗಾದಾಗ ಅವಳ ದೇಹದಿಂದ ಅಧಿಕ ರಕ್ತಸ್ರಾವ ಆಗಿ ದೈಹಿಕವಾಗಿ ನಿಶ್ಶಕ್ತಿ ಹೊಂದುವಳು. ಅಂತಹವಳಿಗೆ ಯಾವುದೇ ರೋಗಗಳು ಅಂಟಿಕೊಳ್ಳಬಾರದು

ಎಂದು ಮುಂದಾಲೋಚನೆಯಿಂದ ಅವಳಿಗೆ ಪ್ರತ್ಯೇಕ ನೆಲೆ ಒದಗಿಸಿದೆ. ೩ ದಿನಗಳವರೆಗೆ ದೈಹಿಕ ವಿಶ್ರಾಂತಿ ನೀಡುವುದು ಉತ್ತಮ ಎಂದೇ ಹೇಳಬಹುದು. ಆದರೆ ಇಂದಿನ ಮಹಿಳಾ ಚಿಂತಕರು ಮತ್ತು ಸ್ತ್ರೀಪರ ಆಯೋಗಗಳು ಈ ಕ್ರಮವನ್ನು ಖಂಡಿಸುತ್ತಿದ್ದಾರೆ. ಆದರೆ ಜಾಗತೀಕರಣ ಸಂದರ್ಭದಲ್ಲಿಯೂ ಇದು ನಗರಕ್ಕೆ ಸಮೀಪ ಮತ್ತು ನಗರದಲ್ಲಿ ವಾಸಿಸುವವರಲ್ಲಿ ಇಂದಿಗೂ ಪ್ರಚಲಿತದಲ್ಲಿದೆ. ಕಾಡುಗೊಲ್ಲ ಸಮುದಾಯದಲ್ಲಿ ಪರಿಶುದ್ಧತೆಯ ಕುರಿತು ಮತ್ತೊಂದು ಕಠಿಣ ನಿಲುವನ್ನು ಹೊಂದಿದ್ದಾರೆ. ಇವರ ಹಟ್ಟಿಗಳಿಗೆ ದಲಿತ ಸಮುದಾಯಗಳಿಗೆ ಪ್ರವೇಶವಿಲ್ಲದ ಕಾರಣ ಕಾಡುಗೊಲ್ಲರು ಹಟ್ಟಿ ನಿವಾಸಿಗಳಾಗಿದ್ದು ಆರಂಭದಿಂದಲೂ ಪಶುಪಾಲನೆ ಮತ್ತು ಕುರಿಸಾಕಾಣಿಕೆಯಲ್ಲಿ ತೊಡಗಿಸಿಕೊಂಡಿದ್ದರೂ, ಈ ವೃತ್ತಿಗೆ ಅನುಗುಣವಾಗಿ ತನ್ನ ಅಲೆಮಾರಿ ಬದುಕಿನಲ್ಲಿ ತಾತ್ಕಾಲಿಕ ಗುಡಿಸಿಲು ಮನೆ ಮತ್ತು ರೊಪ್ಪಗಳನ್ನು ನಿರ್ಮಿಸಿಕೊಂಡಿರುತ್ತಿದ್ದರು. ಈ ಮನೆಗಳು ಕಾಡಿನಲ್ಲಿ ದೊರೆಯುವ ಸೊಪ್ಪು, ಗಿಡ ಮತ್ತು ಬಳ್ಳಿಗಳಿಂದ ನಿರ್ಮಾಣವಾಗಿರುತ್ತಿದ್ದವು. ಇಂತಹ ಬದುಕಿನಲ್ಲಿ ದಲಿತ ಸಮುದಾಯದವರು ಈ ಹಿಂದೆ ಪೂರ್ವದಲ್ಲಿ ತಮ್ಮ ದೇವರುಗಳನ್ನು ಹಬ್ಬಹರಿದಿನಗಳಲ್ಲಿ ಹೊರಗೆ ತೆಗೆದುಕೊಂಡು ಹೋದಾಗ ಆಗಿನ ಕಾಲದಲ್ಲಿ ಬೆಳಕಿನ ವ್ಯವಸ್ಥೆ ಇಲ್ಲದ ಕಾರಣ ಪಂಜುಗಳನ್ನು ಬಳಸಲಾಗುತ್ತಿತ್ತು. ಆ ಸಮಯದಲ್ಲಿನ ಪಂಜನ್ನು ಹಿಡಿಯುವವರು ದಲಿತರಾಗಿದ್ದರು. ಪಂಜನ್ನು ಹಿಡಿದು ಹಟ್ಟಿ ಪ್ರವೇಶಿಸಿದರೆ ಕಾಡುಗೊಲ್ಲರ ಹಟ್ಟಿಗಳು ಗುಡಿಸಲುಗಳಿಂದ ಕೂಡಿರುವುದರಿಂದ ಬೆಂಕಿ ತಗಲಬಹುದಾದ ಸಂಭವ ಹೆಚ್ಚಾಗಿರುವುದರಿಂದ ಕೈಯಲ್ಲಿ ಹಿಡಿದು ಹಟ್ಟಿಯನ್ನು ಪ್ರವೇಶಿಸಿದರೆ ಅದರ ಕಿಡಿಗಳು ಗುಡಿಸಲು ಮತ್ತು ರೊಪ್ಪಗಳಿಗೆ ತಗುಲಿದರೆ ಬಹುಬೇಗ ಗುಡಿಸಿಲು ರೊಪ್ಪದ ಸಮೇತ ಮನುಷ್ಯ ಮತ್ತು ಕುರಿ ಹಾಗೂ ಪಶುಗಳು ಜೀವಕ್ಕೆ ಆಪತ್ತು ತಂದೊಡ್ಡುತ್ತದೆ ಎಂಬ ನಂಬಿಕೆ ಹಿನ್ನೆಲೆಯಲ್ಲಿ ಪಂಜನ್ನು ಹಿಡಿದಂತಹ ವ್ಯಕ್ತಿ ಹಟ್ಟಿಯಿಂದ ಹೊರಗೆ ನಿಲ್ಲಬೇಕಾಗಿತ್ತು. ಅಂದಿನಿಂದ ಇದು ಸಂಪ್ರದಾಯವಾಗಿಯೇ ಬೆಳೆದುಬಂದಿದೆ ಎನ್ನಬಹುದು. ಈ ಕಾರಣಕ್ಕಾಗಿ ದಲಿತ ಸಮುದಾಯದವರ ಪ್ರವೇಶವನ್ನು ಕಾಡುಗೊಲ್ಲ ಸಮುದಾಯ ನಿರಾಕರಿಸಿರಬಹುದಾಗಿದೆ. ಇದನ್ನು ಈಗಲೂ ಸಹ ಕಟ್ಟುನಿಟ್ಟಾಗಿ ಆಚರಿಸಿಕೊಂಡು ಬಂದಿದ್ದಾರೆ. ಆದರೆ ಹಟ್ಟಿಸಂಸ್ಕೃತಿ ಗ್ರಾಮಸಂಸ್ಕೃತಿಯಾಗಿ ಮಾರ್ಪಾಡಾಗಿರುವ ಈ ಸಂದರ್ಭದಲ್ಲಿ ಆ ನಂಬಿಕೆಯನ್ನು ಉಳಿಸಿಕೊಳ್ಳುವುದು ಸೂಕ್ತವಲ್ಲ ಎನಿಸುತ್ತದೆ. ಆದರೆ ಜಾಗತೀಕರಣ ಪ್ರಭಾವದಿಂದ ಮತ್ತು ಕಾನೂನುಗಳ ರಕ್ಷಣೆ ಮತ್ತು ಸಂವಿಧಾನದ ೧೭ನೇ ವಿಧಿಯ ಅನ್ವಯ ಯಾವುದೇ ವ್ಯಕ್ತಿಯನ್ನು ಅಸ್ಪೃಶ್ಯನಂತೆ ನಡೆಸಿಕೊಳ್ಳುವಂತಿಲ್ಲ. ಇದರ ಪ್ರಭಾವದಿಂದ ಉದ್ಯೋಗಸ್ಥ ದಲಿತ ಸಮುದಾಯದವರು ಹಟ್ಟಿಗಳಿಗೆ ಪ್ರವೇಶ ಪಡೆದಿದ್ದಾರೆ. ಇದಕ್ಕೆ ನಿದರ್ಶನವೆಂದರೆ ಹೊಸದುರ್ಗ ತಾಲ್ಲೂಕಿನ ಗುತ್ತಿಕಟ್ಟೆ ಗೊಲ್ಲರಹಟ್ಟಿ. ಈ ಹಟ್ಟಿಯಲ್ಲಿ ಪೋಸ್ಟ್‌ಮೆನ್ ದಲಿತ ಸಮುದಾಯದವರಾಗಿದ್ದರೂ ಇವರ ಪ್ರವೇಶಕ್ಕೆ ಈ ಹಟ್ಟಿಯವರು ಯಾವುದೇ ನಿರ್ಬಂಧ ಹೇರದಿರುವುದು ಇಂದಿನ ಕಾಡುಗೊಲ್ಲರು ಸ್ವಲ್ಪಮಟ್ಟಿಗಾದರೂ ಇಂದಿನ ಪ್ರಸ್ಥುತ ಸ್ಥಿತಿಗೆ ಹೊಂದಿಕೊಂಡಿರುವುದಕ್ಕಾಗಿ ಒಂದು ನಿದರ್ಶನವಾಗಿದೆ. ಹಾಗೆಯೇ ಹೊಳಲ್ಕೆರೆ ತಾಲ್ಲೂಕಿನ ಚಿತ್ರಹಳ್ಳಿ ಗೊಲ್ಲರಹಟ್ಟಿಯಲ್ಲಿರುವ ಚಿತ್ರಲಿಂಗೇಶ್ವರ ದೇವಾಲಯ ಮುಜರಾಯಿ ಇಲಾಖೆಗೆ ಸೇರಿದ್ದು ಇಲ್ಲಿ

ಕಾಡುಗೊಲ್ಲರು ವಾಸವಾಗಿರುತ್ತಾರೆ ಮತ್ತು ದಲಿತರಿಗೂ ಸಹ ದೇವಸ್ಥಾನಕ್ಕೆ ಪೂಜೆ ಕಾರ್ಯ ಕೈಗೊಳ್ಳಲು ಪ್ರವೇಶ ಕಲ್ಪಿಸಿರುವುದನ್ನು ಕಾಣಬಹುದಾಗಿದೆ. ಇಷ್ಟೇ ಅಲ್ಲದೇ ದಲಿತ ಸಮುದಾಯದ ಜನಪ್ರತಿನಿಧಿಗಳನ್ನು ಸಹ ಇದೇ ರೀತಿಯಾಗಿ ಹಟ್ಟಿಯಿಂದ ಹೊರಗಿಡಲಾಗುತ್ತಿತ್ತು. ಆದರೆ ಜಾಗತೀಕರಣದ ಸಂದರ್ಭದಲ್ಲಿ ಇವರ ಪರಿಶುದ್ಧತೆಯೂ ಇಲ್ಲವಾಗಿ ಇತರ ಸಮುದಾಯಗಳಲ್ಲಿ ಬೆರೆತುಹೋಗಿದ್ದಾರೆ. ಇತ್ತೀಚಿನ ದಿನಗಳಲ್ಲಿ ಕೆಟ್ಟ ಕಂದಾಚಾರಗಳು ಕಾಡುಗೊಲ್ಲ ಸಮುದಾಯದಲ್ಲಿ ಕಡಿಮೆಯಾಗಿದೆ.

### ೫.೪. ಕಾಡುಗೊಲ್ಲರ ಆರ್ಥಿಕತೆಯ ಮೇಲೆ ಜಾಗತೀಕರಣದ ಪ್ರಭಾವ

ನದಿ ಬಯಲಲ್ಲಿ ಹುಟ್ಟಿದ ನಾಗರಿಕತೆ ಮಾನವನನ್ನು ವಿವಿಧ ಬಂಧಗಳಿಂದ ಸಂಕೀರ್ಣಗೊಳಿಸಿತು. ಇದರ ಪರಿಣಾಮವಾಗಿ ಕುಟುಂಬ, ಬಂಧುತ್ವ, ವರ್ಣ ಮತ್ತು ಜಾತಿ ಎಂಬ ಇತ್ಯಾದಿ ಪರಿಕಲ್ಪನೆಗಳು ರೂಪಿತಗೊಂಡವು. ಮಾನವನು ಪ್ರಕೃತಿಯ ನಿಗೂಢ ಜ್ಞಾನವನ್ನು ಅರಿಯುತ್ತಾ ತನ್ನ ಬದುಕನ್ನು ಪ್ರಕೃತಿಯೊಂದಿಗೆ ಹೊಂದಿಕೊಳ್ಳುವ ಮತ್ತು ಹೋರಾಡುವ ತಂತ್ರಗಳನ್ನು ರೂಪಿಸಿಕೊಂಡನು. ಇದರಿಂದಾಗಿ ಅವನ ಬೌದ್ಧಿಕತೆ ಜೀವನ ಬೆಳೆದಂತೆ ತನ್ನಲ್ಲಿ ವರ್ಗೀಕರಣ/ಏಣೀಶ್ರೇಣೀಕರಣ, ಶ್ರೇಷ್ಠ ಮತ್ತು ಕನಿಷ್ಠ ಪ್ರವೃತ್ತಿ ಬೆಳೆದವು. ಇದೇ ವಿಶಾಲ ಜಗತ್ತು ಖಂಡ, ದೇಶ, ರಾಜ್ಯಗಳಾಗಿ ವಿಗಂಡನೆಯಾಯಿತು. ಈ ದೇಶಗಳು ತಮ್ಮ ದೇಶದ ಪ್ರಕೃತಿಯ ಸಂಪತ್ತನ್ನು ಬಳಸಿಕೊಳ್ಳಲು ವೈಜ್ಞಾನಿಕ ಅನ್ವೇಷಣೆಗಳು ಯುರೋಪಿನಲ್ಲಿ ಮೊದಲುಗೊಂಡು ಇಡೀ ಜಗತ್ತಿಗೆ ವಿಸ್ತರಣೆಗೊಂಡವು. ಆಧುನಿಕ ಮಾನವನ ಬೌದ್ಧಿಕ ವಿಸ್ತರಣೆಯಿಂದ ಯುರೋಪಿನಲ್ಲಾದ ಕ್ಷಿಪ್ರ ಬದಲಾವಣೆಯನ್ನು ಕೈಗಾರೀಕರಣ ಎಂದು ಹೇಳಬಹುದು.

ಭಾರತೀಯ ಸಮಾಜದ ಮೇಲೆ ಈ ಕೈಗಾರೀಕರಣದಿಂದಾಗಿ ರಚನೆ ಮತ್ತು ಕಾರ್ಯಗಳಲ್ಲಿ ಸ್ಥಿತ್ಯಂತರವನ್ನು ಕಾಣಬಹುದು. ಒಂದು ದೇಶ ಸ್ಥಿತ್ಯಂತರವನ್ನು ಹೊಂದಲು ಕಾಲ ಮತ್ತು ದೇಶಗಳು ಕಾರಣವಾಗಿರುತ್ತದೆ. ಆಧುನಿಕ ಶಸ್ತ್ರಾಸ್ತ್ರ ಮತ್ತು ನೂತನ ಉಪಕರಣಗಳ ಆವಿಷ್ಕಾರದಿಂದಾಗಿ ಸಮುದ್ರಯಾನಕ್ಕೆ ಅನುಕೂಲಕರವಾದ ಕಾಲವಾಯಿತು. ಇವುಗಳ ಬಳಕೆಯಿಂದಾಗಿ ಒಗ್ಗಟ್ಟಿಲ್ಲದ ಭಾರತ ದೇಶ ಯೂರೋಪಿಯನ್ನರನ್ನು ವ್ಯಾಪಾರಿಗಳಾಗಿ ಇಟ್ಟುಕೊಳ್ಳದೇ ತಮ್ಮನ್ನಾಳುವ ರಾಜರುಗಳನ್ನಾಗಿ ಅಂಗೀಕರಿಸಲಾಯಿತು. ಇದರಿಂದಾಗಿ ಭಾರತದಲ್ಲಿದ್ದ ಸ್ಥಿತಿ ಯುರೋಪಿನ ಸಮಾಜದ ಸಂಸ್ಕೃತಿಯ ಪ್ರಭಾವದಿಂದ ಗತಿಯಾಗಿ ಬದಲಾವಣೆ ಹೊಂದಲಾರಂಭಿಸಿತು. ಇದರಿಂದಾಗಿ ಇಂಗ್ಲಿಷ ಶಿಕ್ಷಣ, ಉಡುಗೆ-ತೊಡೆಗಳು, ಜೀವನವಿಧಾನಗಳು ಬದಲಾಗತೊಡಗಿದವು. ಆದರೆ ವರ್ಗಸಮಾಜದ ಚಿಂತನೆಗಳು ಸಂಪೂರ್ಣವಾಗಿ ಜಾತಿ ಸಮಾಜವನ್ನು ಪರಿವರ್ತಿಸುವಲ್ಲಿ ವಿಫಲವಾದವು. ಇದಕ್ಕೆ ಕಾರಣ ಭಾರತೀಯ ಸಮಾಜದಲ್ಲಿ ತಲೆಮಾರುಗಳ ಆಧಿಪತ್ಯ ತಳಮಟ್ಟದಲ್ಲಿ ಬೇರೂರಿರುವ ನಂಬಿಕೆ ನಿಷೇಧಗಳು ಹೊಸ ಸ್ವರೂಪದೊಂದಿಗೆ ತನ್ನ ಅಸ್ತಿತ್ವ ಅಳಿಸಿಕೊಂಡವು. ಚತುರ್ವರ್ಣ ವ್ಯವಸ್ಥೆಯಲ್ಲಿ ಸ್ಥಾನ ಪಡೆದ ಸಮುದಾಯಗಳು ವೈದಿಕರ ಧಾರ್ಮಿಕ ನಂಬಿಕೆಯ ಹಿಡಿತದಿಂದ ಪ್ರಾಣಿಗಳ ಸಮನಾದ

ಬದುಕು ಅನುಭವಿಸಿದರೆ, ಮುಖ್ಯವಾಹಿನಿಯ ಸಮಾಜದಿಂದ ದೂರದಿಂದ ಬುಡಕಟ್ಟು ಸಮುದಾಯಗಳು ಯೂರೋಪಿಯನ್ನರ ಮತಾಂತರ, ವಸಾಹತುಶಾಹಿ ನೀತಿಗಳಿಂದ ತನ್ನ ಪರಿಶುದ್ಧತೆ ಮತ್ತು ಸಂಸ್ಕೃತಿಯಲ್ಲಿ ಅನಿವಾರ್ಯವಾಗಿ ಸ್ಥಿತ್ಯಂತರ ಹೊಂದಬೇಕಾಯಿತು.

ಭಾರತೀಯ ಸಮಾಜದ ಸಿಂದೂ ಬಯಲಿನ ನಾಗರಿಕತೆಯಿಂದ ಇಂದಿನ ಉಪಖಂಡ ನಡುವಿನ ವಿವಿಧ ಹಂತಗಳಲ್ಲಿ ಸ್ಥಿತ್ಯಂತರ ಹೊಂದುತ್ತಲೇ ಬಂದಿದೆ. ಕೆಲವೊಂದು ಅಂಶಗಳನ್ನು ಕಳೆದುಕೊಳ್ಳುತ್ತಾ ಮತ್ತೊಂದು ಹೊಸ ಅಂಶಗಳನ್ನು ಸೇರಿಸಿಕೊಳ್ಳುತ್ತಾ ಜೀವನಕ್ಕೆ ಅಗತ್ಯವಾದ ಸಂಸ್ಕೃತಿಯನ್ನು ಉಳಿಸಿಕೊಳ್ಳುತ್ತ ಬಂದಿದೆ.

ಭಾರತೀಯ ಸಮಾಜದಲ್ಲಿ ಬುಡಕಟ್ಟುಗಳ ಸ್ಥಿತ್ಯಂತರವನ್ನು ಗಮನಿಸುವುದಾದರೆ ಸಿಂಧೂ ಬಯಲಿನ ನಾಗರಿಕತೆಯಿಂದಲೇ ಬುಡಕಟ್ಟುಗಳ ಜೀವನವಿಧಾನ/ಸಂಸ್ಕೃತಿಯನ್ನು ಇತಿಹಾಸದಿಂದ ತಿಳಿಯಲಾಗಿದೆ. ಸರಳ ಸಮಾಜದ ಆದಿ ಮಾನವನನ್ನು ಪ್ರಕೃತಿ ಆರಾಧನೆಯನ್ನು ಅವಲಂಬಿಸಿ ಬದುಕು ಸಾಗಿಸುತ್ತಿದ್ದನು. ಕಾಡು ಅವರಿಗೆ ದೇವರ ಸ್ವರೂಪವಾಗಿ ಆರಾಧಿಸಲ್ಪಡುತ್ತಿತ್ತು. ಪಾಶ್ಚಿಮಾತ್ಯರ ಆಗಮನದಿಂದಾಗಿ ವಸಾಹತು ಕಾಲದಲ್ಲೂ ಕಾಡನ್ನು ಅವಲಂಬಿಸಿ ಬದುಕುತ್ತಿದ್ದ ಬುಡಕಟ್ಟುಗಳು ಕ್ರಮೇಣ ಕಾಡಿನ ಜೀವನವನ್ನು ಕಳೆದುಕೊಳ್ಳುತ್ತಾ ಯೂರೋಪಿಯನ್ನರಿಗೆ ಹಸ್ತಾಂತರಿಸಿದರು. ಇದಕ್ಕೆ ಕಾರಣ ಸ್ಥಳೀಯ ರಾಜರ ದುರ್ಬಲತೆ, ಪರಸ್ಪರ ಅಸಹನೆಗಳು ಇವರ ಒಗ್ಗಟ್ಟಿಲ್ಲದ ರಾಜಕೀಯ ಸ್ಥಿತಿಗಳು. ಇದರಿಂದಾಗಿ ಯೂರೋಪಿಯನ್ನರು ಕಾಡು ಮತ್ತು ನಾಡಿನ ಮೇಲೆ ಆಧಿಪತ್ಯ ಹೊಂದಲು ಸಾಧ್ಯವಾಯಿತು. ಇದರಿಂದಾಗಿ ಭಾರತೀಯ ಸಮಾಜದ ಸ್ವತಂತ್ರ ಬದುಕಿನಿಂದ ಅಧೀನ ಬದುಕಿಗೆ ಮಾರ್ಪಟ್ಟಿತು.

ಯೂರೋಪಿಯನ್ನರು ಕ್ರಮೇಣವಾಗಿ ತುಂಡು ತುಂಡಾಗಿದ್ದ ಭಾರತವನ್ನು ತನ್ನ ಸುಪರ್ದಿಗೆ ತೆಗೆದುಕೊಂಡಾಗ ಎದುರಾದ ಸಂಕಷ್ಟ ಈ ವಿಶಾಲ ವಸಾಹತುವನ್ನು ನಿರ್ವಹಣೆ ಮಾಡುವುದಾಗಿತ್ತು. ಅಂತಹ ಸಂದರ್ಭದಲ್ಲಿ ಅಲ್ಪಸಂಖ್ಯಾತವಾಗಿದ್ದ ಪಾಶ್ಚಿಮಾತ್ಯರಿಗೆ ನೆರವಿಗೆ ಬೇಕಾದದ್ದು ಬುಡಕಟ್ಟುಗಳು ಮತ್ತು ವೈದಿಕರ ತುಳಿತಕ್ಕೆ ಒಳಗಾಗಿ ನಿಕೃಷ್ಟ ಬದುಕು ಸಾಗಿಸುತ್ತಿದ್ದ ತಳಸಮುದಾಯಗಳು. ಕಾಡು ಮತ್ತು ನಾಡು ಎರಡು ಯೂರೋಪಿಯನ್ನರ ಕೈವಶವಾದಾಗ ಸಹಜವಾಗಿ ಬುಡಕಟ್ಟುಗಳ ಹಕ್ಕುಗಳು ಹಸ್ತಾಂತರಗೊಂಡವು. ಬುಡಕಟ್ಟು ಜನರ ಸದೃಢ ಮೈಕಟ್ಟು ಕಾಡಿನ ಕುರಿತಾದ ಪಾರಂಪರಿಕ ಜ್ಞಾನ ಮತ್ತು ಯುದ್ಧ ಕೌಶಲ್ಯಗಳು ನಾಡಿನ ಜನರನ್ನು ಹಿಡಿತದಲ್ಲಿ ಇಟ್ಟುಕೊಳ್ಳಲು ನೆರವಾಯಿತು. ಬ್ರಿಟಿಷರಿಗೆ ಸ್ಪಂದಿಸದ ಬುಡಕಟ್ಟುಗಳಿಗೆ ಕ್ರಿಮಿನಲ್ ಟ್ರೈಬ್ ಹಣೆ ಪಟ್ಟಿ ಹಚ್ಚಿ ಸಾಮಾಜಿಕ ಸಂಕೋಲೆಯಲ್ಲಿ ಬಂಧಿಸಿದರು. ಈ ಹಣೆಪಟ್ಟಿಯಿಂದ ಬುಡಕಟ್ಟುಗಳು ಸಾಮಾಜಿಕ, ಆರ್ಥಿಕ ರಾಜಕೀಯವಾಗಿ ಕೆಳಸ್ತರಕ್ಕೆ ತಳಲ್ಪಟ್ಟವು. ಹೀಗೆ ನಾಗರಿಕತೆಯಿಂದ ಪ್ರಸ್ತುತದವರೆಗೂ ಭಾರತೀಯ ಸಮಾಜ ಮತ್ತು ಅದರ ಉಪಚರಣೆಗಳು ಸ್ಥಿತ್ಯಂತರ ಹೊಂದುತ್ತಲೇ ಬಂದಿರುವುದನ್ನು ಕಾಣುತ್ತೇವೆ. ಭಾರತೀಯ ಸಮಾಜ ಜಾತಿ ಎಂಬ ಪೆಡಂಭೂತದಿಂದ ಸಂಕೀರ್ಣಗೊಂಡಿದೆ. ಈ ಜಾತಿಯ ಬಳುವಳಿ ನಮಗೆ ಗುಪ್ತರ ಕಾಲದಿಂದ ಕಠಿಣವಾಗಿರುವುದನ್ನು ಇತಿಹಾಸದಿಂದ ತಿಳಿಯಬಹುದು. ಇಂತಹ ಜಾತಿ ಸಮಾಜ,

ಸಾಮಾಜಿಕವಾಗಿ ಶ್ರೇಣೀಕರಣ ಸೃಷ್ಟಿಸಿ ಸಾಂಸ್ಕೃತಿಕವಾಗಿ ಮತ್ತು ಪ್ರಾದೇಶಿಕವಾಗಿ ಪ್ರಬಲ ವರ್ಗದವರಿಗೆ ವರವಾಗಿ ದುರ್ಬಲ ವರ್ಗದವರಿಗೆ ಶಾಪವಾಗಿ ಪರಿಣಮಿಸಿದೆ. ಆದರೆ ದುರ್ಬಲ ವರ್ಗಗಳು ಎಂದು ಹೇಳುವ ತಳ ಸಮುದಾಯಗಳು ಸಾಂಸ್ಕೃತಿಕವಾಗಿ ಪ್ರಬಲರಾಗಿದ್ದರೂ ಆರ್ಥಿಕ ಕಾರಣವನ್ನು ಮಾನದಂಡವಾಗಿ ಇಟ್ಟುಕೊಂಡು ಹಿಂದುಳಿದವರು ಎಂದು ತಪ್ಪಾಗಿ ಅರ್ಥೈಸುವ ಹುನ್ನಾರ ಅನಾದಿಕಾಲದಿಂದಲೂ ನಡೆಯುತ್ತಿದೆ.

ಬುಡಕಟ್ಟುಗಳು ತಮ್ಮದೇ ಆದ ಕುಲಕಸುಬು, ಸಂಸ್ಕೃತಿ, ಭಾಷೆ ಮತ್ತು ಪ್ರತ್ಯೇಕ, ನೆಲೆಯಲ್ಲಿ ಬದುಕುತ್ತಿದ್ದವು. ಈ ರಾಜಕೀಯ ವೈರುಧ್ಯಗಳು ಮತ್ತು ಪ್ರಾಕೃತಿಕ ವೈಪರೀತ್ಯಗಳಿಂದ ಇವರ ಜೀವನ ವಿಧಾನ ಪಾರಂಪರಿಕ ಜ್ಞಾನ, ಕಸುಬುಗಳು, ಅವನತಿಯ ಅಂಚಿಗೆ ತಳಲ್ಪಡುತ್ತಿದೆ. ಜಾಗತೀಕರಣದಂತಹ, ಸ್ಪರ್ಧಾಜಗತ್ತಿನಲ್ಲಿ ಮುಖ್ಯಾವಾಹಿನಿಯ ಸಮಾಜದ ದೃಷ್ಟಿಯಲ್ಲಿನ ಅಭಿವೃದ್ಧಿಯ ಕಡೆ ವಾಲಬೇಕೆ? ಅಥವಾ ಹಿರಿಯ ಹಾಕಿಕೊಟ್ಟ ತನ್ನ ನೆಲದ ಸಂಸ್ಕೃತಿಯ ಕಡೆ ತಿರುಗಬೇಕೇ ಎಂಬ ದ್ವಂದ್ವದ ಬದುಕಿನಲ್ಲಿ ಸಿಲುಕಿ ದೃಢನಿರ್ಧಾರ ಕೈಗೊಳ್ಳದೇ ತ್ರಿಶಂಕು ಸ್ಥಿತಿಯಲ್ಲಿದ್ದಾರೆ. ತಳ ಸಮುದಾಯಗಳು ತನ್ನ ನೆಲೆ ಸಂಸ್ಕೃತಿನ್ನು ಬಿಟ್ಟುಬಂದರೆ ಅನೇಕ ತಲೆಮಾರುಗಳ ಪಾರಂಪರಿಕ ಜ್ಞಾನ ನಾಶವಾಗುತ್ತದೆ. ಇಲ್ಲವೆಂದರೆ ಮೂಲ ನೆಲೆಗೆ ತೆರಳಿದರೆ ಈ ಸ್ಪರ್ಧಾತ್ಮಕ ದುರಾಸೆಯ ಜಗತ್ತು ಅಲ್ಲಿಯೂ ಅವರನ್ನು ನೆಮ್ಮದಿಯಿಂದ ಬದುಕಲು ಬಿಡದು. ಇಷ್ಟೆಲ್ಲಾ ವೈರುಧ್ಯಗಳ ನಡುವೆ ಬುಡಕಟ್ಟುಗಳು(ತಳ ಸಮುದಾಯಗಳು) ಆಚರಣೆ ಮತ್ತು ಸಂಪ್ರದಾಯಗಳ ರೂಪದಲ್ಲಿ ಕೆಲವೊಂದಿಷ್ಟು ಜ್ಞಾನವನ್ನು ಮುಂದಿನ ತಲೆಮಾರಿಗೆ ಹಸ್ತಾಂತರಿಸುತ್ತಿದ್ದಾರೆ. ಆದರೆ ಶಿಕ್ಷಣ ಪಡೆದಿದ್ದೇವೆ ಎಂಬ ಅಹಂನಲ್ಲಿ ಈ ವಿದ್ಯಾವಂತ ವರ್ಗ, ಅವರ ಆಚರಣೆ ಮತ್ತು ಸಂಪ್ರದಾಯದ ಹಿಂದಿರುವ ವೈಜ್ಞಾನಿಕತೆಯನ್ನು ಅರಿಯದೇ ಇವರ ಆಚರಣೆ ಸಂಪ್ರದಾಯ ಅಥವಾ ಸಂಸ್ಕೃತಿ ಮೂಢನಂಬಿಕೆ ಅಥವಾ ಮೌಢ್ಯತೆಯಿಂದ ಕೂಡಿರುವುದು ಎಂದು ಅಲ್ಲಗಳೆಯುತ್ತಿದ್ದಾರೆ. ಮುಖ್ಯವಾಹಿನಿಯ ಸಮಾಜ ಏನೆಲ್ಲಾ ಸಂಚುಗಳನ್ನು ನಡೆಸಿದರೂ ಕೆಲವೊಂದು ಅರಣ್ಯವಾಸಿ ಸಮುದಾಯಗಳು ಮತ್ತು ಪಶುಪಾಲನೆ ಸಮುದಾಯಗಳು ತಮ್ಮ ನೆಲೆ ಮತ್ತು ಜ್ಞಾನವನ್ನು ಬಿಟ್ಟುಕೊಡದೆ ತನ್ನತನವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿವೆ. ಅಂತಹ ಸಮುದಾಯಗಳಲ್ಲಿ ಕಾಡುಗೊಲ್ಲ ಸಮುದಾಯವು ಒಂದಾಗಿದೆ. ಕಾಡುಗೊಲ್ಲ ಸಮುದಾಯವು ಪಶುಪಾಲನೆಯ ಆಧಾರಿತ ಜೀವನವಿಧಾನವನ್ನು ಅಳವಡಿಸಿಕೊಂಡು ಪಶುಪಾಲನೆಯನ್ನು ಕುಲಕಸುಬು ಎಂದು ನಂಬಿದ್ದಾರೆ ಮತ್ತು ಹಟ್ಟಿರೂಪದ ಸಂಸ್ಕೃತಿಯ ಪ್ರತ್ಯೇಕ ನೆಲೆಯನ್ನು ಹೊಂದಿದ್ದಾರೆ. ಕುಟುಂಬದ ಯಜಮಾನಿಕೆ, ಲಿಂಗಾನುಪಾತದಲ್ಲಿಯೂ ಹಿಂದಿಗಿಂತಲೂ ಹೆಚ್ಚು ಬದಲಾವಣೆ ಹೊಂದುತ್ತಿದೆ. ಕಾಡುಗೊಲ್ಲ ಸಮುದಾಯದ ಜೊತೆಜೊತೆಗೆ ಸಮಾನಾಂತರವಾಗಿರುವ ಮ್ಯಾಸಬೇಡ ಸಮುದಾಯವು ಸ್ಥಿತ್ಯಂತರ ಹೊಂದುತ್ತಿದೆ. ಇಂತಹ ಕಾಡುಗೊಲ್ಲ ಸಮುದಾಯದ ಸ್ಥಿತಿಯನ್ನು ಎರಡು ಮತ್ತು ಮೂರು ಅಧ್ಯಾಯಗಳಲ್ಲಿ ಚಾರಿತ್ರಿಕ ಹನ್ನೆಲೆ ಮತ್ತು ಸಾಮಾಜಿಕ ಬದುಕು ಸಂಪ್ರದಾಯ ಮತ್ತು ಆಚರಣೆ ನಂಬಿಕೆ ನಿಷೇಧ, ಬೇಟೆ ಮತ್ತು ಕುಲಕಸುಬು ಇತ್ಯಾದಿಗಳ ಕುರಿತು ವಿವರಣಾತ್ಮಕವಾಗಿ ತಿಳಿಸಲಾಗಿದ್ದು, ಪ್ರಸ್ತುತ ಅಧ್ಯಾಯವು ಕಾಡುಗೊಲ್ಲ ಸಮುದಾಯ ಸಮೀಕ್ಷೆಯಿಂದ ಲಭ್ಯವಾದ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸಿರುವ ಮಾಹಿತಿಯನ್ನು ಒದಗಿಸುತ್ತದೆ.

ಯಾವುದೇ ಸಮಾಜವನ್ನು ಆರ್ಥಿಕವಾಗಿ ಸಮೀಕ್ಷೆಗೊಳಪಡಿಸಿದಾಗ ಅವರ ಸಾಮಾಜಿಕ ಜೀವನದ ಪಾರಂಪರಿಕತೆಗಿಂತ ಆರ್ಥಿಕವಾಗಿ ಅಂದರೆ ಅವರ ಜೀವನೋಪಾಯಕ್ಕಾಗಿ ಅಳವಡಿಸಿಕೊಂಡಿರುವ ಕಸುಬುಗಳು ಹಾಗೂ ಅವರ ಉತ್ಪಾದನಾಕ್ರಮಗಳ ಬಗ್ಗೆ ಮುಖ್ಯವಾಗಿ ಅವಲೋಕಿಸಬೇಕಾಗುತ್ತದೆ. ಕಾರಣ ಜೀವನಕ್ರಮ, ಉತ್ಪಾದನಾ ದಕ್ಷತೆ ಹಾಗೂ ಇವುಗಳ ಸ್ಥಿತ್ಯಂತರಗಳ ಬಗ್ಗೆ ಕುರಿತು ನೋಡಬೇಕಾಗುತ್ತದೆ. ಇದೇ ರೀತಿಯಾಗಿ ಆಧುನಿಕತೆ ಮತ್ತು ಜಾಗತೀಕರಣ ಕಾಡುಗೊಲ್ಲರ ಆರ್ಥಿಕತೆಯ ಮೇಲೆ ಯಾವ ರೀತಿಯ ಪರಿಣಾಮ ಬೀರಿದೆ ಮತ್ತು ಇಂತಹ ಪರಿಣಾಮಗಳಿಂದ ಅವರ ಆರ್ಥಿಕತೆ ಹೇಗೆ ಸ್ಥಿತ್ಯಂತರಗಳನ್ನು ಕಂಡಿದೆ, ಇದಕ್ಕೆ ಕಾರಣವಾದ ಅಂಶಗಳ ಬಗ್ಗೆ ಬೆಳಕು ಚೆಲ್ಲಬೇಕಾಗುತ್ತದೆ. ಕಾಡುಗೊಲ್ಲರ ಮೂಲಕಸುಬಾದ ಪಶುಪಾಲನೆಯನ್ನು ನಾವು ನೋಡಿದಾಗ ಈ ಹಿಂದೆ ಪಶಪಾಲಕರಾದ ಕಾಡುಗೊಲ್ಲರು ಹಾಗೂ ಮ್ಯಾಸಬೇಡರು ಮತ್ತು ಇನ್ನಿತರ ಬುಡಕಟ್ಟು ವರ್ಗದವರು ಮಾತ್ರ ಪಶುಪಾಲನೆ ಮಾಡುತ್ತಿದ್ದು, ಇದಕ್ಕೆ ಸಂಬಂಧಿಸಿದ ಉಪ ಉತ್ಪನ್ನಗಳನ್ನು ಇವರು ಮಾತ್ರ ಉತ್ಪಾದಿಸುತ್ತಿದ್ದರು. ಆದರೆ ಇತ್ತೀಚೆಗೆ ಉತ್ಪಾದನಾ ವಲಯಗಳಲ್ಲಿ ಈ ಜಾಗತೀಕರಣದಿಂದ ತೀವ್ರತರವಾದ ಸ್ಪರ್ಧೆ ಏರ್ಪಟ್ಟು ಹಾಲಿನ ಉತ್ಪನ್ನಗಳಿಗೆ ಪಾರ್ಲರ್‌ಗಳಲ್ಲಿ ಬೇಡಿಕೆ ಹೆಚ್ಚಾಗುತ್ತಿದೆ. ಆದರೆ ಪಶುಪಾಲನೆ ಹಾಗೂ ಅದರ ಉತ್ಪನ್ನಗಳಿಗೆ ಬೇಡಿಕೆ ಇಳಿಮುಖವಾಗುತ್ತಿರುವುದರಿಂದ ಈ ವಸ್ತುಗಳಿಗೆ ಬೇಡಿಕೆ ಸ್ಥಿತಿಸ್ಥಾಪಕತ್ವ ತಂಬಾ ಕಡಿಮೆಯಾಗಿದೆ. ಕಾಡುಗೊಲ್ಲರು ಉತ್ಪಾದಿಸುವಂತಹ ಹಾಲಿನ ಉತ್ಪನ್ನಗಳಿಗೆ ಬೇಡಿಕೆಯ ಕೊರತೆ ಉಂಟಾಗಿರುವುದರಿಂದ ಅವರು ಆ ಮೂಲಕಸುಬುಗಳಿಂದ ಹೊರಬರುತ್ತಿರುವುದನ್ನು ಕಾಣುತ್ತಿದ್ದೇವೆ. ಇಂದಿನ ಜಾಗತೀಕರಣದ ಸನ್ನಿವೇಶದಲ್ಲಿ ಇವರ ಆರ್ಥಿಕ ಬದುಕು ಸ್ಪರ್ಧಾತ್ಮಕ ಜಗತ್ತಿನ ಬೇಡಿಕೆಗಳಿಗೆ ಹೊಂದಿಕೊಳ್ಳಲಾಗದೆ ಸಮುದಾಯದವರು ಉತ್ಪಾದಿಸುವ ಉತ್ಪನ್ನಗಳು ಹಿಂದಿನ ಸಂಪ್ರದಾಯಬದ್ಧವಾದ ಪಾರಂಪರಿಕ ರೀತಿಯ ತಂತ್ರಜ್ಞಾನಗಳಾಗಿರುವುದರಿಂದ ಇಂದಿನ ಆಧುನಿಕ ಜಗತ್ತಿನ ಬೇಡಿಕೆಗಳನ್ನು ಪೂರೈಸುವುದು ಇವರಿಗೆ ಕಷ್ಟದಾಯಕವಾಗಿರುತ್ತದೆ. ಕಾರಣ ಮುಂದುವರಿದ ತಂತ್ರಜ್ಞಾನದೊಂದಿಗೆ ದೇಶೀಯ ಪಾರಂಪರಿಕ ಜ್ಞಾನ ತನ್ನ ನೆಲೆಯನ್ನು ಕಂಡುಕೊಳ್ಳುವುದು ತುಂಬಾ ಕಷ್ಟ ಹಾಗೂ ಸಮುದಾಯಕ್ಕೆ ನಿಲುಕದ ಆರ್ಥಿಕ ವಿದ್ಯಮಾನವಾಗಿದೆ.

ಕಾಡುಗೊಲ್ಲ ಸಮುದಾಯ ಪಶುಪಾಲನೆಯನ್ನು ತನ್ನ ಕುಲಕಸುಬು ಎಂದು ಆರಾಧಿಸಿಕೊಂಡು ಬಂದಿದೆ. ಕಾಡುಗೊಲ್ಲರ ಮುಖ್ಯ ವೃತ್ತಿ ಗೋವು/ಪಶು ಸಾಕಾಣಿಕೆ ಎಂದು ಮಹಾಭಾರತ ಕಾಲದಿಂದಲೂ ತಿಳಿದುಬರುತ್ತದೆ. ಪ್ರಾಚೀನ ಕಾಲದಲ್ಲಿ ಗೋವು ಅಥವಾ ಪಶುಸಂಪತ್ತನ್ನು ಹೆಚ್ಚು ಹೊಂದಿದವನು ಸಿರಿವಂತನೆಂದು ಗುರುತಿಸಲಾಗುತ್ತಿತ್ತು. ಕಾರಣ ಗೋವುಗಳ ಉತ್ಪನ್ನವು ಸಾರ್ವಕಾಲಿಕ ಮತ್ತು ಯಾವುದು ವ್ಯರ್ಥವಲ್ಲ. ಇವುಗಳನ್ನು ದೇವರ ಹೆಸರಿನಲ್ಲಿ ಕಾಯುತ್ತಾ ಅವುಗಳ ಉತ್ಪನ್ನಗಳಿಂದ ಜೀವನ ನಿರ್ವಹಿಸುತ್ತಿದ್ದರು. ಕ್ರಮೇಣ ದನಕರುಗಳ ಪ್ರಮಾಣ ಮತ್ತು ಸಾಕಾಣಿಕೆ ಇಳಿಮುಖವಾಗಿ ಪಶುಸಂಪತ್ತು ಕಡಿಮೆಯಾಗತೊಡಗಿತು. ಇದಕ್ಕೆ ಪರ್ಯಾಯವೆಂಬಂತೆ ಕಡಿಮೆ ಹುಲ್ಲುಗಾವಲುಗಳ ಸಂಖ್ಯೆ ಮತ್ತು ಹೆಚ್ಚು ಆರ್ಥಿಕತೆ ಹಾಗೂ ಆಹಾರಕ್ಕೂ ನೆರವಾಗಬಲ್ಲ ಕುರಿಸಾಕಾಣಿಕೆ ಅಸ್ತಿತ್ವಕ್ಕೆ

ಬಂದಿತು. ಇದು ಇಂದಿಗೂ ಲಾಭದಾಯಕ ವೃತ್ತಿಯಾಗಿದೆ. ಕುರಿ ತಳಿಯ ಸಮೃದ್ಧಿಯಿಂದ ಉಣ್ಣೆ, ಗೊಬ್ಬರ, ಮಾಂಸದ ಬೇಡಿಕೆ ಅಧಿಕವಾಗಿದ್ದು ಕುರಿ ಸಾಕಾಣಿಕೆ ಹೆಚ್ಚು ಲಾಭಯುತ ವೃತ್ತಿಯಾಗಿದೆ.

ಚಿತ್ರದುರ್ಗ ಜಿಲ್ಲೆಯ ಆರು ತಾಲೂಕುಗಳಲ್ಲಿ ಕಾಡುಗೊಲ್ಲ ಸಮುದಾಯದವರು ಹೆಚ್ಚಾಗಿ ಕುರಿ ಸಾಕಾಣಿಕೆ, ಮೇಕೆಗಳ ಸಾಕಾಣಿಕೆ, ಸ್ವಲ್ಪ ಪ್ರಮಾಣದಲ್ಲಿ ಆಕಳು, ಎಮ್ಮೆ ಮತ್ತು ಎತ್ತುಗಳನ್ನು ಹೊಂದಿರುತ್ತಾರೆ. ೧೪೫೧ ಕುಟುಂಬಗಳನ್ನು ಸಮೀಕ್ಷೆ ಮಾಡಿದಾಗ ೧೫೪೮೧ ಕುರಿಗಳು ಇದ್ದು, ಅತಿ ಹೆಚ್ಚು ಪಶುಸಂಪತ್ತಿನಲ್ಲಿ ಕುರಿಗಳ ಪಾಲು ಅಗ್ರಗಣ್ಯವಾಗಿದೆ. ಕುರಿಗಳ ಜೊತೆಜೊತೆಯಲ್ಲಿ ರೋಗ ಬಂದರೂ ಹೆಚ್ಚು ಕಾಲ ಸುಧಾರಿಸಿಕೊಳ್ಳುವ ಮೇಕೆಗಳನ್ನು ಸಾಕಲಾಗುತ್ತದೆ. ಮೇಕೆಗಳನ್ನು ಜೆನ್ನಿಗೆ ಬಿಡುವುದು, ಓತಗಳನ್ನು ದೇವರಿಗೆ ಹರಕೆ ಬಿಡುವುದು ರೂಢಿಯಲ್ಲಿದೆ. ಈ ಸಮುದಾಯದಲ್ಲಿ ಕೆಲವು ಹಣವಂತರು ನೀರಾವರಿ ಸೌಲಭ್ಯ ಹೊಂದಿರುವ ಕೃಷಿಕರು ಹೆಚ್ಚು ಮೇವಿನ ಅವಶ್ಯಕತೆ ಇರುವ ಎಮ್ಮೆಗಳನ್ನು ಸಾಕುತ್ತಿದ್ದಾರೆ. ಆಧುನಿಕ ತಳಿಯ ಹಸುಗಳು ಮತ್ತು ಎಮ್ಮೆಗಳ ಸಾಕಾಣಿಕೆ ಆಧುನಿಕ ಸಂದರ್ಭದಲ್ಲಿ ಆರ್ಥಿಕ ಮೂಲದ ವೃತ್ತಿಗಳಾಗಿವೆ. ಈ ಅಂಶಗಳನ್ನು ಕಂಡುಕೊಂಡಂತಹ ಕಾಡುಗೊಲ್ಲ ಸಮುದಾಯದವರು ತಮ್ಮ ಜೀವನ ನಿರ್ವಹಣೆಗೆಂದು ಹಸುಗಳು ಹಾಗೂ ಎಮ್ಮೆಗಳನ್ನು ಸಾಕಿದ್ದಾರೆ. ಇತ್ತೀಚಿನ ದಿನಗಳಲ್ಲಿ ಕೋಳಿಗಳನ್ನೂ ಸಹ ಫಾರಂಗಳಲ್ಲಿ ಮಾಂಸಾಹಾರಕ್ಕಾಗಿ ಬೆಳೆಸುತ್ತಿರವ ಕಾಡುಗೊಲ್ಲರನ್ನು ಸಹ ಕಾಣಬಹುದಾಗಿದೆ(ಆದರೆ ಕಾಡುಗೊಲ್ಲರಲ್ಲಿ ಪೋಲನೇರ ಗೊಲ್ಲರು ಕೋಳಿ ತಿನ್ನುವ ಸಂಖ್ಯೆ ತೀರಾ ಕಡಿಮೆ, ಕಾರಣ ಕೂಡ್ಲಹಳ್ಳಿ ಪಾಥೇದೇವರ ಒಕ್ಕಲುಗಳು). ಇಂದಿನ ಜಾಗತೀಕರಣ ಯುಗದಲ್ಲಿ ಕಾಡುಗೊಲ್ಲರು ಪಶುಸಂಪತ್ತನ್ನು ಮರೆತು ಆಧುನಿಕ ವ್ಯವಸಾಯ ಪದ್ಧತಿಯ ಕಡೆಗೆ ತಮ್ಮ ನಿಲುವನ್ನು ಬದಲಾಯಿಕೊಳ್ಳುತ್ತಿದ್ದಾರೆ. ಇಷ್ಟೆಲ್ಲಾ ಸ್ಥಿತ್ಯಂತರಕ್ಕೆ ಕಾರಣ ಜಾಗತೀಕರಣದ ಕರಿನೆರಳು ಕಾಡುಗೊಲ್ಲರ ಆರ್ಥಿಕತೆಯ ಮೇಲೆ ಬಿದ್ದಿರುವುದು.

ಆಧುನಿಕ ಕೃಷಿಗೆ ಕೆಲವು ಕಾಡುಗೊಲ್ಲರ ಸಮುದಾಯಗಳು ಇತ್ತೀಚೆಗೆ ಹೊಂದಿಕೊಳ್ಳುತ್ತಿದ್ದರೂ ಸಹ ಇವರಿಗೆ ಇರುವ ಕೃಷಿಭೂಮಿ ಛಿದ್ರ ಹಿಡುವಳಿಗಳಾಗಿರುವುದರಿಂದ ಯಾವುದೇ ಆಧುನಿಕ ಉತ್ಪಾದನಾಕ್ರಮವನ್ನು ಅನುಸರಿಸಿದರೂ ಬಂದಂತಹ ಉತ್ಪಾದನೆಗಿಂತ ಉತ್ಪಾದನಾ ವೆಚ್ಚವು ಅಧಿಕವಾಗಿ ಆಧುನಿಕ ಕೃಷಿಯಿಂದ ಹೊರಬರುತ್ತಿರುವುದು ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿದೆ. ಕಾಡುಗೊಲ್ಲರ ಭೂಹಿಡುವಳಿಗಳನ್ನು ಸಮೀಕ್ಷೆಯಿಂದ ತಿಳಿದುಕೊಂಡಾಗ ಇತರೇ ಮುಂದುವರಿದ ಸಮುದಾಯಗಳಿಗಿಂತ ತೀರಾ ಕಡಿಮೆ ಪ್ರಮಾಣದಲ್ಲಿ ಕೃಷಿಭೂಮಿ ಹೊಂದಿರುವುದು ಇದಕ್ಕೆ ಕಾರಣವಾಗಿದೆ. ಅದರಲ್ಲೂ ೧೪೫೧ ಕುಟುಂಬಗಳಲ್ಲಿ ೭೫೧೪.೯ ಎಕರೆ ಕೃಷಿಭೂಮಿ ಒಡೆತನ ಹೊಂದಿರುತ್ತಾರೆ. ಕಾಡುಗೊಲ್ಲರ ಕೃಷಿಭೂಮಿಗಳು ಚಿಕ್ಕ ಹಿಡುವಳಿಗಾಗಿರುವುದರಿಂದ ಅವುಗಳಲ್ಲಿ ಅಭಿವೃದ್ಧಿಯನ್ನು ಮಾಡಲಾಗದೇ ಕೈಗೆ ಸಿಕ್ಕಷ್ಟು ಬಿಡಿಗಾಸಿಗೆ ಬಂಡವಾಳಶಾಹಿಗಳಿಗೆ ಮಾರಾಟ ಮಾಡುತ್ತಿದ್ದಾರೆ. ಚಿತ್ರದುರ್ಗ ಜಿಲ್ಲೆಯು ಹಿಂದುಳಿದ ಮತ್ತು ಅತಿ ಕಡಿಮೆ ಮಳೆ ಬೀಳುವ ಪ್ರದೇಶ ಎಂದು ಪರಿಗಣಿತವಾಗಿದೆ. ಇಲ್ಲಿ ಭೌಗೋಳಿಕ ಲಕ್ಷಣಗಳಲ್ಲಿ ಕುರುಚಲು ಕಾಡು, ಅತಿಯಾದ ತಾಪಮಾನ, ಅಂತರ್ಜಲ ಮಟ್ಟದ ಕುಸಿತ ಕಾರಣ, ಮಳೆಯ ಪ್ರಮಾಣ ಕಡಿಮೆ ಇರುವುದು ಮತ್ತು ನದಿಗಳ ಬತ್ತುವಿಕೆ ಈ ಎಲ್ಲಾ

ಲಕ್ಷಣಗಳು ಚಿತ್ರದುರ್ಗವು ಆರ್ಥಿಕವಾಗಿ ಹಿಂದುಳಿಯಲು ಕಾರಣವಾಗಿದೆ. ಇಲ್ಲಿಯ ಭೂಮಿಯು ಹೆಚ್ಚು ನೀರನ್ನು ಹಿಡಿದಿಟ್ಟುಕೊಳ್ಳುವುದು ಮತ್ತು ಕಡಿಮೆ ಮಳೆಯಿಂದ ಸಂತೃಪ್ತಿಯಾಗದೇ ಬಿರುಕು ಬಿಟ್ಟುಕೊಂಡಿರುತ್ತದೆ. ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಕಾಡುಗೊಲ್ಲರು ೭೫೧೩ ಎಕರೆ ಭೂಮಿಯಲ್ಲಿ ಕೃಷಿ ಮಾಡುತ್ತಿದ್ದಾರೆ. ಇದನ್ನು ೧೩೯೧ ಕುಟುಂಬಗಳು ಹಂಚಿಕೊಂಡಿವೆ. ಇದಕ್ಕಾಗಿಯೇ ಇವರು ಬದಲಿ ಕಸುಬಾದ ಕುರಿ ಸಾಕಾಣಿಕೆಯಲ್ಲಿ ತೊಡಗಿರುವುದು.

ಜಾಗತೀಕರಣ ಪ್ರಕ್ರಿಯೆ ಅತಿ ಹೆಚ್ಚು ಪ್ರಭಾವ ಬೀರಿರುವುದು ಆರ್ಥಿಕತೆಯ ಮೇಲೆ ಜಾಗತೀಕರಣದ ಪರಿಣಾಮವಾಗಿ ವಿಶ್ವದ ಎಮ್.ಎನ್.ಸಿ. ಕಂಪನಿಗಳಿಗೆ ಭಾರತವು ಮಾರುಕಟ್ಟೆ ಮತ್ತು ಉತ್ಪಾದಕತೆಯ ಮೂಲವಾಗಿ ರೂಪಾಂತರವಾಯಿತು. ಹಿಂದುಳಿದ ಹಾಗೂ ಮುಂದುವರಿಯುತ್ತಿರುವ ದೇಶಗಳಿಗೆ ಜಾಗತೀಕರಣವು ಬಿಸಿ ತುಪ್ಪದಂತಾಗಿದ್ದು, ಇದನ್ನು ಉಗುಳುವಂತಿಲ್ಲ ಹಾಗೂ ಹಾಗೆಯೇ ಇಟ್ಟುಕೊಳ್ಳುವಂತಿಲ್ಲ ಎಂಬ ಸಂಕಟದ ಪರಿಸ್ಥಿತಿಯಲ್ಲಿ ಈ ದೇಶಗಳು ಇವೆ. ಮುಂದುವರಿದ ರಾಷ್ಟ್ರಗಳು ಈ ದೇಶಗಳನ್ನು ತಮ್ಮ ಮಾರುಕಟ್ಟೆಗಳಾಗಿ ಬಳಸಿಕೊಳ್ಳುತ್ತಿದ್ದು ಬರೀ ಲಾಭದ ಉದ್ದೇಶದಿಂದ ಅಷ್ಟೆ. ಈ ಜಾಗತೀಕರಣವನ್ನು ಬಡ ರಾಷ್ಟ್ರಗಳ ಮೇಲೆ ಒತ್ತಾಯಪೂರ್ವಕವಾಗಿ ಹೇರಲಾಯಿತು. ಜಾಗತೀಕರಣದಿಂದ ಆರ್ಥಿಕತೆಯ ಮೇಲೆ ಅನೇಕ ಬದಲಾವಣೆಗಳು ಉಂಟಾಗುತ್ತವೆ. ಈ ಬದಲಾವಣೆಯ ಪರಿಣಾಮ ಉತ್ತಮವಾಗಿಬಹುದು ಅಥವಾ ಕೆಟ್ಟದಾಗಿರಬಹುದು. ಉತ್ತಮ ಎನ್ನುವುದಕ್ಕಿಂತ ಕೆಟ್ಟ ಪರಿಣಾಮಗಳೇ ಈ ಬುಡಕಟ್ಟು ಸಮುದಾಯಗಳ ಮೇಲೆ ಹೆಚ್ಚು ಪರಿಣಾಮ ಬೀರಿವೆ. ತಾವು ಬೆಳೆದ ವಸ್ತು ಹಾಗೂ ಉತ್ಪಾದನೆಗಳನ್ನು ಮಾರಾಟ ಮಾಡಿ ನಂತರ ಅವುಗಳನ್ನು ಕೊಳ್ಳಬೇಕಾದರೆ ಅತಿ ಹೆಚ್ಚು ಮೌಲ್ಯ ಕೊಟ್ಟು ಖರೀದಿಸಬೇಕಾಗುತ್ತದೆ. ಜಾಗತೀಕರಣದಿಂದ ಪಾರಂಪರಿಕ ಮತ್ತು ಜೈವಿಕ ಕೃಷಿ ಕಣ್ಮರೆಯಾಗುತ್ತಿರುವುದನ್ನು ನೋಡುತ್ತೇವೆ. ವಿಪರೀತ ರಸಗೊಬ್ಬರದ ಬಳಕೆ ಹಾಗೂ ಕೀಟನಾಶಕದ ಬಳಕೆಯಿಂದ ಆಹಾರೋತ್ಪಾದನೆ ವಿಷವಾಗುತ್ತಿದೆ. ಇಂತಹ ಆಹಾರವನ್ನು ಸೇವಿಸುವವರು ತಮ್ಮ ಆರೋಗ್ಯವನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ಈ ಜಾಗತೀಕರದಿಂದ ಆರ್ಥಿಕತೆಯ ಮೇಲಾಗುವ ಪರಿಣಾಮಗಳು ಧನಾತ್ಮಕ ಮತ್ತು ಋಣಾತ್ಮಕ ಎರಡು ಅಂಶಗಳನ್ನು ಒಳಗೊಂಡಿದೆ.

**ಧನಾತ್ಮಕ ಅಂಶಗಳು**

೧. ಆರ್ಥಿಕತೆಯ ಉತ್ಪಾದನಾ ವಲಯದಲ್ಲಿ ಸ್ಪರ್ಧೆ ಏರ್ಪಡುವುದರಿಂದ ಗ್ರಾಹಕ ಕೇಂದ್ರಿತ ಆರ್ಥಿಕತೆಯನ್ನು ಕಾಣಬಹುದು. ಗ್ರಾಹಕರ ಬೇಡಿಕೆಗನುಗುಣವಾಗಿ ಉತ್ಪಾದನಾ ದಕ್ಷತೆಯನ್ನು ಹೆಚ್ಚಿಸಬಹುದು.

೨. ಉತ್ಪಾದನಾ ವಲಯದಲ್ಲಿ ಗಣನೀಯ ಏರಿಕೆಯಿಂದ ಜನಸಂಖ್ಯೆ ಅನುಗುಣವಾದ ಉತ್ಪಾದನೆಯನ್ನು ಕಾಣಬಹುದು ಮತ್ತು ಪೂರೈಕೆಗನುಗುಣವಾಗಿ ಬೇಡಿಕೆಯನ್ನು ಹೆಚ್ಚಿಸಲು ಅವಕಾಶಗಳಿರುತ್ತವೆ.

೩. ಅಂತಾರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ಬಂಡವಾಳ ಹೂಡಿಕೆ ಮಾಡುವುದರಿಂದ ವಿದೇಶಿ ವಿನಿಮಯದಲ್ಲಿ ಏರಿಕೆ ಉಂಟಾಗುವುದು. ಇದರಿಂದ ಸ್ವದೇಶದಲ್ಲಿ ಉದ್ಯೋಗಾವಕಾಶಗಳು ಹೆಚ್ಚಾಗಿ ಕೊಂಡುಕೊಳ್ಳುವ ಶಕ್ತಿ ವೃದ್ಧಿಸುವುದು.

೪. ಹಣದುಬ್ಬರದಿಂದಾಗಿ ಆರ್ಥಿಕ ಹಿಂಜರಿತ ಕಡಿಮೆಯಾಗುವುದು ಹಾಗೂ ವಸ್ತುಗಳ ಪೂರೈಕೆ ಏರುತ್ತದೆ.

೫. ವಿದೇಶಿ ಕಂಪನಿಗಳ ಉತ್ಪನ್ನಗಳು ಮಾರುಕಟ್ಟೆಯನ್ನು ಪ್ರವೇಶಿಸುವುದರಿಂದ ಗ್ರಾಹಕರಿಗೆ ಆಯ್ಕೆಯ ಸಮಸ್ಯೆ ಕಂಡುಬರದೆ ವಸ್ತುಗಳ ಖರೀದಿಯಲ್ಲಿ ಆಯ್ಕೆಗಳು ಕಂಡುಬರುತ್ತವೆ.

೬. ಜಾಗತೀಕರಣದಿಂದ ಜನರು ಸಾಂಪ್ರದಾಯಿಕ ಜೀವನವಿಧಾನದಿಂದ ಹೊರಬಂದು ಆಧುನಿಕ ಐಶಾರಾಮಿ ಬದುಕಿಗೆ ಒಗ್ಗಿಕೊಂಡು ತಮ್ಮ ಜೀವನವಿಧಾನವನ್ನು ಬದಲಾಯಿಸಿಕೊಳ್ಳುವರು. ಇದರಿಂದ ಬಂಡವಾಳ ಸಂಚಯನ ಹೆಚ್ಚಾಗುವುದು.

೭. ಈಗಾಗಲೇ ಮಾರುಕಟ್ಟೆಯಲ್ಲಿ ಆಧಿಪತ್ಯ ಸ್ಥಾಪಿಸಿ ಏಕಚಕ್ರಾಧಿಪತಿಯಾಗಿರುವ ಕಂಪನಿಗಳಿಗೆ ಪ್ರತಿಸ್ಪರ್ಧಿ ಕಂಪನಿಗಳು ಸೃಷ್ಟಿಗಾಗಿ ಬಹುತ್ವದ ಮಾದರಿಯಲ್ಲಿ ಸ್ಪರ್ಧೆ ಏರ್ಪಾಡಾಗುತ್ತದೆ.

೮. ಜಾಗತೀಕರಣದಿಂದ ಉದ್ಯೋಗಗಳು ಸೃಷ್ಟಿಯಾಗುತ್ತವೆ. ಹಾಗೂ ಅಭಿವೃದ್ಧಿ ಹೊಂದಿದ ತಂತ್ರಜ್ಞಾನ ಉತ್ಪಾದನೆಯಲ್ಲಿ ತೊಡಗುವುದು.

೯. ಸಾಮಾಜಿಕ ಸ್ತರವಿನ್ಯಾಸದಲ್ಲಿನ ಏಣಿ ಶ್ರೇಣೀಕರಣ ಮತ್ತು ತಾರತಮ್ಯಗಳು ಕಡಿಮೆಯಾಗುತ್ತವೆ.

೧೦. ಮೂಲಭೂತ ಸೌಕರ್ಯಗಳ ಸೌಲಭ್ಯದಲ್ಲಿ ಏರಿಕೆ. ರಸ್ತೆ, ಸಾರಿಗೆ ಸಂಪರ್ಕದ ವೃದ್ಧಿ.

೧೧. ಜಾಗತಿಕ ಮಟ್ಟದಲ್ಲಿ ಭಾರತದ ಆರ್ಥಿಕತೆ, ಅಭಿವೃದ್ಧಿಯೆಡೆಗೆ ಸಾಗುವುದು ಹಾಗೂ ಭಾರತದಲ್ಲಿ ಉತ್ಪಾದನೆಯಾದ ವಸ್ತುಗಳಿಗೆ ಜಾಗತಿಕ ಮಾರುಕಟ್ಟೆಗೆ ಪ್ರವೇಶಾವಕಾಶ ದೊರೆಯುತ್ತದೆ.

೧೨. ದುಡಿಯುವ ವ್ಯಕ್ತಿಗಳ ತಲಾದಾಯ ಹೆಚ್ಚಾಗಿ ಕೊಂಡುಕೊಳ್ಳುವ ಶಕ್ತಿ ಹೆಚ್ಚಾಗುವುದರ ಮೂಲಕ ರಾಷ್ಟ್ರೀಯ ಆದಾಯ ಹೆಚ್ಚಳವಾಗುತ್ತದೆ.

ಜಾಗತೀಕರಣದಿಂದ ಈ ಮೇಲ್ಕಂಡ ಎಲ್ಲಾ ಧನಾತ್ಮಕ ಅಂಶಗಳ ಹೊರತಾಗಿಯೂ ಕೆಲವೊಂದು ಋಣಾತ್ಮಕ ಪರಿಣಾಮ ಬೀರುತ್ತದೆ.

**ಋಣಾತ್ಮಕ ಅಂಶಗಳು**

ಜಾಗತೀಕರಣವನ್ನು ಭಾರತ ಅಳವಡಿಸಿಕೊಂಡಿದ್ದರ ಪರಿಣಾಮವಾಗಿ ಭಾರತಕ್ಕೆ FDI ಗಳು ಯಾವುದೇ ನಿಬಂಧನೆಗಳಿಲ್ಲದೆ ಸರಾಗವಾಗಿ ಭಾರತೀಯ ಆರ್ಥಿಕತೆಯಲ್ಲಿ ಪಾಲುದಾರವಾದವು. ಇಂತಹ ಅವಕಾಶಗಳು ಆಧುನಿಕತೆಯ ಸ್ಪರ್ಶ ಪಡೆದು ಸಾಂಪ್ರದಾಯಿಕ ಕರಕುಶಲ ವೃತ್ತಿಗಳ ಮೇಲೆ ಸವಾರಿ ಮಾಡಲಾರಂಭಿಸಿದವು. ಇದರಿಂದ ಆರ್ಥಿಕ ಬದುಕು ಮಾತ್ರವಲ್ಲದೇ ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳಲ್ಲಿಯೂ ತ್ವರಿತ ಬದಲಾವಣೆಗಳಾದವು.

೧. ಜಾಗತೀಕರಣದಿಂದ ಸ್ಥಳೀಯ ಗುಡಿ ಕೈಗಾರಿಕೆಗಳು ಜಾಗತಿಕ ಮಾರುಕಟ್ಟೆಗೆ ಪ್ರವೇಶ ಪಡೆಯಲು ಸಾಧ್ಯವಾಗದೆ ಅವನತಿಯ ಹಾದಿ ಹಿಡಿದವು. ಇದರಿಂದ ಸ್ಥಳೀಯವಾಗಿ ಉದ್ಯೋಗಾವಕಾಶಗಳು ಕುಸಿಯಲಾರಂಭಿಸಿದವು. ಸ್ಥಳೀಯ ತಂತ್ರಜ್ಞಾನವು ಮುಂದುವರಿದ ಜ್ಞಾನದೊಂದಿಗೆ ಸ್ಪರ್ಧೆ ಮಾಡಲಾರದೆ ಅಳಿವಿನ ಹಾದಿ ಹಿಡಿಯಿತು.

೨. ಜಾಗತೀಕರಣದಿಂದ ಕೃಷಿ ವಲಯವು ಆಧುನಿಕತೆಯನ್ನು ಅಳವಡಿಸಿಕೊಳ್ಳುವಲ್ಲಿ ಎಷ್ಟೇ ಪ್ರಯತ್ನಿಸಿದರೂ ಸಾಧ್ಯವಾಗದೆ ಅಪಾಯಕ್ಕೆ ಸಿಲುಕಿತು. ಕಾರಣ ಬಂಡವಾಳದ ಅಭಾವ ನುರಿತ ಹಾಗೂ ಅನುಭವ ಮತ್ತು ನೈಪುಣ್ಯತೆ ಹೊಂದಿದ ಕೃಷಿ ಕಾರ್ಮಿಕರ ಅಭಾವ.

೩. ಜಾಗತೀಕರಣದಿಂದ ಹಳ್ಳಿಗಳ ದೇಶ ಆಗಿದ್ದ ಭಾರತ ನಗರಗಳ ದೇಶವಾಗುತ್ತಾ ವಾಲತೊಡಗಿತು. ಕಾರಣ ನಗರೀಕರಣ ಮತ್ತು ವಲಸೆ ಹೆಚ್ಚಾಯಿತು.

೪. ಅಂತರಾಷ್ಟ್ರೀಯ ಮಟ್ಟದಲ್ಲಿ ರೂಪಾಯಿ ಮೌಲ್ಯ ಡಾಲರ್ ಎದುರು ಕಡಿಮೆಯಾಗುತ್ತಿರುವುದು.

೫. ಸ್ಥಳೀಯ ಜ್ಞಾನ ವಿದೇಶಗಳ ಪಾಲಾಯಿತು.

೬. ಜಾಗತೀಕರಣದಿಂದಾಗಿ SEZ ನಂತಹ ವಲಯಗಳ ಅಸ್ತಿತ್ವದಿಂದ ಪರಿಸರಮಾಲಿನ್ಯ ಅಧಿಕವಾಯಿತು.

೭. ಜಾಗತೀಕರಣದಿಂದಾಗಿ ಅವಿಭಕ್ತ ಕುಟುಂಬಗಳು ಕಣ್ಮರೆಯಾಗಿ ವಿಭಕ್ತ/ಕೇಂದ್ರ ಕುಟುಂಬಗಳು ಅಸ್ತಿತ್ವಕ್ಕೆ ಬಂದವು.

೮. ಸಾಂಸ್ಕೃತಿಕ ಕಲಾಶ್ರೀಮಂತಿಕೆಯನ್ನು ನಿರ್ಲಕ್ಷ್ಯ ಮಾಡಿ ಪಾಶ್ಚಿಮಾತ್ಯ ಮಾದರಿಯ ಹಬ್ಬಹರಿದಿನಗಳಿಗೆ ಆದ್ಯತೆ ನೀಡಲಾಯಿತು.

೯. ಪೈಪೋಟಿಯ ಉತ್ಪನ್ನದಿಂದಾಗಿ ಮತ್ತು ಯಂತ್ರಗಳ ಬಳಕೆ, ಕೀಟನಾಶಕಗಳ ಮತ್ತು ರಸಗೊಬ್ಬರಗಳ ಬಳಕೆಯಿಂದ ವಿಷಪೂರಿತ ಆಹಾರ ಜನರನ್ನು ಅನೇಕ ರೋಗ ರುಜಿನಗಳಿಗೆ ನೂಕಿತು. ಆನಂತರಲ್ಲಿ ಅಪೌಷ್ಟಿಕಾಂಶಯುಕ್ತ ಆಹಾರ ಆಯುಷ್ಯ ಪ್ರಮಾಣವನ್ನು ಕಡಿಮೆಗೊಳಿಸಿತು.

ಪ್ರಸ್ತುತ ಜಾಗತೀಕರಣದ ಮಾಂತ್ರಿಕತೆಯು ಜನರು ತಮಗೆ ಬೇಕಾದ ವಸ್ತುಗಳನ್ನು ಕೊಳ್ಳಲು ಅವಕಾಶ ನೀಡದೇ ಜನರ ಇಚ್ಚೆ ಬೇಡಿಕೆಗಳನ್ನು ಕಂಪನಿಗಳು ನಿರ್ಣಯಿಸುವ ಮಟ್ಟಿಗೆ ಜನರ ಮನಸ್ಥಿತಿಯನ್ನು ತಮ್ಮ ಹತೋಟಿಗೆ ತೆಗೆದುಕೊಂಡಿದ್ದಾರೆ. ಉದಾ: Gio Network Companyಯು ಮೊದಲಿಗೆ ಜನರಿಗೆ ಉಚಿತ ಸಿಮ್ ಮತ್ತು ಕಾಲ್ ಫ್ರೀ ನೀಡಿ ಜನರು ಅದನ್ನು ಬಳಸಿ ಆ ಸಿಮ್ ಅನ್ನು ತೆಗೆಯದ ಸ್ಥಿತಿಗೆ ತಂದು ನಂತರದಲ್ಲಿ ಅವರು ರೂಪಿಸಿದ ಮೊತ್ತದ ಪ್ಲಾನ್‌ಗಳನ್ನು ಹಾಕಿಸಿಕೊಳ್ಳಬೇಕಾದ ಸ್ಥಿತಿಗೆ ಬಂದಿರುವುದು ಜಾಗತೀಕರಣಕ್ಕೆ ಉತ್ತಮ ಉದಾಹರಣೆಯಾಗಿದೆ. ಜಗತ್ತಿನಲ್ಲಿ ನಡೆಯುವ ಎಲ್ಲಾ ಘಟನೆಗಳಿಗೆ ಮೂಲ ಕಾರಣ ಆರ್ಥಿಕತೆ ಮತ್ತು ಧಾರ್ಮಿಕತೆ ಎಂದು ಮಾರ್ಕ್ಸ್ ಮತ್ತು ವೇಬರ್ ಅಭಿಪ್ರಾಯ ಪಟ್ಟಿರುವುದು ಪ್ರಸ್ತುತದಲ್ಲಿ ವಾಸ್ತವಾಗಿದೆ. ಹಣ ಎಂಬುದು

ಇಡೀ ಜಗತ್ತನ್ನು ನಿಯಂತ್ರಿಸುತ್ತದೆ ಮತ್ತು ಬದಲಾಯಿಸುತ್ತಿದೆ. ಇಂತಹ ಜಾಗತೀಕರಣದ ಹೊಡೆತಗಳು ಯಾವುದೇ ಕ್ಷೇತ್ರವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳದೇ ಬಿಟ್ಟಿಲ್ಲ. ಜಾಗತೀಕರಣವು ಹೆಚ್ಚು ಹೊಡೆತ ನೀಡಿರುವುದು ಮುಖ್ಯ ವಾಹಿನಿಯ ಸಮಾಜದಿಂದ ದೂರವಿದ್ದು ತನ್ನದೇ ಪ್ರತ್ಯೇಕ ಜಗತ್ತಿನಲ್ಲಿ ಪ್ರಕೃತಿಸ್ನೇಹಿ ಬದುಕು ಸಾಗಿಸುತ್ತಿದ್ದ ಬುಡಕಟ್ಟುಗಳಿಗೆ ಅಲೆಮಾರಿಗಳಿಗೆ ಹಾಗೂ ತಳ ಸಮುದಾಯಗಳಿಗೆ ಎಂದರೆ ತಪ್ಪಾಗಲಿಕ್ಕಿಲ್ಲ.

ಕಾಡುಗೊಲ್ಲ ಸಮುದಾಯದ ಆರ್ಥಿಕತೆಯ ಮೂಲ ತನ್ನ ಕುಲಕಸುಬುಗಳಾಗಿದ್ದವು. ಅಂತಹ ಕುಲಕಸುಬುಗಳೆಂದರೆ ಪಶುಪಾಲನೆ, ಪಶುಗಳು, ಎತ್ತುಗಳು ಮತ್ತು ಗೋವುಗಳ ಸಾಕಾಣಿಕೆ ಪ್ರಮುಖವಾಗಿದ್ದು ಎತ್ತುಗಳನ್ನು ದೇವರಿಗೆ ಬಿಡುವುದು ಮತ್ತು ಕೃಷಿಗೆ ಬಳಸಿಕೊಳ್ಳುವುದು ಜಾರಿಯಲ್ಲಿತ್ತು. ಕಾಡುಗೊಲ್ಲರು ಗೋಮಾಳಗಳನ್ನು ಕೃಷಿ ಭೂಮಿಯನ್ನಾಗಿಸಿಕೊಂಡು ಈ ಎತ್ತುಗಳ ಸಹಾಯದಿಂದ ವ್ಯವಸಾಯದಲ್ಲಿ ತೊಡಗಿದ್ದರು. ಇಲ್ಲಿ ವ್ಯವಸಾಯವು ಮಳೆ ಆಶ್ರಿತವಾಗಿದ್ದು, ಅತಿವೃಷ್ಟಿ ಮತ್ತು ಅನಾವೃಷ್ಟಿಯಿಂದ ಆರ್ಥಿಕ ಸಂಕಷ್ಟಕ್ಕೆ ಸಿಲುಕಿದರು. ಎತ್ತುಗಳಿಗೆ ಸರಿಯಾದ ಮೇವು ನೀರು ದೊರೆಯದೆ ಅನಾರೋಗ್ಯಕ್ಕೆ ತುತ್ತಾಗತೊಡಗಿದವು. ಇದರಿಂದ ಕೃಷಿ ಕುಂಠಿತಗೊಂಡಿತು. ಹಿಂದೆ ಜಾನುವಾರುಗಳಿಗೆ ರೋಗಗಳು ಬಂದರೆ ಅವುಗಳನ್ನು ನಿವಾರಿಸಲು ಜನಪದ ವೈದ್ಯರು ಪ್ರತಿ ಹಟ್ಟಿಯಲ್ಲಿದ್ದು, ತನ್ನ ಸುತ್ತಮುತ್ತ ದೊರೆಯುವ ಗಿಡಮೂಲಿಕೆಗಳಿಂದ ಅವುಗಳಿಗೆ ಔಷಧೋಪಚಾರ ನೀಡುತ್ತಿದ್ದರು. ಆದರೆ ಜನಪದ ವೈದ್ಯ ಜ್ಞಾನ ಮುಂದಿನ ತಲೆಮಾರುಗಳಿಗೆ ಹಸ್ತಾಂತರವಾಗದೇ ಆ ವ್ಯಕ್ತಿಯ ಸಾವಿನ ಜೊತೆಯಲ್ಲಿ ನಾಶವಾಯಿತು. ಇದರ ಪರಿಣಾಮವಾಗಿ ಜನಪದ ವೈದ್ಯಕ್ಕೆ ಪರ್ಯಾಯವಾಗಿ ಸರ್ಕಾರಿ ಪಶು ಸಂಗೋಪನಾ ಕೇಂದ್ರಗಳನ್ನು ನೆಚ್ಚಿಕೊಂಡು ಇಂಗ್ಲಿಷ್ ವೈದ್ಯಪದ್ಧತಿಯಿಂದ ಪಶುಚಿಕಿತ್ಸೆಯನ್ನು ಪಡೆಯುತ್ತಿದ್ದಾರೆ.

ಜಾಗತೀಕರಣದ ಪ್ರವೇಶಿಕೆಯಿಂದ ಕೈಗಾರಿಕೆಗಳ ತೀವ್ರವಾದ ಧ್ರುವೀಕರಣದಿಂದ ಹವಾಮಾನ ವೈಪರೀತ್ಯಗಳು ಜನರ ಮತ್ತು ಪಶುಗಳ ಜೀವನದ ಮೇಲೆ ಪ್ರಭಾವ ಬೀರಿದವು. ಇದರಿಂದಾಗಿ ಪ್ರಾಚೀನ ಪಾಳೇಗಾರರ ಕಾಲದಿಂದಲೂ ಪಶುಗಳಿಗಾಗಿಯೇ ಮೀಸಲಿಟ್ಟ ಕಾವಲುಗಳು ನಾಶವಾಗಿ ಬಂಜರುಭೂಮಿಗಳಾದವು. ಇದರ ಪರಿಣಾಮವಾಗಿ ಕಾಡುಗೊಲ್ಲರು ತಮ್ಮ ಬದುಕಿನ ಆರ್ಥಿಕ ಮೂಲವನ್ನು ಹುಡುಕಿದಾಗ ಅವರಿಗೆ ಅನಿವಾರ್ಯವೆನಿಸಿದ್ದೆ ಕುರಿ ಸಾಕಾಣಿಕೆ ವೃತ್ತಿ. ಪಶುಪಾಲನೆಯಲ್ಲಿ ತೊಡಗಿದ್ದಾಗ ಹೆಚ್ಚಿನ ಮೇವು ನೀರಿನ ಅವಶ್ಯಕತೆ ಇತ್ತು. ಇದರಿಂದ ಬರಬಹುದಾದ ಆದಾಯವು ಕಡಿಮೆಯಾಗಿತ್ತು. ಇದಕ್ಕೆ ಪರ್ಯಾಯವಾದ ಕುರಿಗಾಹಿ ವೃತ್ತಿ ಹೆಚ್ಚು ಆದಾಯ ತರುವ ಮತ್ತು ಕಡಿಮೆ ನೀರು, ಮೇವು ಪಾಲನೆಯಲ್ಲಿ ಪಶುಪಾಲನೆಯಷ್ಟು ಶ್ರಮದಾಯಕವಾಗಿರಲಿಲ್ಲ. ಅವನತಿಯ ಅಂಚಿನಲ್ಲಿರುವ ಕುರುಚಲು ಹುಲ್ಲುಗಳೇ ಕುರಿಗಳಿಗೆ ಆಹಾರವಾಗಿವೆ ಮತ್ತು ಇತ್ತೀಚಿನ ದಿನಮಾನದ ಕೊಳವೆ ಬಾವಿಗಳ ನೀರು ಮತ್ತು ಇದರ ಆಶ್ರಿತ ಕೃಷಿ ತ್ಯಾಜ್ಯವೇ ಇವುಗಳ ಆಹಾರವಾಗಿದೆ.

ಪಶುಸಂಪತ್ತಿನಿಂದ ಸಾಮಾಜಿಕ ಸ್ಥಾನಮಾನ ನಿಗದಿಪಡಿಸುತ್ತಿದ್ದ ಮಾನದಂಡ ಇಂದು ಕುರಿಗಳ ಸಂಖ್ಯೆಗೆ ಅನುಗುಣವಾಗಿ ವ್ಯಕ್ತಿಯ ಸ್ಥಾನಮಾನ ನಿರ್ಧರಿತವಾಗುತ್ತಿದೆ. ಪ್ರಸ್ತುತ ದಿನಮಾನದಲ್ಲಿ

ಕುರಿ ಸಾಕಾಣಿಕೆ ವೃತ್ತಿಯು ಹೆಚ್ಚು ಲಾಭದಾಯಕವಾಗಿದೆ. ಕಾರಣ ನಗರದ ಜನರ ಮುಖ್ಯ ಆಹಾರದಲ್ಲಿ ಕುರಿ ಮಾಂಸವು ಪ್ರಮುಖವಾಗಿದ್ದು, ಮೂರು ನಾಲ್ಕು ತಿಂಗಳು ಸಾಕಿದರೆ ಬಂಡವಾಳಕ್ಕೆ ಎರಡರಷ್ಟು ಆದಾಯ ಬರುತ್ತಿರುವುದನ್ನು ಕಾಣಬಹುದು. ಇದರಿಂದ ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಸ್ತುತ ಅಧ್ಯಯನದ ಸಮೀಕ್ಷೆಯಂತೆ ಒಟ್ಟು ೩.೫೫% ಜನರು ಕುರಿ ಸಾಕಾಣಿಕೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಕುರಿ ಸಾಕಾಣಿಕೆಯ ಪ್ರಮಾಣ ಕಡಿಮೆಯಾಗಲು ಸಹ ಹಲವಾರು ಕಾರಣಗಳಿವೆ. ಕುರಿ ಕಾಯುವಾಗ ಮಹಿಳೆಯರ ಬದುಕಿನ ಮೇಲೆ ರಕ್ಷಣೆಗೆ ಇಲ್ಲದಿರುವುದು. ಅನಾವೃಷ್ಟಿ ಗುಡುಗು ಸಿಡಿಲುಗಳ ಹಾವಳಿ ಆಗಿವೆ. ಮುಖ್ಯವಾಗಿ ಕಾಡುಗೊಲ್ಲರಲ್ಲಿ ಇತ್ತೀಚಿನ ವಿದ್ಯಾಮಾನಗಳಲ್ಲಿ ಹಿರಿಯ ತಲೆಮಾರಿನ ಶಿಕ್ಷಣದಿಂದ ವಂಚಿತರಾಗಿದ್ದು ಶ್ರಮಜೀವಿಗಳು ಕುರಿಗಾಹಿ ವೃತ್ತಿಯನ್ನು ಅವಲಂಬಿಸಿ ಬದುಕಿದವರು. ಆದರೆ ಜಾಗತೀಕರಣದ ಪ್ರಭಾವದಿಂದ ಇವರಲ್ಲಿ ಶಿಕ್ಷಣದ ಮಹತ್ವ ಹೆಚ್ಚು ಅರಿವನ್ನು ಮೂಡಿಸಿದೆ. ಈ ಅರಿವು ನಾವು ಪಟ್ಟ ಕಷ್ಟ ನಮ್ಮ ಮಕ್ಕಳಿಗೆ ಬರಬಾರದು ಈ ಶ್ರಮದಾಯಕ ವೃತ್ತಿಗಳು ನಮ್ಮ ಜೊತೆಗೆ ನಿಲ್ಲಲಿ ನಮ್ಮ ಮಕ್ಕಳು ಶಿಕ್ಷಣ ಪಡೆದು ಸರ್ಕಾರಿ ನೌಕರಿ ಪಡೆದು, ನೆಮ್ಮದಿಯ ಬದುಕು ಸಾಗಿಸಲಿ ಎಂಬ ಅಪೇಕ್ಷೆಗಳು ಈ ಕುರಿಗಾಹಿ ವೃತ್ತಿ ಕಡಿಮೆಯಾಗಲು ಕಾರಣವಾಗಿದೆ.

ಕಾಡುಗೊಲ್ಲರಲ್ಲಿ ಕುರಿಸಾಕಾಣಿಕೆ ಕಡಿಮೆಯಾಗಲು ಜಾಗತೀಕರಣ ಹೇಗೆ ಕಾರಣವಾಗಿದೆ ಎಂದು ಹೇಳಲು ಬಹುಮುಖ್ಯವಾಗಿ ಎಲ್ಲೆಂದರಲ್ಲಿ ಸರ್ಕಾರ ಮತ್ತು ಖಾಸಗಿ ಕಂಪನಿಗಳು SEZ ಗಳನ್ನು ಸ್ಥಾಪಿಸಿ ಕೈಗಾರೀಕರಣ ವಲಯಗಳನ್ನು ಸೃಷ್ಟಿಸುತ್ತಿವೆ. ಇದರ ಪರಿಣಾಮವಾಗಿ ಜಾಗತಿಕ ತಾಪಮಾನ ಹೆಚ್ಚಾಗುತ್ತಿದೆ. ಬಿಸಿಲಿನಿಂದ ಪ್ರಕೃತಿ ನಾಶವಾಗುತ್ತಿದೆ. ಹವಾಮಾನ ಸಮತೋಲನ ಕಳೆದುಕೊಳ್ಳುತ್ತಿರುವುದರಿಂದ ಮಾನವನ ಬದುಕು ನೀರಿನ ಮೇಲಿನ ಗುಳ್ಳೆಯಂತಾಗಿದೆ. ಕರ್ನಾಟಕದಲ್ಲಿಯೇ ಕಡಿಮೆ ಮಳೆ ಬೀಳುವ ಪ್ರದೇಶವೆಂದು ಹಣೆಪಟ್ಟಿಯೊಂದಿಗೆ ಅಂಟಿಕೊಂಡಿರುವ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಕುದಾಪುರದ ಬಳಿ ರಕ್ಷಣಾ ಇಲಾಖೆಯು ಹಗುರ ಯುದ್ಧ ವಿಮಾನಗಳ ತರಬೇತಿ ಕೇಂದ್ರವನ್ನು ಸ್ಥಾಪಿಸಿ ಸಾವಿರಾರು ಎಕರೆ ಕಾವಲು ಪ್ರದೇಶವನ್ನು DRDO ಸಂಸ್ಥೆ ಆಕ್ರಮಿಸಿಕೊಂಡಿದೆ. ಇದರ ಪರಿಣಾಮವಾಗಿ ಕುರಿಗಾಹಿ ವೃತ್ತಿಯನ್ನು ಆಧರಿಸಿ ಬದುಕು ಸಾಗಿಸುತ್ತಿರುವ ಕಾಡುಗೊಲ್ಲ ಸಮುದಾಯಕ್ಕೆ ಆರ್ಥಿಕ ಹಿಂಜರಿತ ಉಂಟಾಗಲು ಕಾರಣವಾಗಿದೆ. ಕಾವಲುಗಳೇ ಇಲ್ಲವಾದರೆ ಕುರಿಗಳಿಗೆ ಮೇವು ಎಟುಕದ ಮಾತು. ಇದರಿಂದಾಗಿ ಕುರಿ ಸಾಕಾಣಿಕೆಯ ಪ್ರಮಾಣ ಕಡಿಮೆಯಾಗುತ್ತಿದ್ದು, ಹಬ್ಬ ಹರಿದಿನಗಳಿಗಾಗಿ ಒಂದು/ಎರಡು ಕುರಿ/ಟಗರುಗಳನ್ನು ಸಾಕುವ ಮನಸ್ಥಿತಿಗೆ ಜನರು ಬಂದಿದ್ದಾರೆ. ಈ ವಿಮಾನ ಹಾರಾಟವು ಸಹ ಹವಾಮಾನ ಅಸಮತೋಲನ ಉಂಟಾಗಲು ಕಾರಣವಾಗುವುದು. ಈ ಎಲ್ಲಾ ಕಾರಣಗಳೂ ಕಾಡುಗೊಲ್ಲರ ಸಮುದಾಯದವರು ಪಶುಪಾಲನೆ, ಕುರಿಗಾಹಿ ವೃತ್ತಿ ಮತ್ತು ಕೃಷಿಯನ್ನೇ ಅನುಸರಿಸುವವರ ಪ್ರಮಾಣದಲ್ಲಿ ಇಳಿಮುಖವಾಗುತ್ತಿದ್ದು, ಜನರು ನಗರದ ಗಾರೆ ಕೆಲಸ, ರಸ್ತೆ ಕೆಲಸ, ಆಟೋ ಚಾಲನೆ, ಇತ್ಯಾದಿ ಅಸಂಘಟಿತ ವಲಯಗಳಲ್ಲಿ ತೊಡಗಿಸಿಕೊಂಡು ಬದುಕು ಸಾಗಿಸುತ್ತಿದ್ದಾರೆ.

### ೫.೫. ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲ ಸಮುದಾಯದ ಭಾಗವಹಿಸುವಿಕೆ

ಭಾರತ ಪ್ರಜಾಪ್ರಭುತ್ವ ದೇಶವಾಗಿದ್ದು ಪ್ರಜೆಗಳೇ ಪ್ರಭುಗಳಾಗಿ ತಮ್ಮ ಬೇಕು ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ತಮಗೆ ಸೂಕ್ತವೆನಿಸಿದ ತಮ್ಮ ಪ್ರತಿನಿಧಿಯನ್ನು ಆಯ್ಕೆ ಮಾಡಿ ಆ ಮೂಲಕ ತಮ್ಮನ್ನು ತಾವೇ ಆಳಿಸಿಕೊಳ್ಳುತ್ತಿದ್ದಾರೆ. ಹಿಂದೆ ಜನಪ್ರತಿನಿಧಿಗಳು ಪಕ್ಷದ ತತ್ವ ಸಿದ್ಧಾಂತಗಳಿಗೆ ಮತ್ತು ಜನರ ಅಭಿವೃದ್ಧಿಗೆ ಬದ್ಧತೆಯಿಂದ ಕೆಲಸ ಮಾಡುತ್ತಿದ್ದರು. ಆದರೆ ಜಾಗತೀಕರಣದ ಸಂದರ್ಭದಲ್ಲಿ ಜನರ ರಕ್ಷಣೆ ಮತ್ತು ಕಲ್ಯಾಣ ಕಾರ್ಯ ಮಾಡಬೇಕಿದ್ದ ಪ್ರತಿನಿಧಿಗಳು ಜನರ ಭಕ್ಷಕರಾಗಿ ಜನರ ಅಭಿವೃದ್ಧಿಗೆ ಬದಲಾಗಿ ಅಧಿಕಾರಕ್ಕೆ ಬಂದಮೇಲೆ  ಸ್ವ ಅಭಿವೃದ್ಧಿಗೆ ಹೆಚ್ಚಿನ ಮಹತ್ವ ನೀಡುತ್ತಿದ್ದಾರೆ. ಭಾರತದಂತಹ ಬಹುದೊಡ್ಡ ಪ್ರಜಾಪ್ರಭುತ್ವ ದೇಶದಲ್ಲಿ ಪ್ರಜಾಕಲ್ಯಾಣವೆಂಬುದು ಕನಸಿನ ಮಾತಾಗಿ ಭಾಸವಾಗುತ್ತಿದೆ.

ರಾಜಕಾರಣ ಇಂದು ಎಲ್ಲಾ ಕ್ಷೇತ್ರಗಳಲ್ಲಿ ತನ್ನ ಹಸ್ತಕ್ಷೇಪ ಮಾಡಿ ತನ್ನ ತೆಕ್ಕೆಗೆ ತೆಗೆದುಕೊಂಡಿದೆ. ಇಂತಹ ಸಂಧರ್ಭದಲ್ಲಿ ತಳಸಮುದಾಯಗಳು ಸಾಂವಿಧಾನಕವಾಗಿ ನೀಡಿರುವ ಸವಲತ್ತುಗಳನ್ನೇ ಪಡೆಯಲು ರಾಜಕೀಯದಲ್ಲಿ ಭಾಗವಹಿಸುವುದು ಅನಿವಾರ್ಯವಾಗಿದೆ. ಆರಂಭದಿಂದಲೂ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರ ಪ್ರಾತಿನಿಧ್ಯವು ಸಹ ಪ್ರಮುಖವೆನಿಸುತ್ತದೆ. ಗ್ರಾಮ ಪಂಚಾಯಿತಿ ತಾಲ್ಲೂಕು ಪಂಚಾಯಿತಿ ಮತ್ತು ವಿಧಾನ ಸಭೆ/ಪರಿಷತ್ ಹಾಗೂ ಎಮ್.ಪಿ. ಮತ್ತು ರಾಜ್ಯಸಭಾ ಸದಸ್ಯರು ಶಾಸಕಾಂಗದ ಭಾಗವಾಗಿ ಶಾಸನಗಳನ್ನು ರೂಪಿಸುವ ಹೊಣೆಗಾರಿಕೆ ಹೊತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಕಾಡುಗೊಲ್ಲ ಸಮುದಾಯದವರು ತಮಗೆ ಬೇಕಾದ ನೀತಿ ಯೋಜನೆಗಳನ್ನು ಕಾರ್ಯಗತ ಮಾಡಿಕೊಳ್ಳಲು ರಾಜಕೀಯದಲ್ಲಿ ಪಾಲ್ಗೊಳ್ಳುವುದು ಅನಿವಾರ್ಯವಾಗಿದೆ. ಈ ರಾಜಕೀಯದ ಪಾಲ್ಗೊಳ್ಳುವಿಕೆಯಿಂದ ಸರ್ಕಾರದ ಸವಲತ್ತುಗಳನ್ನು ಪಡೆಯಲು ತಮಗೆ ಇತರ ಸಮುದಾಯಗಳಿಂದ ಆಗುತ್ತಿರುವ ವಂಚನೆಗಳನ್ನು ಪ್ರಶ್ನಿಸಿ ಸಮುದಾಯದ ಮುಂದಿರುವ ಸವಾಲುಗಳನ್ನು ಎದುರಿಸಲು ಒಬ್ಬ ಜನಪ್ರತಿನಿಧಿ ಅವಶ್ಯಕತೆಯಿಂದ ರಾಜಕೀಯ ಭಾಗವಹಿಸುವಿಕೆ ಅವಶ್ಯಕವಾಗಿದೆ.

ರಾಜಕಾರಣವುಗ್ರಾಮ ಸಭಾದಿಂದ ಆರಂಭವಾಗಿ ಪಾರ್ಲಿಮೆಂಟಿನವರೆಗೆ ಅಧಿಕಾರ ವಿಕೇಂದ್ರೀಕರಣ, ವ್ಯವಸ್ಥೆಯನ್ನು ಹೊಂದಿದೆ. ಇಲ್ಲಿ ಕಾಡುಗೊಲ್ಲ ಸಮುದಾಯದವರು ಪಂಚಾಯಿತಿ ಸದಸ್ಯರಾಗಿ ಗ್ರಾಮಕ್ಕೆ ಬೇಕಾದ ಅಗತ್ಯ ಮೂಲಭೂತ ಸೌಕರ್ಯಗಳನ್ನೇ ಸರ್ಕಾರದ ಅನುದಾನದಿಂದ ನೀಗಿಸಿಕೊಳ್ಳಬಹುದಾಗಿದೆ. ಕಾಡುಗೊಲ್ಲರಲ್ಲಿ ಅಂದು ಪೂಜಾರಿ, ಕಟ್ಟೆಮನೆ/ ಗುಡಿಕಟ್ಟೆಯ ಮುಖ್ಯಸ್ಥ ಮತ್ತು ಹಟ್ಟಿ ನಾಯಕರೇ ಅಂತಿಮ ನಿರ್ಣಯ ಮತ್ತು ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿದ್ದರು. ಆದರೆ ಇಂದು ಗ್ರಾಮ ಪಂಚಾಯಿತಿ ಸದಸ್ಯರ ಸಮ್ಮುಖದಲ್ಲಿ ಹಬ್ಬ-ಹರಿದಿನಗಳೂ ನಡೆಯುತ್ತಿವೆ. ಪುರುಷನಷ್ಟೆ ಮಹಿಳೆಗೆ ರಾಜಕಾರಣದಲ್ಲಿ ಮೀಸಲಾತಿ ಸೌಲಭ್ಯ ಒದಗಿಸಿರುವುದರಿಂದ ಕುರಿ ಕಾಯುವ ಮಹಿಳೆ ಜನಪ್ರತಿನಿಧಿಯಾಗಿ ಅಧಿಕಾರ ನಡೆಸುವ ಸಾಮರ್ಥ್ಯ ಹೊಂದಿದ್ದಾಳೆ.

ರಾಜಕಾರಣದ ಧನಾತ್ಮಕ ಅಂಶಗಳನ್ನು ಹೇಳಿದರಷ್ಟೇ ಸಾಲದು. ಋಣಾತ್ಮಕ ಅಂಶಗಳನ್ನು ಸಹ ಗಮನಿಸಬೇಕಾಗುತ್ತದೆ. ಹಿಂದೆ ಕಾಡುಗೊಲ್ಲರಲ್ಲಿ ಒಂದು ನಿರ್ಣಯಕ್ಕೆ ಎಲ್ಲರೂ ಬದ್ಧರಾಗಿ ಅನುಷ್ಠಾನಗೊಳಿಸಬೇಕಾಗಿತ್ತು. ಆದರೆ ರಾಜಕೀಯ ಪ್ರವೇಶಿಕೆಯಿಂದ ಒಗ್ಗಟ್ಟಿನಿಂದ ಕೂಡಿದ್ದ ಹಟ್ಟಿಗಳು ಬಣಗಳಾಗಿ ರೂಪಿತವಾಗಿವೆ. ಈ ಬಣಗಳು ಅನುವಂಶೀಯ ದ್ವೇಷಕ್ಕೂ ಕಾರಣವಾಗುತ್ತಿವೆ. ಪ್ರತಿಷ್ಠೆಯ ಸಂಕೇತದ ಫಲವಾಗಿ ಹಟ್ಟಿ ಛಿದ್ರಗೊಂಡು ಅನೈಕ್ಯತೆಯ ಗೂಡುಗಳಾಗಿವೆ. ಇದರಿಂದ ಅಭಿವೃದ್ಧಿಗೆ ಬದಲಾಗಿ ಅನಾಭಿವೃದ್ಧಿ ಕಾಣಬಹುದು. ಒಗ್ಗಟ್ಟಿನಿಂದ ನಡೆಯಬೇಕಿದ್ದ ಹಬ್ಬ-ಹರಿದಿನಗಳು ಗುಂಪುಗಾರಿಕೆಯಿಂದ ಗಲಭೆ, ದ್ವೇಷ ಅಸೂಯೆಗೆ ಕಾರಣವಾಗಿವೆ. ಪುನಃ ಇವುಗಳ ನಿಯಂತ್ರಣ ಔಪಾಚಾರಿಕ ನಿಯಂತ್ರಣಕ್ಕೆ ಒಳಗಾಗುತ್ತಿವೆ. ರಾಜಕಾರಣದಿಂದ ತಮ್ಮ ಐಡೆಂಟಿಟಿ ಸೌಲಭ್ಯ ಪಡೆಯುವುದರ ಜೊತೆಗೆ ಪರಸ್ಪರ, ಅಸೂಯೆ ದ್ವೇಷ ಮೃಗೀಯ ಮನಸ್ಸುಗಳಿಂದ ಹಟ್ಟಿಗಳು ಛಿದ್ರವಾಗಿರುವುದು ಜಾಗತೀಕರಣದ ಪ್ರಭಾವದಿಂದ ಎಂದು ಹೇಳಬಹುದು.

ಪ್ರಸ್ತುತ ಅಧ್ಯಯನವು ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಕುಟುಂಬ ನ್ಯಾಯ ಪಂಚಾಯಿತಿ ಕುಲಕಸುಬು ಆರ್ಥಿಕತೆ, ಸಮುದಾಯದ ಶುದ್ಧತೆ ಇತ್ಯಾದಿಗಳಲ್ಲಿ ಆಗಿರುವ ಸ್ಥಿತ್ಯಂತರಗಳ ಕುರಿತು ಮಾಹಿತಿ ಒದಗಿಸುತ್ತದೆ. ಜಾಗತೀಕರಣದ ಫಲವಾಗಿ ಎಲ್ಲಾ ಸಮುದಾಯಗಳು ಸಾಂಪ್ರದಾಯಿಕತೆಯಿಂದ ಆಧುನಿಕತೆಯೆಡೆಗೆ ಮುಖ ಮಾಡಿರುವುದು ಮತ್ತು ಮಾಡಬೇಕಾಗಿರುವ ಅನಿವಾರ್ಯತೆಯ ನಡುವೆಯಲ್ಲಿ ನಮ್ಮ ಪೂರ್ವಿಕರ ಜ್ಞಾನ ಪರಂಪರೆ ಆಚಾರ ವಿಚಾರಗಳನ್ವಯ ಹಿಡಿದಿಟ್ಟುಕೊಳ್ಳುವ ಅಗತ್ಯತೆ ಇದೆ. ಇಂತಹ ಜಾಗತೀಕರಣ ಸಂದರ್ಭದಲ್ಲಿ ಭಾರತೀಕರಣ ಎಂಬ ಪರಿಕಲ್ಪನೆಯನ್ನು ಅಳವಡಿಸಿಕೊಂಡು ತನ್ನತನವನ್ನು ಉಳಿಸಿಕೊಂಡು ಮುಂದಿನ ತಲೆಮಾರಿಗೆ ಹಸ್ತಾಂತರಿಸುವುದು ಸಾಂಸ್ಕೃತಿಕ ಶ್ರೀಮಂತಿಕೆ ಹೊಂದಿರುವ ಎಲ್ಲಾ ತಳ ಸಮುದಾಯಗಳ ಆದ್ಯ ಕರ್ತವ್ಯವಾಗಿದೆ.

**೫.೬. ವರ್ತಮಾನ ಮತ್ತು ಕಾಡುಗೊಲ್ಲ ಸಮುದಾಯ**

ಮಾನವನು ತನ್ನ ಚಲನಶೀಲತೆಯಿಂದ ಹೊಸ ಪರಿಸರಕ್ಕೆ ಹೊಂದಿಕೊಳ್ಳುವುದು ಸಹಜ ಪ್ರವೃತ್ತಿ. ಕಾರಣ ತಾನು ತನ್ನ ನೆಲೆಯಿಂದ ಸ್ಥಿತ್ಯಂತರ ಹೊಂದಿ ತನ್ನ ಮುಂದಿನ ಆಧುನಿಕತೆಗೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಾನೆ. ಕಾರಣ ಇಂದಿನ ಜಾಗತೀಕರಣದ ಫಲವಾಗಿ ತಮ್ಮ ಮೂಲ ನೆಲೆಯಿಂದ ಕಂಡುಕೊಳ್ಳಲಾಗದ್ದನ್ನು ಇಂದಿನ ಆಧುನಿಕತೆಯಿಂದ ಕಂಡುಕೊಳ್ಳಲು ದಾಪುಗಾಲುಗಳನ್ನು ಇಡಲು ಎಷ್ಟರಮಟ್ಟಿಗೆ ಯಶಸ್ವಿಯಾಗಿದ್ದಾನೆಂದು ಸಿಂಹಾವಲೋಕನ ಮಾಡಿದರೆ, ಹಿಂದೆ ಇದ್ದಂತಹ ಸಂಸ್ಕೃತಿ, ಸಂಪ್ರದಾಯಗಳು, ಆಚಾರ ವಿಚಾರ, ರಕ್ತ ಸಂಬಂಧಗಳು, ಸಹಕಾರ ಹಾಗೂ ಅವನ ನಡವಳಿಕೆಗಳಲ್ಲಿ ಅನೇಕ ರೀತಿಯ ಬದಲಾವಣೆಗಳನ್ನು ಕಾಣಬಹುದು. ಇಂತಹ ಬದಲಾವಣೆಗಳನ್ನು ಕಾಡುಗೊಲ್ಲರಲ್ಲಿಯೂ ಸಹ ಕಾಣಬಹುದಾಗಿದೆ. ಅರೆ ಅಲೆಮಾರಿಗಳಾದ ಕಾಡುಗೊಲ್ಲರು ಹಳೆಯ ಆಚಾರ ವಿಚಾರಗಳು, ಸಂಪ್ರದಾಯಗಳನ್ನು ತಮ್ಮ ಜೀವನಕ್ಕೆ ಅಳವಡಿಸಿಕೊಂಡು ಕೂತಿರುವಾಗ, ಆಧುನಿಕತೆಯೆಂಬ ವಿಚಾರದಾರೆಗಳು ಈ ಗೊಡ್ಡು ಸಂಪ್ರದಾಯಗಳನ್ನು ನೋಡಿ ಅಣಕಿಸುತ್ತಿದ್ದು,

ಇದನ್ನು ಕಾಡುಗೊಲ್ಲರು ದೊಡ್ಡ ಸವಾಲಾಗಿ ಸ್ವೀಕರಿಸಬೇಕಾದಂತಹ ಅನಿವಾರ್ಯತೆ ಅವರ ಮೇಲೆ ಇದೆ. ಇಂದು ಜಾಗತೀಕರಣದ ಪ್ರಭಾವ ಕಾಡುಗೊಲ್ಲರ ಸಾಂಸ್ಕೃತಿಕತೆಯ ಮೇಲೂ ಬೀರಿದೆ, ಕಾರಣ ಇಂದಿನ ಕಾಡುಗೊಲ್ಲರ ಆಚಾರ ವಿಚಾರಕ್ಕೆ ಸಂಬಂಧಿಸಿದಂತೆ ನಾಗರಿಕ ಸಮಾಜದಂತೆ ಇವರೂ ಸಹ ತಮ್ಮ ಸಂಸ್ಕೃತಿಯನ್ನು ಬದಲಾಯಿಸಿಕೊಂಡಿದ್ದಾರೆ. ಪ್ರಸ್ತುತ ಆಧುನಿಕತೆಯನ್ನು ಅಳವಡಿಸಿಕೊಂಡ ಇವರು ಮದುವೆ, ಜವಳ, ಹುಟ್ಟು ಮುಂತಾದ ವಿಚಾರಗಳಲ್ಲಿ ನಾಗರಿಕ ಸಮಾಜದ ಆಚರಣೆಗಳನ್ನು ಇವರು ಸಹ ಮೈಗೂಡಿಸಿಕೊಡಿದ್ದಾರೆ. ಹುಟ್ಟು, ಸಾವು, ಜನನಕ್ಕೆ ಸಂಬಂಧಿಸಿದಂತೆ ಕೆಲವು ಗೊಡ್ಡು ಸಂಪ್ರದಾಯಗಳನ್ನು ಬದಿಗೊತ್ತಿ ತಾವೂ ಸಹ ನಾಗರಿಕ ಸಮಾಜಕ್ಕೆ ಹತ್ತಿರವಾಗಿದ್ದೇವೆ ಎಂಬುದನ್ನು ಸಾಬೀತುಪಡಿಸತ್ತಿದ್ದಾರೆ. ಕಾಡುಗೊಲ್ಲರ ಸಾಮಾಜಿಕ ಬದುಕಿನಲ್ಲಿ ಹಲವಾರು ಬದಲಾವಣೆ ಕ್ರಮಗಳು ಕಂಡುಬಂದರೂ ಸಹ ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಇನ್ನೂ ಬಹಳಷ್ಟು ಬದಲಾವಣೆ ಕಾಣಬೇಕಾಗಿದೆ, ಈ ನಿಟ್ಟಿನಲ್ಲಿ ಸರ್ಕಾರ ಕಾಡುಗೊಲ್ಲರ ಹಟ್ಟಿಗಳನ್ನು ಮಜರೆ ಗ್ರಾಮಗಳಾಗಿ ಮಾಡಿ, ಅವರ ಹಳ್ಳಿಗಳಿಗೆ ಮೂಲಭೂತ ಸೌಕರ್ಯಗಳನ್ನು ಇನ್ನೂ ಹೆಚ್ಚಿಸಬೇಕಾದಂತಹ ಅವಶ್ಯಕತೆ ಎದ್ದು ಕಾಣುತ್ತಿದೆ. ರಾಜಕೀಯವಾಗಿ ಕಾಡುಗೊಲ್ಲರನ್ನು ರಾಜಕೀಯ ಪಕ್ಷಗಳು ತೀರಾ ನಿಕೃಷ್ಟತೆಯಿಂದ ಕಾಣುತ್ತಿರುವುದನ್ನು ಕಾಣುತ್ತೇವೆ. ಇಂದು ಕಾಡುಗೊಲ್ಲರ ಹಟ್ಟಿಗಳು ಮಜರೆ ಗ್ರಾಮದಿಂದ ಕೆಲ ಮೈಲಿಗಳ ಹಂತರದಲ್ಲಿದ್ದು ಅವರಿಗೆ ಸರಿಯಾದ ಸಾರಿಗೆ ಸಂಪರ್ಕಗಳು ಸಹ ಇಲ್ಲ. ಭಾರತ ದೇಶ ಮುಂದುವರೆಯತ್ತಿರುವ ರಾಷ್ಟ್ರ ಎಂದು ಎದೆಯುಬ್ಬಿಸಿ ಹೇಳುತ್ತಿದ್ದೇವೆ. ಆದರೆ ಈ ಮೂಲ ದೇಶವಾಸಿಗಳು ಎಲ್ಲೂ ಸಹ ಮುಂದುವರಿಯುತ್ತಿರುವ ಲಕ್ಷಣಗಳು ಕಾಣುತ್ತಿಲ್ಲ. ಮೂಲ ನಿವಾಸಿಗಳನ್ನು ಒಕ್ಕಲೆಬ್ಬಿಸುವ ಲಕ್ಷಣಗಳೇ ಇಂದು ಕಾಣುತ್ತಿದೆ. ಇಂತಹ ಮೂಲನಿವಾಸಿಗಳ ಅಭಿವೃದ್ಧಿಗಾಗಿ ಸರ್ಕಾರ ಕ್ರಮ ವಹಿಸಿದರೆ ದೇಶದ ಅಭಿವೃದ್ಧಿ ಸಾಧ್ಯ ಎನ್ನಬಹುದು.

ಬುಡಕಟ್ಟು ಸಮುದಾಯದಂತೆ ಕಾಡುಗೊಲ್ಲರೂ ಸಹ ಈ ಹಿಂದೆ ಅಲೆಮಾರಿಗಳಾಗಿ ಊರಿನಿಂದ ಊರಿಗೆ ಅಲೆದಾಡುತ್ತಾ ತಮ್ಮ ಮೂಲಪಶುಪಾಲಕ ವೃತ್ತಿಯನ್ನು ಮುಂದುವರಿಸಿಕೊಂಡು ಬರುತ್ತಿದ್ದರು. ಆದರೆ ಇತ್ತೀಚೆಗೆ ಪಶುಪಾಲನೆಗೆ ಬೇಕಾದಂತಹ ಹಲ್ಲುಗಾವಲುಗಳಾಗಲೀ ಕಾಡುಗಳಾಗಲೀ ಮನುಷ್ಯನ ಸ್ವಾರ್ಥಕ್ಕಾಗಿ ಬಲಿಯಾಗಿರುವುದರಿಂದ ತಮ್ಮ ಮೂಲಪಶುಪಾಲನಾ ವೃತ್ತಿಯನ್ನುಕೈಬಿಟ್ಟು ಇದ್ದಂತಹ ಅಲ್ಪಸ್ವಲ್ಪ ಕೃಷಿ ಭೂಮಿಯನ್ನು ಸಹ ರಿಯಲ್ ಎಸ್ಟೇಟ್ ದಂದೆ ನಡೆಸುವವರಿಗೆ ಬಿಡಿಗಾಸಿಗೆ ಮಾರಾಟ ಮಾಡಿ ಬೆಂಗಳೂರಿನಂತಹ ಮೆಟ್ರೋಪಾಲಿಟಿನ್ ಕಾಸ್ಮೋಪಾಲಿಟಿನ್ ನಗರಗಳಿಗೆ ಹೋಗಿ ಯಾವುದೋ ಕೈಗಾರಿಕೆಗಳಲ್ಲಿ ದುಡಿಯುತ್ತಿರುವುದನ್ನು ಇಂದು ಕಾಣುತ್ತೇವೆ. ಸಂಪ್ರದಾಯಬದ್ಧವಾದ ಕುಲಕಸುಬುಗಳಿಗೆ ವಿದಾಯ ಹೇಳಿ, ಆದಾಯ ಬರುವಂತಹ ಕಸುಬುಗಳನ್ನು ಕಂಡುಕೊಂಡ ಇವರು ವೈಟ್‌ಕಾಲರ್ ಕೆಲಸಗಳತ್ತ ತಮ್ಮ ನಿಲುವು ಬದಲಾಯಿಸುತ್ತಿರುವುದನ್ನು ನೋಡುತ್ತೇವೆ. ಇದೆಲ್ಲಾ ಕಂಡುಬಂದಿದ್ದು ಜಾಗತೀಕರಣದಿಂದ ಎಂದರೆ ತಪ್ಪಾಗಲಾರದು. ಅದೇ ರೀತಿ ಕೆಲವರು ಆಧುನಿಕ ಕೃಷಿಯನ್ನು ಅಳವಡಿಸಿಕೊಂಡು ವಾಣಿಜ್ಯ ಬೆಳೆಗಳನ್ನು ಬೆಳೆಯಲು ಮುಂದಾಗಿದ್ದಾರೆ. ಇದರಿಂದ ಕೆಲವರು ಲಾಭವನ್ನು ಪಡೆದರೆ ಇನ್ನು ಕೆಲವರು ನಷ್ಟಗಳನ್ನು ಅನುಭವಿಸಿರುತ್ತಾರೆ.

ಕಾಡುಗೊಲ್ಲರು ಇತ್ತೀಚೆಗೆ ತಮ್ಮ ಮಕ್ಕಳಿಗೆ ಉತ್ತಮ ಶಿಕ್ಷಣವನ್ನು ಕೊಡಿಸುತ್ತಿರುವುದನ್ನು ಅಧ್ಯಯನದಿಂದ ತಿಳಿಯಬಹುದಾಗಿದೆ. ಕಾರಣ ಪೋಷಕರಾದ ನಾವು ಅವಿದ್ಯಾವಂತರಾಗಿ ಅನುಭವಿಸುತ್ತಿರುವ ಕಷ್ಟ ನಮ್ಮ ಮಕ್ಕಳಿಗೆ ಬಾರದಿರಲಿ ಎಂದು ಸರ್ಕಾರದ ಇತ್ತೀಚಿನ ಕೆಲವೊಂದು ಸವಲತ್ತುಗಳನ್ನು ಬಳಸಿಕೊಂಡು ಇಂದು ಉನ್ನತ ವ್ಯಾಸಂಗದತ್ತ ಮುಖ ಮಾಡುತ್ತಿರುವುದನ್ನು ನೋಡುತ್ತೇವೆ. ಕಾಡುಗೊಲ್ಲರಲ್ಲಿ ಇಂದು ಉನ್ನತ ವ್ಯಾಸಂಗ ಪಡೆದಂತಹ ಯುವಕ ಯುವತಿಯರು ಅತ್ಯುನ್ನತ ಹುದ್ದೆ ದೊರಕಿಸಿಕೊಂಡಿರುವುದು ಸಹ ಸಮೀಕ್ಷೆಯಿಂದ ತಿಳಿದಿರುತ್ತದೆ.

**ಅಡಿಟಿಪ್ಪಣಿಗಳು**

೧. ಕೃಷ್ಣಯ್ಯಗೌಡ ಎಚ್.ಆರ್., ಭಾರತೀಯ ಆರ್ಥಿಕತೆ, ಪು–೮೨೫, ಮೈಸೂರು ಬುಕ್‌ಹೌಸ್, ಮೈಸೂರು, ೨೦೧೨.

೨. ಎಚ್ಚಾರ್ಕೆ, ಅಂತರರಾಷ್ಟ್ರೀಯ ಅರ್ಥಶಾಸ್ತ್ರ, ಪು–೨೮೦, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೩.

೩. ಪ್ರಭಾಕರ. ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಆಯ್ದ ಲೇಖನಗಳು, ೨೦೦೯.

೪. ಒಡೆಯರ್ ಡಿ. ಹೆಗಡೆ, ಆರ್ಥಿಕ ಸಿದ್ಧಾಂತ, ಪು–೧೬೭. ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೦

೫. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಮೊಗಳ್ಳಿ ಗಣೇಶ್, ಪು–೨೩, ೨೦೦೦

೬. ಅದೇ, ಪು–೧೩–೧೪, ೨೦೦೦.

೭. ಗುರುಲಿಂಗಯ್ಯ ಎಂ., ನಾಗಪ್ಪ ವಿ., ಕಾಡುಗೊಲ್ಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೫, ಪುಟ–೪೭.

೮. Nanjundayya H.V., The Ethnographic Survey of Mysore (Bangalore: Government Press, Page, ೩೮, ೧೯೦೮,

# ಸಮಾರೋಪ

೬.೧. ಪೀಠಿಕೆ

೬.೨. ಫಲಿತಗಳು

೬.೩. ಪರಿಹಾರೋಪಾಯಗಳು

೬.೪. ಪರಾಮರ್ಶನ ಗ್ರಂಥಗಳು

# ಸಮಾರೋಪ

**ಪೀಠಿಕೆ**

ಕಾಡುಗೊಲ್ಲರ ಬಗ್ಗೆ ಹಿಂದಿನಿಂದಲೂ ಅಧ್ಯಯನಗಳು ನಡೆಯತ್ತಾ ಬಂದಿವೆ. ಅದರೂ ಅವರ ಸಾಂಸ್ಕೃತಿಕತೆ ಬಗ್ಗೆಯೇ ಹೆಚ್ಚಿನ ಅಧ್ಯಯನಗಳು ಹಾಗೂ ಸಂಶೋಧನೆಗಳು ನಡೆದುಬಂದಿರುವುದು ಕಾಣುತ್ತೇವೆ. ಅವರ ಆರ್ಥಿಕತೆ ಬಗ್ಗೆ ಅಧ್ಯಯನಗಳು ಹಾಗೂ ಸಂಶೋಧನೆಗಳು ತೀರಾ ಕಡಿಮೆ. ತೀ.ನಂ ಶಂಕರನಾರಾಯಣ ಅವರು ಕಾಡುಗೊಲ್ಲರ ಬಗ್ಗೆ ಪ್ರಾರಂಭಿಕವಾಗಿ ಕಾಡುಗೊಲ್ಲರ ಸಾಂಸ್ಕೃತಿಕ ಅಧ್ಯಯನ ಕೈಗೊಂಡರು. ಆನಂತರ ಅನಂತಕೃಷ್ಣ ಅಯ್ಯರ್ ಹಾಗೂ ಎಡ್ಗರ್ ಥರ್ಸ್‌ಟನ್ ಮುಂತಾದವರು ಅಧ್ಯಯನ ಕೈಗೊಂಡರು. ಇತ್ತೀಚೆಗೆ ವ್ಯವಸಾಯ ಮತ್ತು ಕುರಿಸಾಕಾಣಿಕೆಯನ್ನು ಮೂಲಕಸುಬಾಗಿ ಹೊಂದಿರುವ ಕಾಡುಗೊಲ್ಲರು ಕಷ್ಟಪಟ್ಟು ದುಡಿದು ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಇವರು ಇನ್ನೊಬ್ಬರಿಗೆ ಮೋಸ ಮಾಡಿ ಜೀವನ ಮಾಡುವುದನ್ನು ಎಲ್ಲೂ ಕಾಣಲು ಸಾಧ್ಯವಿರುವುದಿಲ್ಲ.

ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಆರ್ಥಿಕತೆ ಎನ್ನುವ ಸಂಶೋಧನಾ ಅಧ್ಯಾಯನದಲ್ಲಿ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿನ ಹೊಸದುರ್ಗ, ಹೊಳಲ್ಕೆರೆ, ಚಿತ್ರದುರ್ಗ, ಚಳ್ಳಕೆರೆ, ಹಿರಿಯೂರು ಮತ್ತು ಮೊಳಕಾಲ್ಮೂರುಗಳಲ್ಲಿನ ಕಾಡುಗೊಲ್ಲರ ಹಟ್ಟಿಗಳಲ್ಲಿನ ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನಿಟ್ಟುಕೊಂಡು, ಅವರು ಈ ಆಧುನಿಕ ಹೊಸ ಆರ್ಥಿಕ ನೀತಿ ಹಾಗೂ ಜಾಗತೀಕರಣದ ಪ್ರಭಾವ ಅವರ ಮೇಲೆ ಯಾವ ಬದಲಾವಣೆ ಹಾಗೂ ಪರಿಣಾಮ ಬೀರಿದೆ ಎಂಬುದನ್ನು ಗಮನಿಸಲಾಗಿದೆ. ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ಥಿತ್ಯಂತರಗಳನ್ನು ಕುರಿತು ಚರ್ಚಿಸಲಾಗಿದೆ.

ಜಾಗತೀಕರಣ ಮತ್ತು ತಳಸಮುದಾಯಗಳ ಸ್ಥಿತಿಗತಿಗಳು ಅಂದರೆ ಜಾಗತೀಕರಣದ ಹಿನ್ನೆಲೆಯಲ್ಲಿ ಕಾಡುಗೊಲ್ಲರ ಸಾಮಾಜಿಕ, ರಾಜಕೀಯಾರ್ಥಿಕ ವಿಷಯಗಳಲ್ಲಿ ಯಾವ ಬದಲಾವಣೆಗಳು ಕಂಡುಬರುತ್ತವೆ, ಅಂತಹ ಬದಲಾವಣೆಗಳು ಕಾಣಲು ಕಾರಣಗಳೇನಾದರೂ ಕಂಡುಬಂದಿದೆ ಹಾಗೂ ಬದಲಾದ ಸನ್ನಿವೇಶಕ್ಕೆ ಇವರ ನಿಲುವುಗಳೇನು? ಒಂದು ವೇಳೆ ಬದಲಾವಣೆಗಳೇನಾದರೂ ಕಂಡುಬಂದಲ್ಲಿ ಅದಕ್ಕೆ ಕಾರಣರಾದವರು ಯಾರು? ಎಂಬುದನ್ನು ಕುರಿತು ತಿಳಿಸಲಾಗಿದೆ.

ವರ್ತಮಾನದಲ್ಲಿ ಕಾಡುಗೊಲ್ಲರು ಯಾವ ಬಗೆಯ ಸಾಮಾಜಿಕಾರ್ಥಿಕ ಸ್ಥಾನಮಾನಗಳನ್ನು ಹೊಂದಿದ್ದಾರೆ, ಅವರಲ್ಲಿ ಆದಂತಹ ಬದಲಾವಣೆಗಳಿಗೆ ಯಾವ ಚಾರಿತ್ರಿಕ ಅನಿವಾರ್ಯತೆಗಳು ಕಾರಣವಾದವು ಹಾಗೂ ಕಾಡುಗೊಲ್ಲರ ವರ್ತಮಾನದ ಬದುಕು ಯಾವ ಬಗೆಯ ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗುತ್ತದೆ ಎಂಬ ವಿಷಯಗಳ ಕುರಿತು ತಿಳಿಸಲಾಗಿದೆ. ಪ್ರಸ್ತುತ ಅಧ್ಯನಯದಲ್ಲಿ ಸಾಮಾಜಿಕಾರ್ಥಿಕ ಸ್ಥಿತಿಗಳನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ. ಬಂಡವಾಳಶಾಹಿ ಅಸ್ತ್ರವಾಗಿರುವ ಈ ಜಾಗತೀಕರಣ ಎಲ್ಲವನ್ನು ಅಂದರೆ ತಳಸಮುದಾಯಗಳ ಮೂಲಸ್ಥಿತಿಯನ್ನು ತನ್ನ ಲಾಭಕ್ಕಾಗಿ ಬಳಸಿಕೊಳ್ಳುತ್ತಿರವ ಬಗ್ಗೆ ವಿವರಿಸಲಾಗಿದೆ.

ಅಭಿವೃದ್ಧಿಯ ನೆಪದಲ್ಲಿ ಆಧುನಿಕತೆ ತಳಸಮುದಾಯಗಳ ಪಾರಂಪರಿಕ ಜ್ಞಾನವನ್ನು ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸುತ್ತಿದ್ದು ಇದನ್ನು ಪ್ರಶ್ನಿಸುವಂತಹ ಯಾವ ಸಂಘಟನೆಗಳು ಹುಟ್ಟಿಕೊಳ್ಳದಿರುವುದು ಒಂದು ವಿಪರ್ಯಾಸವಾಗಿದೆ. ಈ ಜಾಗತೀಕರಣ ಒಂದು ಕಡೆ ತೋರ್ಪಡಿಕೆಯ ಅಭಿವೃದ್ಧಿ ಚಿತ್ರಣವಾಗಿದ್ದರೆ, ಇನ್ನೊಂದು ಕಡೆ ಇದನ್ನೆಲ್ಲಾ ವ್ಯವಸ್ಥಿತವಾಗಿ ಮುಚ್ಚಿಹಾಕಿ ಬೇರೆಯದೇ ಮುಖವಾಡವನ್ನು ತೊಟ್ಟು ನಮ್ಮ ನಡುವೆ ಇರುವ ಈ ಜಾಗತೀಕರಣ ಪ್ರವಾಹದ ಹೊಡೆತಕ್ಕೆ ಸಿಕ್ಕು ಹಲವಾರು ತಳಸಮುದಾಯಗಳು ಗುರುತು ಸಿಗದಷ್ಟು ಬದಲಾಗಿವೆ.

ಜಾಗತೀಕರಣ ಸಂದರ್ಭದಲ್ಲಿ ಕಾಡುಗೊಲ್ಲರ ಸಂಸ್ಕೃತಿಯ ಬಗ್ಗೆ ಪ್ರಸ್ತುತ ಕಾಡುಗೊಲ್ಲರ ಸಂಸ್ಕೃತಿ ಅವರ ಆಚಾರ ವಿಚಾರ, ಸೃಷ್ಟಿಪುರಾಣಗಳು, ಐತಿಹ್ಯಗಳು ಅಂದರೆ ಕಾಡುಗೊಲ್ಲರ ಸಂಸ್ಕೃತಿಯನ್ನು ಅರಿಯಲು ಐತಿಹ್ಯಗಳನ್ನು ಕುರಿತು ಚರ್ಚಿಸಲಾಗಿದ್ದು, ಅವರ ಮೂಲ ನೆಲೆಯನ್ನು ತಿಳಿಯಲು ಇದು ಅನುಕೂಲವಾಗಿದೆ. ಮುಂದುವರಿದು ಅವರ ಮೂಲಪುರುಷರ ಬಗ್ಗೆ ತಿಳಿಯಲು ಕಥೆ ಕಾವ್ಯಗಳ ಬಗ್ಗೆ ತಿಳಿಯಲಾಗುತ್ತದೆ. ಜೊತೆಗೆ ಅವರ ಮೌಖಿಕ ಪರಂಪರೆಯನ್ನು ತಿಳಿಯಲಾಗಿದೆ. ಕಾಡುಗೊಲ್ಲರ ಭಾಷೆ, ಅವರ ಸಂಸ್ಕೃತಿಯ ಬಗ್ಗೆ ಅರಿತುಕೊಳ್ಳಲಾಗಿದೆ. ಕಾಡುಗೊಲ್ಲರ ಬುಡಕಟ್ಟು ಸಂಸ್ಕೃತಿಯ ಹಿನ್ನೆಲೆಯಲ್ಲಿ ನಂಬಿಕೆ, ಸಂಪ್ರದಾಯ, ದೈವಾರಾಧನೆ ಹಾಗೂ ಕಲೆ ಸಾಹಿತ್ಯಗಳು ಮತ್ತು ಪ್ರಸ್ತಾಪಗಳ ಬಗ್ಗೆ ಚರ್ಚಿಸಲಾಗಿದೆ. ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಕಾಡುಗೊಲ್ಲರ ಬದಲಾವಣೆಗಳು ಮತ್ತು ಜಾಗತೀಕರಣದ ಪ್ರಸ್ತುತ ಸಂದರ್ಭದಲ್ಲಿ ಕಾಡುಗೊಲ್ಲರು ಅನೇಕ ರೀತಿಯ ಸಾಮಾಜಿಕ ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಒಳಗಾಗಿದ್ದಾರೆ ಹಾಗೂ ಆಧುನಿಕ ಮುಖ್ಯವಾಹಿನಿಯೊಂದಿಗೆ ಹೇಗೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ ಎಂಬುದರ ಕುರಿತು ಚರ್ಚಿಸಿಲಾಗಿದೆ. ಸಾಮಾಜಿಕ ಸಂಘಟನೆಯಲ್ಲಿ ಮೊದಲ ಸ್ಥಾನವೇ ಕುಟುಂಬದ್ದಾಗಿದ್ದು, ಹಾಗಾಗಿ ಹಿಂದೆ ಕಾಡುಗೊಲ್ಲರಲ್ಲಿ ಮಾತೃ ಪ್ರಧಾನ ಕುಟುಂಬಗಳು ಅಸ್ತಿತ್ವದಲ್ಲಿರುವ ಬಗ್ಗೆ ಮತ್ತು ಕಾಡುಗೊಲ್ಲರು ಮಾತೃದೇವತಾ ಆರಾಧಕರಾಗಿದ್ದರು, ಇದಕ್ಕೆ ಸಾಕ್ಷಿಯಾಗಿ ಇಂದೂ ಸಹ ಕಾಡುಗೊಲ್ಲರು ಆರಾಧನೆ ಮಾಡುತ್ತಿರುವ ಗೌರಸಂದ್ರ ಮಾರಮ್ಮ, ಗೊಲ್ಲಾಳಮ್ಮ, ಬೇವಿನಳ್ಳಿ ಕರಿಯಮ್ಮ ಮುಂತಾದ ಮಾತೃದೇವತಾ ಆರಾಧನೆ ಬಗ್ಗೆ ಚರ್ಚಿಸಲಾಗಿದೆ.

ಕಾಡುಗೊಲ್ಲರಲ್ಲಿ ಅವಿಭಕ್ತ ಹಾಗೂ ವಿಭಕ್ತ ಕುಟುಂಬವ್ಯವಸ್ಥೆ ಅದರ ನಿರ್ವಹಣೆ, ವಿವಾಹ, ಮೌಢ್ಯತೆ, ಭಾಷೆ, ಸಂಸ್ಕೃತಿ ಮತ್ತು ಸಂಪ್ರದಾಯಗಳು ಮದುವೆ ಸಂದರ್ಭದಲ್ಲಿ ಅಳವಡಿಸಿಕೊಂಡಿರು. ಆಚರಣೆಗಳು, ಧಾರ್ಮಿಕ ಅಂಶಗಳು ಮತ್ತು ನಾಮಕರಣಗಳು ಬದಲಾದ ಸನ್ನಿವೇಶಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ಜಾಗತೀಕರಣಕ್ಕೆ ಒಳಗಾದಂತೆ ಕಾಡುಗೊಲ್ಲರ ಬದುಕು ಬದಲಾಗುತ್ತಿರವ ಸನ್ನಿವೇಶಗಳಲ್ಲಿ ಅವರ ಆಚರಣೆಗಳಲ್ಲಿ ಸಡಿಲಿಕೆ ಉಂಟಾಗುತ್ತಿದೆ. ಇತ್ತೀಚೆಗೆ ವಿದ್ಯಾವಂತ ಯುವಕರು ಮತ್ತು ನಗರವಾಸಿ ಕಾಡುಗೊಲ್ಲರು ಇಂತಹ ಮೌಢ್ಯತೆಗಳನ್ನು ವಿರೋಧಿಸುತ್ತಿರುವ ಸನ್ನಿವೇಶಗಳನ್ನು ಕಾಣಬಹುದಾಗಿರುವ ಪ್ರಸ್ತುತ ಸ್ಥಿತಿಯನ್ನು ವಿವರಿಸಲಾಗಿದೆ.

ಕಾಡುಗೊಲ್ಲರ ಸಾಂಪ್ರದಾಯಿಕ ಕುಲಕಸುಬುಗಳಾದ ಬೇಟೆ ಪಶುಪಾಲನೆ ಇವುಗಳು ಬದಲಾದ ಆಧುನಿಕತೆಯ ನಂತರ ಯಾವ ರೀತಿ ಬದಲಾವಣೆ ಹೊಂದಿದವು, ಇವುಗಳು ಬದಲಾಗಲು ಮೂಲ ಕಾರಣಗಳೇನು? ಅವುಗಳ ಸ್ಥಿತ್ಯಂತರ ಯಾವ ರೀತಿಯಾಗಿ ಮಾರ್ಪಾಡಾದವು ಈ ಮಾರ್ಪಾಡಿನೊಂದಿಗೆ ಕಾಡುಗೊಲ್ಲರು ತಮ್ಮ ಜೀವನ ವಿಧಾನವನ್ನು ಹೇಗೆ ಬದಲಾಯಿಸಿಕೊಂಡರು ಆಧುನಿಕತೆ ಮತ್ತು ಜಾಗತೀಕರಣ ಸನ್ನಿವೇಷದಲ್ಲಿ ಹೇಗೆ ಹೊಂದಿಕೊಂಡರು ಎಂದು ವಿವರಿಸಲಾಗಿದೆ. ಕಾಡುಗೊಲ್ಲರು ಮತ್ತು ಪಶುಸಂಗೋಪನೆ ಬದಲಾದ ಸಂದರ್ಭದಲ್ಲಿ ಅವರ ನಡೆಯ ಬಗ್ಗೆ ತಿಳಿಸಲಾಗಿದೆ. ಕಾಡುಗೊಲ್ಲ ಬುಡಕಟ್ಟಿನ ಕುಲಕಸುಬುಗಳಲ್ಲಾದ ಸ್ಥಿತ್ಯಂತರಗಳನ್ನು ಗಮನಿಸಿದಾಗ ಈ ಜನರು ಆಧುನಿಕತೆಗೆ ತಮ್ಮನ್ನು ಸಂಪೂರ್ಣವಾಗಿ ಒಗ್ಗಿಸಿಕೊಳ್ಳಲಾಗದೇ ಅನಿವಾರ್ಯತೆಯಿಂದ ಕೆಲವು ಕಸುಬುಗಳಿಗೆ ಹೋಗಲೇಬೇಕಾದಂತಹ ಸನ್ನಿವೇಶ ಬಂದೊದಗಿದೆ. ಪಾರಂಪರಿಕವಾಗಿ ಬೆಳೆಸಿಕೊಂಡು ಬಂದಂತಹ ಕಸುಬುಗಳನ್ನು ಅನಿವಾರ್ಯವಾಗಿ ಬಿಟ್ಟುಕೊಡಬೇಕಾಗಿದೆ ಎಂಬ ಅಂಶದ ಕಡೆ ಗಮನಿಸಲಾಗಿದ್ದು, ಅವರ ಬದಲಾದ ಕುಲಕಸುಬುಗಳ ಮೇಲೆ ಬೆಳಕು ಚೆಲ್ಲಲಾಗಿದೆ. ಸಾಂಪ್ರದಾಯಿಕ ಕಸುಬುಗಳಲ್ಲಿ ಕಾಡುಗೊಲ್ಲರ ಮೂಲ ಸಾಂಸ್ಕೃತಿಕ ನಾಯಕರಾದ ಕಾಟಯ್ಯ, ಚಿತ್ತಯ್ಯ, ಅಂಬೆರಾಯ, ತುಂಬೆರಾಯ, ಎತ್ತಪ್ಪ, ಜುಂಜಪ್ಪ, ವೀರ ಯರ್ರಣ್ಣ, ವೀರ ಕೆಂಪಣ್ಣ, ವೀರ ಮಿಂಚಣ್ಣ, ವೀರ ಸಾತಣ್ಣ ಮತ್ತು ವೀರ ನಾಗಪ್ಪ ಇವರುಗಳನ್ನು ಕುರಿತು ಚರ್ಚಿಸಲಾಗಿದೆ. ಕುರಿ ಸಾಕಾಣಿಕೆಯಲ್ಲಿನ ತೊಂದರೆಗಳ ಬಗ್ಗೆ, ಹಾಗೆಯೇ ಗೋಮಾಳಗಳು ನಶಿಸಿರುವ ಬಗ್ಗೆ, ನಶಿಸಿಹೋಗಲು ಜಾಗತೀಕರಣ ಹೇಗೆ ಸಾಧ್ಯ ಎಂಬ ವಿಷಯಗಳ ವಿಶ್ಲೇಷಿಸಲಾಗಿದೆ.

ಕಾಡುಗೊಲ್ಲರ ಮೇಲೆ ಜಾಗತೀಕರಣದ ಪ್ರಭಾವಗಳು ಎಂಬ ಅಧ್ಯಾಯದಲ್ಲಿ ಕಾಡುಗೊಲ್ಲರ ಬದಲಾದ ಆರ್ಥಿಕ ಸ್ಥಿತ್ಯಂತರಗಳು, ಬದುಕಿನ ಚಿತ್ರಣ, ಆಧುನಿಕ ಆರ್ಥಿಕತೆಯ ಉತ್ಪಾದಕತೆ ಹಾಗೂ ಅವರ ಜೀವನ ನಿರ್ವಹಣೆ ಮತ್ತು ಸ್ಥಿತ್ಯಂತರಗೊಂಡ ಆರ್ಥಿಕ ರೂಪಾಂತರಗಳು ಹಾಗೂ ಸಾಮಾಜಿಕ ಬದುಕಿನ ಮೇಲಾದಂತಹ ಜಾಗತೀಕರಣದ ಪ್ರಭಾವ ಮತ್ತು ಜಾಗತೀಕರಣದ ಧನಾತ್ಮಕ ಹಾಗೂ ಋಣಾತ್ಮಕ ಅಂಶಗಳ ಕುರಿತು ಚರ್ಚಿಸಲಾಗಿದೆ.

ಮಾನವನ ವಿಕಾಸದ ಜೊತೆಜೊತೆಗೆ ಸಮಾಜವು ನಿತ್ಯ ವಿಕಾಸದ ಪ್ರಕ್ರಿಯೆಗೆ ಒಳಗಾಗುತ್ತಲೇ ಬಂದಿದೆ. ಆ ಹಿನ್ನೆಲೆಯಲ್ಲಿ ಭಾರತೀಯ ಸಮಾಜವನ್ನು ಗ್ರಹಿಸಿದಾಗ ಹಲವಾರು ಬಾಹ್ಯ ಮತ್ತು ಆಂತರಿಕ ಆಕ್ರಮಣಗಳ ಫಲವಾಗಿ ಸ್ಥಿತ್ಯಂತರಕ್ಕೆ ಒಳಗಾಯಿತು. ಬಾಹ್ಯವಾಗಿ ಅರಬ್ಬರ, ಬ್ರಿಟಿಷರ, ಡಚ್ಚರ, ಪೋರ್ಚುಗೀಸರ ಮತ್ತು ಫ್ರೆಂಚರ ಆಕ್ರಮಣಗಳು ಭಾರತೀಯ ಸಮಾಜದ ಬುನಾದಿಯನ್ನೇ ಅಲುಗಾಡಿಸತೊಡಗಿದವು. ಇದರಿಂದ ಸಾಂಪ್ರದಾಯಿಕವಾಗಿದ್ದ ಪ್ರಬಲ ಮತ್ತು ದುರ್ಬಲರ ಹೋರಾಟಗಳು ಬಾಹ್ಯ ಆಕ್ರಮಣಗಳಿಂದ ತಲೆಕೆಳಗಾದ ಫಲಿತಗಳನ್ನು ನೀಡಿದವು. ಇದರಿಂದ ದುರ್ಬಲರು ಪ್ರಬಲರ ವಿರುದ್ಧ ಧ್ವನಿಯತ್ತಿ ತಮ್ಮ ಅಸ್ತಿತ್ವ ಮತ್ತು ಹಕ್ಕುಗಳ ಕುರಿತಾಗಿ ಧ್ವನಿ ಎತ್ತಿದ್ದರು. ಇದರ ಪರಿಣಾಮ ಧಾರ್ಮಿಕತೆಯ ಹೆಸರಿನಲ್ಲಿದ್ದ ಮೌಢ್ಯತೆಯಿಂದ ಕೂಡಿದ ಶೋಷಣೆಯ ವಿರುದ್ಧ ಬುದ್ಧಿಜೀವಿಗಳ ಹೋರಾಟ ಆರಂಭವಾಗಿ ಜಾಗತೀಕರಣ ಸಂದರ್ಭದಲ್ಲಿ ತಮ್ಮ ದೈವದ ತತ್ವ ಸಿದ್ಧಾಂತಗಳನ್ನು ರೂಪಿಸಿಕೊಂಡು ತಮ್ಮ ಸಮುದಾಯಗಳ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೊರಜಗತ್ತಿಗೆ ಅನಾವರಣ ಮಾಡಿ ತಮ್ಮ ಮುಂದಿರುವ ಸವಾಲುಗಳು ಮತ್ತು ಅದಕ್ಕೆ ಕಂಡುಕೊಳ್ಳಬಹುದಾದ ಪರಿಹಾರೋಪಾಯಗಳನ್ನು ಸಮುದಾಯದ ಒಳಗಿನ ಧ್ವನಿಗಳು ಮುನ್ನೆಲೆಗೆ ಬಂದು ಅಧ್ಯಯನಗಳನ್ನು ಆರಂಭಿಸತೊಡಗಿದರು. ಇದರ ಫಲವಾಗಿ ತಳಸಮುದಾಯಗಳ ಕುರಿತು ಅಧ್ಯಯನ ನಡೆಸಿ ನೀಡಿದ್ದ ಫಲಿತಗಳು ಸಮುದಾಯದವರೇ ಅಧ್ಯಯನ ನಡೆಸಿದಾಗ ಬಂದ ಫಲಿತಗಳು ವಿಭಿನ್ನವಾಗಿ ಕಂಡುಬಂದವು. ಯಾವಾಗಲೂ ತಳಸಮುದಾಯಗಳ ಅಧ್ಯಯನವು ಆ ಸಮುದಾಯಗಳನ್ನು ತೀರಾ ಹತ್ತಿರದಿಂದ ಬಲ್ಲವರು ಅಥವಾ ಆ ಸಮುದಾಯದ ಒಳಗಿನ ವ್ಯಕ್ತಿಗಳು ನಡೆಸಿದರೆ ಅದಕ್ಕೊಂದು ಪರಿಪೂರ್ಣವಾದ ಅರ್ಥ ಬರುತ್ತದೆ. ಅದೇ ರೀತಿಯಾಗಿ ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯ ಕುರಿತಾಗಿ ಹಲವಾರು ಅಧ್ಯಯನಗಳು ನಡೆದರೂ ಸಮುದಾಯ ನಿತ್ಯಪರಿವರ್ತನಶೀಲವಾಗಿರುವುದರಿಂದ ಈ ಸಮುದಾಯದಲ್ಲಿ ಜಾಗತೀಕರಣದ ಪ್ರಭಾವದ ಪರಿಣಾಮ ಅರಿಯಲು ಈ ಅಧ್ಯಯನ ಮಾಡಿ ಈ ಕೆಳಕಂಡ ಸತ್ಯಾಸತ್ಯತೆಗಳನ್ನು(ಫಲಿತಗಳನ್ನು) ಕಂಡುಕೊಳ್ಳಲಾಗಿದೆ.

ಸಮಾರೋಪದಲ್ಲಿ ಫಲಿತಗಳು ಹಾಗೂ ಪರಿಹಾರೋಪಾಯಗಳ ಕುರಿತು ಚರ್ಚಿಸಲಾಗಿದೆ.

**ಅಧ್ಯಯನದ ಫಲಿತಗಳು**

೧. ಕರ್ನಾಟಕ ಹಾಗೂ ಆಂಧ್ರದ ಗಡಿ ಭಾಗಗಳಲ್ಲಿ ವಾಸವಾಗಿರುವ ಕಾಡುಗೊಲ್ಲರು ಬುಡಕಟ್ಟು ಸಮುದಾಯಕ್ಕೆ ಸೇರಿದವರೆಂಬುದು ಅನೇಕ ಅಧ್ಯಯಗಳಿಂದ ತಿಳಿದುಬಂದಿರುವ ವಿಷಯ. ಆದರೂ ಸಹ ಭಾರತದಲ್ಲಿ ಇವರಿಗೆ ಪರಿಶಿಷ್ಟ ಪಂಗಡಕ್ಕೆ ಸೇರಿಸದೇ ಇರುವುದು ದುರದೃಷ್ಟಕರ ಸಂಗತಿ ಎಂದು ಹೇಳಬಹುದು. ಅದರಲ್ಲೂ ಕಾಡುಗೊಲ್ಲರು ಆಧುನೀಕರಣ, ನಗರೀಕರಣ ಹಾಗೂ ಜಾಗತೀಕರಣಗಳ ಪ್ರಭಾವಕ್ಕೆ ಸಿಲುಕಿದರೂ ಪರಂಪರಾನುಗತವಾಗಿ ಸಾಗಿಬಂದ ಆಚರಣೆ ಹಾಗೂ ಸಂಪ್ರದಾಯಗಳನ್ನು ಇಲ್ಲಿಯವರೆಗೂ ಉಳಿಸಿಕೊಂಡು ಬಂದಿರುವುದು ಕಂಡುಬಂದಿದೆ. ಕಾಡುಗೊಲ್ಲರ

ಮೂಲವೃತ್ತಿ ಪಶುಪಾಲನೆ ಎಂದು ಸಂಶೋಧನೆಯಿಂದ ತಿಳಿದು ಬಂದಿದೆ. ಮೊದಲು ಅಲೆಮರಿಗಳಾಗಿದ್ದು ಅನಂತರ ಅರೆ ಅಲೆಮಾರಿಗಳಾಗಿ ಈಗ ಒಂದು ಕಡೆ ನೆಲೆ ನಿಂತಿರುವುದು ಕಂಡುಬರುತ್ತದೆ. ಇವರು ವಾಸವಾಗಿರುವ ಪ್ರದೇಶಗಳು ಕಾಡು ಮೇಡು ಬೆಟ್ಟ ಗುಡ್ಡಗಳು ಕಾರಣ ಇವರಿಗೆ ಪಶುಪಾಲನೆಗಾಗಿ ಹುಲ್ಲು ಮೇವು ಅವಶ್ಯಕವಾಗಿತ್ತು. ಆದ್ದರಿಂದ ಇವರು ಈ ಪ್ರದೇಶಗಳಲ್ಲಿ ವಾಸವಾಗಿರುತ್ತಿದ್ದರು. ಆದರೆ ಜಾಗತೀಕರಣದ ಪ್ರಭಾವದಿಂದ ಇತ್ತೀಚೆಗೆ ಇವರು ಕೃಷಿ ಕಡೆ ವಾಲಿರುವುದು ಕಂಡುಬಂದಿರುತ್ತದೆ.

೨. ಕಾಡುಗೊಲ್ಲರ ಮೂಲದ ಬಗೆಗೆ ಹಲವಾರು ವಿದ್ವಾಂಸರು ಹಲವು ರೀತಿಯ ಅಭಿಪ್ರಾಯಗಳನ್ನು ಹೇಳಿದ್ದಾರೆ. ಕೆಲವರು ಕಾಡುಗೊಲ್ಲರು ಮೂಲತಃ ದೆಹಲಿಯವರು ಹಾಗೂ ಅಲ್ಲಿನ ರಾಜರ ದಬ್ಬಾಳಿಕೆಯನ್ನು ಸಹಿಸದೆ ಕರ್ನಾಟಕಕ್ಕೆ ವಲಸೆ ಬಂದರೆಂದು ಹೇಳುತ್ತಾರೆ. ಡಾ.ಮೀರಾಸಾಬಿಹಳ್ಳಿ ಶಿವಣ್ಣನವರು ಕಾಡುಗೊಲ್ಲರ ಮೂಲವನ್ನು ಆಂಧ್ರಪ್ರದೇಶವೆಂದು ಗುರುತಿಸುತ್ತಾರೆ. ಕಾಡುಗೊಲ್ಲರು ಮಾತನಾಡುವ ಭಾಷೆ ಹಾಗೂ ಜೀವನವಿಧಾನವನ್ನು ಗಮನಿಸಿದರೆ ಇವರು ಕನ್ನಡದ ಉಪಭಾಷೆಯನ್ನು ಹಾಗೂ ಉಪಸಂಸ್ಕೃತಿಯನ್ನು ಅನುಸರಿಸುತ್ತ ಬಂದಿರುವುದು ತಿಳಿದುಬಂದಿದೆ.

೩. ಕಾಡುಗೊಲ್ಲರು ಬುಡಕಟ್ಟು ಸಮುದಾಯವಾಗಿರುವ ಕಾರಣದಿಂದ ಬುಡಕಟ್ಟು ಸಂಸ್ಕೃತಿಗೆ ಅನುಗುಣವಾಗಿ ಅವರ ಆರಾಧನ ಪದ್ಧತಿಯು ಮುಂದುವರಿದುಕೊಂಡು ಬರುತ್ತಿದೆ. ಕಾಡುಗೊಲ್ಲರಿಗೆ ದೇವರುಗಳೆಂದರೆ ಅವರ ಸಾಂಸ್ಕೃತಿಕ ನಾಯಕರಾದ ಕಾಟಯ್ಯ, ಚಿತ್ತಯ್ಯ, ಎತ್ತಪ್ಪ ಹಾಗೂ ಜುಂಜಪ್ಪಗಳೇ ದೇವರುಗಳು. ಅವರು ರೂಪಿಸಿದ ಮೌಲ್ಯಗಳೇ ಇವರಿಗೆ ಆದರ್ಶಗಳಾಗಿವೆ. ಸಾಮಾನ್ಯವಾಗಿ ಇವರು ಪ್ರಕೃತಿ ಆರಾಧಕರು ಎಂಬುದನ್ನು ಸಹ ಮರೆಯುವಂತಿಲ್ಲ.

೪. ಕಾಡುಗೊಲ್ಲರು ನಾವು ಪವಿತ್ರರು ಎಂದು ಹೇಳುತ್ತಾ ಹಲವಾರು ಗೊಡ್ಡು ಸಂಪ್ರದಾಯಗಳನ್ನು ಅನುಸರಿಸುತ್ತಾ ಬಂದಿರುತ್ತಾರೆ. ಮೊದಲು ಪಶುಪಾಲಕರಾಗಿದ್ದ ಇವರು ಪಶುಗಳ ಒಂದು ನೆಲೆಯಿಂದ ಮತ್ತೊಂದು ನೆಲೆಗೆ ಹೋಗಬೇಕಾದ ಸಂದರ್ಭದಲ್ಲಿ ಋತುಮತಿಯಾದ ಹೆಣ್ಣುಮಕ್ಕಳನ್ನು ಹಾಗೂ ಬಾಣಂತಿಯರನ್ನು ಬಿಸಿಲು, ಮಳೆ ಹಾಗೂ ಕಾಡುಪ್ರಾಣಿಗಳಿಂದ ರಕ್ಷಿಸುವ ಸಲುವಾಗಿ ಗುಬ್ಬಗಳನ್ನು ಕಟ್ಟಿ ಪ್ರತ್ಯೇಕವಾಗಿಡಲು ರೂಢಿಸಿಕೊಂಡರು. ಇಂತಹ ಸಂಪ್ರದಾಯ ಹಾಗೆಯೇ ಮುಂದುವರಿದು ಇದು ಕಾಡುಗೊಲ್ಲರ ಕೆಟ್ಟ ಸಂಪ್ರದಾಯವಾಗಿ ಬೆಳೆಯಲು ಕಾರಣವಾಗಿರಬಹುದೆಂದು ಅಧ್ಯಯನದಿಂದ ತಿಳಿದುಬಂದಿದೆ. ಇಂತಹ ಗುಡಿಸಿಲುಗಳಿಗೆ ಹಸಿರು ಸೊಪ್ಪು ಅಂದರೆ ಹೊಂಗೆಯಂತಹ ಸೊಪ್ಪಿನಿಂದ ಗುಡಿಸಿಲು ನಿರ್ಮಿಸುತ್ತಿದ್ದದ್ದು ಕಾಣಬಹುದು. ಅಂದರೆ ಹೊಂಗೆ ಔಷಧಿ ಸ್ವರೂಪ ಹೊಂದಿರುವುದರಿಂದ ಇದನ್ನು ಬಳಸುತ್ತಿರಬಹುದು ಎನ್ನಬಹುದು.

೫. ಕಾಡುಗೊಲ್ಲರಲ್ಲಿ ಸಂಪ್ರದಾಯಬದ್ಧವಾದ ನ್ಯಾಯವ್ಯವಸ್ಥೆ ಇರುವುದು ತಿಳಿದುಬಂದಿದೆ. ಕಾಡುಗೊಲ್ಲರು ಬೆಡಗುಗಳಿಗೆ ಅನುಗುಣವಾಗಿ ಕಟ್ಟೆಮನೆಗಳು ಹಾಗೂ ಗುಡಿಕಟ್ಟೆಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆ. ಇವುಗಳೇ ನ್ಯಾಯ ತೀರ್ಮಾನ ಮಾಡುವ ಕೋರ್ಟುಗಳಾದವು. ಕಟ್ಟೆಮನೆಯ

ಮುಖ್ಯಸ್ಥನೇ ನ್ಯಾಯಾಧೀಶನಾಗಿ ನ್ಯಾಯದ ತೀರ್ಪನ್ನು ನೀಡುತ್ತಾನೆ. ಕಾಡುಗೊಲ್ಲರಲ್ಲಿ ಮೂರು ಕಟ್ಟೆಮನೆಗಳಿದ್ದು ಗುಡಿಕಟ್ಟುಗಳಲ್ಲಿ ಬಗೆಹರಿಯದ ನ್ಯಾಯಗಳನ್ನು ಕಟ್ಟೆಮನೆಗಳ ಮೂಲಕ ಬಗೆಹರಿಸಿಕೊಳ್ಳುತ್ತಾರೆ.

೬. ಕಾಡುಗೊಲ್ಲರ ಮೇಲೆ ಜಾಗತೀಕರಣದ ಪ್ರಭಾವವಾಗಿರುವುದರಿಂದ ಕಾಡುಗೊಲ್ಲರ ಕುಟುಂಬ ಅಂದರೆ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ವಿಭಕ್ತ ಕುಟುಂಬಗಳು ಏಕವ್ಯಕ್ತಿ ಕುಟುಂಬಗಳಾಗಿ ಬದಲಾವಣೆ ಹೊಂದಿರುವುದನ್ನು ಕಾಣಬಹುದು. ವಿವಾಹಪದ್ಧತಿಯಲ್ಲಿ ಬದಲಾವಣೆ, ಧಾರ್ಮಿಕ ಜೀವನದಲ್ಲಿ ಬದಲಾವಣೆ, ಶೈಕ್ಷಣಿಕ ಮಟ್ಟದಲ್ಲಿ ಸುಧಾರಣೆ ಮತ್ತು ಸಾಮಾಜಿಕ ಜೀವನದಲ್ಲಿ ಬದಲಾವಣೆ ಹೊಂದಿರುವುದು ಕಂಡುಬಂದಿದೆ.

೭. ಜಾಗತೀಕರಣದಿಂದಾಗಿ ಕಾಡುಗೊಲ್ಲರ ಬದುಕು ತನ್ನ ಜೀವಂತಿಕೆಯನ್ನು ಕಳೆದುಕೊಂಡಿದೆ. ಕಾಡುಗೊಲ್ಲರು ತಮ್ಮ ಹಟ್ಟಿಗಳಲ್ಲಿ ಹಾಡುತ್ತಿದ್ದ ಜಾನಪದ ಹಾಡುಗಳು, ಭಜನೆ ಪದಗಳು ಜನಪದ ಕಥೆಗಳು, ಕೋಲಾಟಗಳು, ದೇವರು ಮಾಡುವ ವಿಧಾನಗಳು ಬದಲಾದ ಸ್ವರೂಪದಲ್ಲಿ ತನ್ನ ಜೀವಂತಿಕೆಯನ್ನು ಕಳೆದುಕೊಂಡಿರುವುದು ಕಂಡುಬಂದಿದೆ. ಪ್ರತ್ಯೇಕ ಧರ್ಮವನ್ನು ಅನುಸರಿಸಿಕೊಂಡು ಬಂದಿರುವ ಕಾಡುಗೊಲ್ಲರು ಜಾಗತಿಕ ಧರ್ಮವಾದ ಕ್ರೈಸ್ತಧರ್ಮವನ್ನು ಕೆಲವರು ಅನುಸರಿಸುತ್ತಿರುವುದು ಕಂಡುಬಂದಿದೆ.

೮. ಪ್ರಾರಂಭದಲ್ಲಿ ಬೇಟೆಗಾರರಾಗಿದ್ದ ಕಾಡುಗೊಲ್ಲರು ಆನಂತರ ದನಗಾಹಿಗಳಾಗಿ ಪಶುಪಾಲನಾ ವೃತ್ತಿಯನ್ನು ಆರಂಭಿಸಿದರು. ಬಯಲು ಪ್ರದೇಶಗಳನ್ನು ಸರ್ಕಾರ ಹಾಗೂ ಶ್ರೀಮಂತರು ಆಕ್ರಮಿಸಿಕೊಡಿದ್ದರಿಂದ ಜಾಗತಿಕ ಪ್ರಪಂಚದಲ್ಲಿ ಬದುಕು ದುಸ್ತರವಾದಾಗ ಪಶುಪಾಲನೆಯಿಂದ ಲಾಭ ದೊರೆಯದಿದ್ದಾಗ ಕುರಿಗಾಹಿಗಳಾಗಿ ಪರಿವರ್ತನೆ ಹೊಂದಿದರು. ಕುರಿಗಾಹಿ ಬದುಕು ತುಂಬಾ ಕಷ್ಟಕರವಾದ್ದರಿಂದ ವಲಸೆ ಪ್ರವೃತ್ತಿಯು ನಿಂತುಹೋದುದರಿಂದ ಕುರಿ ಸಾಕುವುದು ಕಷ್ಟವೆನಿಸಿದಾಗ ವ್ಯವಸಾಯದ ಮೊರೆ ಹೋದರು. ಭಾರತದ ಕೃಷಿಯು ಮಳೆಯೊಂದಿಗೆ ಆಡುವ ಜೂಜಾಟವಾದ್ದರಿಂದ ಇದರಿಂದಲೂ ಲಾಭ ಬಾರದ ಕಾರಣ ವ್ಯಾಪಾರದಲ್ಲಿ ತೊಡಗಿಕೊಂಡಿರುವ ಅಂಶಗಳು ಈ ಅಧ್ಯಯನದಿಂದ ಬೆಳಕಿಗೆ ಬಂದಿದೆ.

೯. ಕಾಡುಗೊಲ್ಲರು ಒಂದು ಕಾಲದಲ್ಲಿ ಪ್ರಕೃತಿ ಮತ್ತು ಮಾತೃದೇವತಾ ಆರಾಧಕರಾಗಿದ್ದರು ಎಂಬುದಕ್ಕೆ ಅವರು ಆರಾಧನೆ ಮಾಡುವ ದೇವರುಗಳನ್ನು ಗಮನದಲ್ಲಿ ಇಟ್ಟುಕೊಂಡು ಹೇಳಬಹುದು. ಗೌರಸಂದ್ರ ಮಾರಮ್ಮ, ಬೇವಿನಹಳ್ಳಿ ಕರಿಯಮ್ಮ, ಕುಕ್ಕಡದಮ್ಮ ಹೀಗೆ ಇನ್ನೂ ಮುಂತಾದ ಮಾತೃದೇವತೆಗಳನ್ನು ಆರಾಧಿಸುತ್ತಾರೆ. ಕಾಡುಗೊಲ್ಲರು ಮಾತೃಪ್ರಧಾನ ಕುಟುಂಬವ್ಯವಸ್ಥೆಯಿಂದ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಕಡೆಗೆ ಪರಿವರ್ತನೆ ಹೊಂದಿದಂತೆ ಮಾತೃಪ್ರಧಾನದಿಂದ ಪಿತೃಪ್ರಧಾನದ ಕಡೆಗೆ ಆವರಿಸಿಕೊಳ್ಳತೊಡಗಿದರು.

೧೦. ಕರ್ನಾಟಕದಲ್ಲಿ ಕಾಡುಗೊಲ್ಲ ಸಮುದಾಯದವರು ಊರಿನಿಂದ ಹೊರಗೆ ಹಟ್ಟಿ ನಿರ್ಮಿಸಿಕೊಂಡು ವಾಸಿಸುತ್ತಿದ್ದಾರೆ. ಕುರಿ ಸಾಕಾಣಿಕೆ, ಪಶುಸಂಗೋಪನೆ ಕ್ರಮೇಣವಾಗಿ ಕಡಿಮೆಯಾಗುತ್ತಿದೆ. ಕೃಷಿಕೂಲಿ, ಸಣ್ಣರೈತರು ಕೃಷಿಯ ಸಮಸ್ಯೆಗಳಿಂದಾಗಿ ಇವುಗಳಿಂದ ದೂರ ಸರಿದು ನಗರಗಳತ್ತ ಕೂಲಿಗಾಗಿ ತೆರಳುತ್ತಿದ್ದಾರೆ. ಆರ್ಥಿಕವಾಗಿ ದುರ್ಬಲರಾಗಿದ್ದು ಬಡತನ ರೇಖೆಗಿಂತ ಕೆಳಗೆ ವಾಸಿಸುವವರ ಪ್ರಮಾಣ ಹೆಚ್ಚಾಗಿದೆ ಮತ್ತು ಶಿಕ್ಷಣಕ್ಕೆ ಸಂಬಂಧಿಸಿದಂತೆ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣವನ್ನು ರಾಜ್ಯ ಸರಾಸರಿ ಸಾಕ್ಷರತೆ ಪ್ರಮಾಣಕ್ಕಿಂತ ಕಡಿಮೆ ಮಟ್ಟವನ್ನು ಹೊಂದಿದ್ದಾರೆ. ಆಧುನಿಕತೆ ಸಂದರ್ಭದಲ್ಲೂ ಸಹ ಹೆರಿಗೆ, ಮುಟ್ಟು ಮುಂತಾದ ಸಂದರ್ಭಗಳಲ್ಲಿ ಈ ಸಮುದಾಯದ ಮಹಿಳೆಯರ ಸ್ಥಿತಿ ಶೋಚನೀಯವಾಗಿದೆ. ಸರ್ಕಾರದ ಸೌಲಭ್ಯಗಳನ್ನು ಪಡೆಯುವಲ್ಲಿ ಸಂಪೂರ್ಣ ವಿಫಲರಾಗಿದ್ದಾರೆ. ರಾಜಕೀಯ ಕ್ಷೇತ್ರದಲ್ಲಿ ಇವರ ಭಾಗವಹಿಸುವಿಕೆ ತೀರಾ ಕಡಿಮೆ. ಇತ್ತೀಚಿನ ದಿನಗಳಲ್ಲಿ ಗ್ರಾಮಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಚುನಾವಣೆಗಳಲ್ಲಿ ಅಲ್ಪಪ್ರಮಾಣದಲ್ಲಿ ಭಾಗವಹಿಸುತ್ತಿದ್ದರೂ ವಿಧಾನಸಭಾ ಮತ್ತು ಲೋಕಸಭಾ ಚುನಾವಣೆಗಳಲ್ಲಿ ಇವರ ಭಾಗವಹಿಸುವಿಕೆ ಬೆರಣಿಕೆಯಷ್ಟು ಮಾತ್ರ. ಉನ್ನತ ಶಿಕ್ಷಣದಿಂದ ವಂಚಿತರಾಗಿರುವ ಇವರು ಸರ್ಕಾರಿ ಹುದ್ದೆಗಳಲ್ಲಿ ತುಂಬಾ ಕಡಿಮೆ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ಕಾಡುಗೊಲ್ಲರ ಹಟ್ಟಿಗಳಲ್ಲಿ ನಿರ್ಮಾಣಗೊಂಡಿರುವ ಜನವಸತಿ ಪ್ರದೇಶಗಳು ಗಾಳಿ, ಬೆಳಕು, ಶುದ್ಧ ಕುಡಿಯುವ ನೀರು, ಶೌಚಾಲಯಗಳು ಹಾಗೂ ಮೂಲಭೂತ ಸೌಕರ್ಯಗಳು ಕೊರತೆಯಿಂದ ಕೂಡಿವೆ.

**ಪರಿಹಾರೋಪಾಯಗಳು**

೧. ಬುಡಕಟ್ಟಿನ ಎಲ್ಲಾ ಲಕ್ಷಣಗಳನ್ನು ಹೊಂದಿರುವ ಕಾಡುಗೊಲ್ಲ ಸಮುದಾಯವನ್ನು ಬುಡಕಟ್ಟು ಪಟ್ಟಿಗೆ ಸೇರಿಸಬೇಕು. ಸಮಾಜದ ಮುಖ್ಯವಾಹಿನಿಯಿಂದ ದೂರವಿರುವ ಇವರ ಹಟ್ಟಿಗಳಲ್ಲಿ ಪೂರ್ವ ಪ್ರಾಥಮಿಕ, ನರ್ಸರಿ, ಅಂಗನವಾಡಿ ಕೇಂದ್ರಗಳನ್ನು ಆರಂಭಿಸಬೇಕು. ಶಾಲಾ ಕಾಲೇಜು ಮತ್ತು ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಕಾಡುಗೊಲ್ಲ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹಿಸಬೇಕು.

೨. ಮೂಲಭೂತ ಸೌಲಭ್ಯಗಳ ಕೊರತೆಯಿಂದ ಜೀವಿಸುತ್ತಿರುವ ಇವರ ಹಟ್ಟಿಗಳನ್ನು ಕಂದಾಯ ಗ್ರಾಮಗಳನ್ನಾಗಿ ಸರ್ಕಾರ ಘೋಷಿಸಬೇಕು. ಈ ಸಮುದಾಯದ ಅಭಿವೃದ್ಧಿಗಾಗಿ ಪ್ರತ್ಯೇಕ ಕಾಡುಗೊಲ್ಲ ಅಭಿವೃದ್ಧಿ ಪ್ರಾಧಿಕಾರವನ್ನು ಆರಂಭಿಸಬೇಕು. ರಾಜಕೀಯವಾಗಿ ಇವರ ಭಾಗವಹಿಸುವಿಕೆ ನಗಣ್ಯವಾಗಿರುವುದರಿಂದ ರಾಜಕೀಯ ಮೀಸಲಾತಿ ಸೌಲಭ್ಯಗಳನ್ನು ನೀಡಬೇಕು.

೩. ಆರ್ಥಿಕವಾಗಿ ದುರ್ಬಲವಾಗಿರುವ ಹಾಗೂ ಸಾಮಾಜಿಕ ಅನಿಷ್ಟ ಪದ್ಧತಿಗಳಿಗೆ ಸಂಬಂಧಿಸಿದಂತೆ ಇವರ ಹಟ್ಟಿಗಳಲ್ಲಿ ಮಹಿಳಾ ಸಬಲೀಕರಣದಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಸೂತಕದ ಆಚರಣೆಗಳು ವ್ಯಾಪಕವಾಗಿರುವ ಈ ಸಮುದಾಯದವರಲ್ಲಿ ಜಾಗೃತಿಯನ್ನು ಮೂಡಿಸಿ ಅವುಗಳ ಆಚರಣೆಯನ್ನು ಬಿಡುವಂತೆ ಮನವೊಲಿಸಬೇಕು.

೪. ಈ ಸಮುದಾಯದ ಸಮಗ್ರ ಅಭಿವೃದ್ಧಿಗಾಗಿ ಸರ್ಕಾರೇತರ ಸಂಸ್ಥೆಗಳ ಮೂಲಕ ನಿರಂತರ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಸ್ವ-ಸಹಾಯ ಸಂಘಗಳ ಮೂಲಕ ಸಾಲ ಸೌಲಭ್ಯಗಳನ್ನು ನೀಡಿ ಮಹಿಳಾ ಅಭಿವೃದ್ಧಿಗೆ ಸಹಕರಿಸಬೇಕು.

೫. ಜಾಗತೀಕರಣದ ಹಿನ್ನೆಲೆಯಲ್ಲಿ ಈ ಸಮುದಾಯದವರು ತಲ-ತಲಾಂತರದಿಂದ ಉಳಿಸಿಕೊಂಡು ಬಂದಂತಹ ಜನಪದ ಸಂಸ್ಕೃತಿಯನ್ನು ಉಳಿಸಿಕೊಳ್ಳುವತ್ತ ಸರ್ಕಾರ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕು.

೬. ಉನ್ನತ ಶಿಕ್ಷಣ, ತಾಂತ್ರಿಕ ಶಿಕ್ಷಣದಿಂದ ದೂರವಿರುವ ಇವರಿಗೆ ಇಲ್ಲಿ ಮೀಸಲಾತಿ ಸೌಲಭ್ಯಗಳನ್ನು ವಿಸ್ತರಿಸಬೇಕು.

೭. ಪಶುಸಂಗೋಪನೆ ಮತ್ತು ಕುರಿ ಸಾಕಾಣಿಕೆ ಇಲಾಖೆಗಳ ಮೂಲಕ ಇವರಿಗೆ ವಿಶೇಷ ಸೌಲಭ್ಯಗಳನ್ನು ನೀಡಬೇಕು.

೮. ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಹೆಚ್ಚಿಸಬೇಕು.

೯. ಅಪೌಷ್ಟಿಕತೆಯಿಂದ ನರಳುತ್ತಿರುವ ಈ ಸಮುದಾಯದ ಮಕ್ಕಳಿಗೆ ಪೌಷ್ಟಿಕ ಆಹಾರ ವಿತರಣಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕು.

೧೦. ಈ ಸಮುದಾಯದ ಗರ್ಭಿಣಿಯರು, ಬಾಣಂತಿಯರು ಮತ್ತು ನವಜಾತ ಶಿಶುಗಳು ಹೆಚ್ಚಿನ ಪ್ರಮಾಣದಲ್ಲಿ ಮರಣವನ್ನಪ್ಪುತ್ತಿದ್ದು ಆರೋಗ್ಯ ಸೌಲಭ್ಯವನ್ನು ಹೆಚ್ಚಿಸಿ ಆರೋಗ್ಯ ಜಾಗೃತಿ ಶಿಬಿರಗಳನ್ನು ಹಮ್ಮಿಕೊಳ್ಳಬೇಕು.

ಬುಡಕಟ್ಟು ಸಂಸ್ಕೃತಿಯ ಕಾಡುಗೊಲ್ಲರು ಆಚರಿಸುವಂತಹ ಆಚರಣೆಗಳು ವಂಶಪಾರಂಪರ್ಯವಾಗಿ ಮುಂದುವರಿದುಕೊಂಡು ಬರುತ್ತಿದ್ದು ಈ ಸಮುದಾಯದಲ್ಲಿ ದೈವತ್ವದ ಮೇಲೆ ನಂಬಿಕೆ ಉಳ್ಳವರಾಗಿದ್ದು ತಮ್ಮ ಕುಟುಂಬಗಳಲ್ಲಿ ನಡೆಯುವ ಎಲ್ಲಾ ಕೆಲಸ ಕಾರ್ಯಗಳಿಗೂ ದೇವರುಗಳಲ್ಲಿ ಹೆಚ್ಚಿನ ನಂಬಿಕೆ ಹೊಂದುವುದರ ಮೂಲಕ ದೇವರುಗಳ ಮೊರೆ ಹೋಗುತ್ತಾರೆ. ಈ ಜನಾಂಗದಲ್ಲಿ ಹೆತ್ತಸೂತಕ, ಋತುಸೂತಕ, ಸತ್ತಸೂತಕ, ಕೆಟ್ಟಸೂತಕ ಹೀಗೆ ಹಲವಾರು ರೀತಿಯ ಮಡಿ-ಮೈಲಿಗೆಯ ಆಚರಣೆಗಳಿದ್ದು ಇಂದಿಗೂ ಸಹ ಜೀವಂತವಾಗಿವೆ. ಇವರು ಆಚರಿಸುವ ಹಬ್ಬ ಮತ್ತು ಮದುವೆಯ ಪದ್ಧತಿಗಳು ಕಟ್ಟುನಿಟ್ಟಾದ ನಿಯಮಗಳನ್ನು ಒಳಗೊಂಡಿದ್ದು ಈ ಪ್ರಕಾರವಾಗಿಯೇ ನಡೆದುಕೊಳ್ಳಬೇಕಾಗಿದೆ. ಈ ಎಲ್ಲಾ ಅಂಶಗಳ ಪ್ರಭಾವದಿಂದಾಗಿ ಇವರ ಹಟ್ಟಿಗಳು ನಗರಗಳಿಂದ ಬಹುದೂರ ಉಳಿದಿದ್ದು ನಗರಸಂಸ್ಕೃತಿಯು ಹಟ್ಟಿಸಂಸ್ಕೃತಿಗೆ ಧಕ್ಕೆಯನ್ನುಂಟು ಮಾಡುತ್ತದೆ ಎಂಬ ಭಾವನೆಯು ಇವರದ್ದಾಗಿದೆ. ಒಟ್ಟಾರೆಯಾಗಿ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ, ರಾಜಕೀಯ ಕ್ಷೇತ್ರಗಳಲ್ಲಿ ತುಂಬಾ ಹಿಂದುಳಿದಿದ್ದು ಆಧುನಿಕ ಜಗತ್ತಿನ ಪರಿಕಲ್ಪನೆಗಳಾದ ಆಧುನೀಕರಣ, ಜಾಗತೀಕರಣ, ಕೈಗಾರಿಕರಣ, ಖಾಸಗೀಕರಣ, ನಗರೀಕರಣ ಈ ಪರಿಣಾಮವು ಹೆಚ್ಚಿನದಾಗಿ ಈ ಜನಾಂಗದ ಮೇಲೆ ಆಗಿಲ್ಲ. ಆಧುನಿಕತೆಯ ಪರಿಕಲ್ಪನೆಗಳಿಂದ ಬಹು ದೂರ ಉಳಿದಿರುವ ಈ ಜನಾಂಗವನ್ನು ಸರ್ಕಾರಗಳು

ಗುರುತಿಸದೆ ಇರುವುದರ ಮೂಲಕ ಅರಣ್ಯರೋದನ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಈ ಜನಾಂಗಕ್ಕೆ ಸಂವಿಧಾನಬದ್ಧ ನ್ಯಾಯದ ಮಾನದಂಡಗಳನ್ನು ಅನುಸರಿಸುವ ಮೂಲಕ ಮೀಸಲಾತಿಯ ಅರ್ಹತೆಯನ್ನು ಹೊಂದಿರುತ್ತಾರೆ. ಬುಡಕಟ್ಟು ಜನಾಂಗವಾದ ಕಾಡುಗೊಲ್ಲ ಸಮುದಾಯಕ್ಕೆ ಸೂಕ್ತ ರೀತಿಯ ಸ್ಥಾನಮಾನಗಳನ್ನು ನೀಡುವ ಮೂಲಕ ಸಮಾಜದ ಮುಖ್ಯವಾಹಿನಿಗೆ ತರಬೇಕಾದ ಕೆಲಸ ತುಂಬಾ ಮಹತ್ವದ್ದಾಗಿದೆ.

# ಪರಾಮರ್ಶನ ಗ್ರಂಥಗಳು


೧. ಅನೀಕಿನ್ ಎ.ವಿ. ರಾಜಕೀಯ ಅರ್ಥಶಾಸ್ತ್ರದ ತಾರುಣ್ಯ, ಪ್ರಸ್ತಾವನೆ, ಪ್ರಗತಿ ಪ್ರಕಾಶನ ಮಾಸ್ಕೋ, ಪು೭. ೧೯೮೨.

೨. ಅಂಬಳಿಕೆ ಹಿರಿಯಣ್ಣ, ಕಾಡುಗೊಲ್ಲರ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೮.

೩. ಅಂಬೇಡ್ಕರ್, ಅಂಬೇಡ್ಕರ್ ಬರೆಹಗಳು ಮತ್ತು ಭಾಷಣಗಳು, ಸಂ.೫, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. ೨೦೦೫

೪. ಆನಂದ ಮೂರ್ತಿ.ಜಿ.ವಿ., ಕೃತಿಕನ್ನಡಿ, ಪಟೇಲ್ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೬.

೫. ಇಂದಿರಾ.ಆರ್., ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೬. ಎಚ್ಚಾರ್ಕೆ, ಭಾರತದ ಆರ್ಥಿಕ ವ್ಯವಸ್ಥೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೭.

೭. ಒಡೆಯರ್ ಡಿ. ಹೆಗ್ಗಡೆ, ಎನ್. ಅನ್ನಪೂರ್ಣೇಶ್ವರಿ, ಮಹಿಳಾ ಅಧ್ಯಯನಗಳು ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು, ೨೦೦೩.

೮. ಕಾಳೇಗೌಡ ನಾಗವಾರ ಮತ್ತು ಎನ್. ಹುಚ್ಚಪ್ಪ ಮಾಸ್ತರ್, ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦.

೯. ಕಾಳೇಗೌಡ ನಾಗವಾರ, ಕಾಡುಗೊಲ್ಲರ ಹಟ್ಟಿಯೊಂದರ ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ೧೯೭೫.

೧೦. ಕಾಳೇಗೌಡ ನಾಗವಾರ, ಕಾಡುಗೊಲ್ಲರ ಜಾನಪದ: ಒಂದು ಅಧ್ಯಯನ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ, ೧೯೮೪.

೧೧. ಕಿಕ್ಕೇರಿ ನಾರಾಯಣ, ಬುಡಕಟ್ಟು ಸಂಸ್ಕೃತಿ, ಅರುಹು ಕುರುಹು, ಪ್ರಕಾಶನ, ಮೈಸೂರು, ೨೦೧೧.

೧೨. ಕೃಷ್ಣಮೂರ್ತಿ ಎಚ್.ಆರ್., ಆರ್ಥಿಕ ಚಿಂತನೆ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬.

೧೩. ಕೃಷ್ಣಮೂರ್ತಿ ಎಚ್.ಆರ್., ಅಭಿವೃದ್ಧಿ ಅರ್ಥಶಾಸ್ತ್ರ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬.

೧೪. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡಮಿ ಬೆಂಗಳೂರು, ೧೯೮೩.

೧೫. ಕೃಷ್ಣಮೂರ್ತಿ ಹನೂರು, ಕಾಡುಗೊಲ್ಲರು, ಲಕ್ಕಪ್ಪಗೌಡ. ಎಚ್.ಜೆ. (ಸಂ); ಕರ್ನಾಟಕದ ಬುಡಕಟ್ಟುಗಳು, ಸಂಪುಟ–೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ, ಬೆಂಗಳುರು, ೧೯೯೮.

೧೬. ಕೃಷ್ಣಮೂರ್ತಿ ಹೆಚ್.ಆರ್., ವೀರಪ್ಪಗೌಡ ಹೆಚ್.ಸಿ., ಅಭಿವೃದ್ಧಿ ಅರ್ಥಶಾಸ್ತ್ರ, ಎಸ್.ಬಿ.ಎಸ್. ಪಬ್ಲಿಷರ್ಸ್, ಬೆಂಗಳೂರು, ೨೦೦೫,

೧೭. ಕೇಶವನ್ ಪ್ರಸಾದ್.ಕೆ. ಬಂಡೆ ಬೆಸ್ತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೧೦.

೧೮. ಕೇಶವನ್ ಪ್ರಸಾದ್ ಕೆ. ಸೋಲಿಗರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೧೧.

೧೯. ಕೊಸಾಂಬಿ ಡಿ.ಡಿ., ಪ್ರಾಚೀನ ಭಾರತದ ಚರಿತ್ರೆ,(ಮೂಲ), ಕೆ.ಬಾಲಗೋಪಾಲ್. ಎಚ್.ಎಸ್. ಶ್ರೀಮತಿ, ಬೆಳ್ಳಿ ಚುಕ್ಕಿ ಪುಸ್ತಕಾಲಯ, ಬೆಂಗಳೂರು, ೧೯೯೮.

೨೦. ಗಾಯಿತ್ರಿ ಎನ್., ಮಹಿಳೆ ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು ೧೯೯೧.

೨೧. ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾ ದರ್ಶಿನಿ, ರೇಖಾ ಪ್ರಕಾಶನ, ದಾವಣಗೆರೆ, ೧೯೯೧.

೨೨. ಗುರುಲಿಂಗಯ್ಯ ಎಂ., ಕರ್ನಾಟಕದ ಗೊಲ್ಲ ಸಮುದಾಯ, ಶಕ್ತಿ ಪ್ರಿಂಟರ್ಸ್ ಆ್ಯಂಡ್ ಪಬ್ಲಿಷರ್ಸ್, ಬೆಂಗಳೂರು, ೨೦೦೫.

೨೩. ಗುರುಲಿಂಗಯ್ಯ ಎಂ. ಬುಡಕಟ್ಟುಗಳು ಮತ್ತು ಅಭಿವೃದ್ಧಿ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು, ೨೦೦೫.

೨೪. ಗುರುಲಿಂಗಯ್ಯ ಎಂ., ವಿ. ನಾಗಪ್ಪ, ಕಾಡುಗೊಲ್ಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೪.

೨೫. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ, ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೨೬. ಗಂಗಾಧರ ದೈವಜ್ಞ, ಗೊಂದಲಿಗರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨೭. ಗಂಗಾಧರ ದೈವಜ್ಞ, ಸಣ್ಣಾಟಗಳು ಹುಟ್ಟು ಬೆಳವಣಿಗೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೨೮. ಚಲುವರಾಜು (ಸಂ), ಜುಂಜಪ್ಪ, ಕರ್ನಾಟಕ ವಿಶ್ವವಿದ್ಯಾಲಯ, ಹಂಪಿ, ೧೯೯೭.

೨೯. ಚಲುವರಾಜು, ದಕ್ಕಲರ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ಸಾಹಿತ್ಯ ಅಕಾಡಮಿ, ಬೆಂಗಳೂರು, ೧೯೯೯.

೩೦. ಚಲುವರಾಜು, ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೩೧. ಚಂದ್ರ ಪೂಜಾರ ಎಂ., ದೇಶೀಯತೆಯ ನೆರಳಿನಲ್ಲಿ ವಿಕೇಂದ್ರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೧.

೩೨. ಚಂದ್ರ ಪೂಜಾರ. ಎಂ.,ಅಭಿವೃದ್ದಿ ಮತ್ತು ಚುನಾವಣೆಯ ಗೆಲುವು, ವಿ.ಕ.೨೦೦೩.

೩೩. ಚಂದ್ರಶೇಖರ್ ಟಿ.ಆರ್., ಅಮರ್ತ್ಯಸೇನ್‌ರ ಅಭಿವೃದ್ದಿ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩೪. ಚಂದ್ರಪೂಜಾರಿ.ಎಂ, ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟು ಅಭಿವೃದ್ಧಿ, ಆದಿವಾಸಿ ಆಖ್ಯಾನ, ಪುಟ, ೪೭೭. ಸಂ.ಪ್ರಭಾಕರ ಎ.ಎಸ್.

೩೫. ಚಂದ್ರಶೇಖರ್ ಟಿ.ಆರ್., ಕರ್ನಾಟಕ ಅಭಿವೃದ್ದಿಯ ಸಾಮಾಜಿಕ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೩೬. ಚಂದ್ರಶೇಖರ್ ಟಿ.ಆರ್., ಮಹಿಳೆ, ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೩೭. ಚಂದ್ರಶೇಖರ್ ಟಿ.ಆರ್., ಅಮರ್ತ್ಯಸೇನ್‌ರ ಅಭಿವೃದ್ಧಿ ಅಧ್ಯಯಗಳು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೨೦೦೩.

೩೮. ಚಂದ್ರಶೇಖರ್ ಟಿ.ಆರ್., ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೩೯. ಚಂದ್ರಶೇಖರ. ಟಿ.ಆರ್, ಕರ್ನಾಟಕ ಅಭಿವೃದ್ಧಿ ಆಕೃತಿ, ಪಲ್ಲವ ಪ್ರಕಾಶನ, ಚನ್ನಪಟಣ, ಬಳ್ಳಾರಿ ಜಿಲ್ಲೆ. ೨೦೦೯.

೪೦. ಚಿಕ್ಕಣ್ಣ ಎಣ್ಣೇಕಟ್ಟೆ, ವೀರಜುಂಜಪ್ಪ ಸಮಗ್ರ ಕಥಾವಳಿ,ಗಡಿನಾಡ ಜಾನಪದ ಸಂಪರ್ಕಾಭಿವೃದ್ಧಿಕೇಂದ್ರ ಪ್ರತಿಷ್ಠಾನ, ತುಮಕೂರು ಜಿಲ್ಲೆ, ೨೦೧೧.

೪೧. ದೇವಿ ಪ್ರಸಾದ್ ಚಟ್ಟೋಪಾಧ್ಯ(ಮೂಲ), ಜಿ. ಕುಮಾರಪ್ಪ(ಅನು), ೧೯೯೬, ಮಾತೆಯರು ಮಾನ್ಯರಾಗಿದ್ದಾಗ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೭.

೪೨. ಚಿತ್ರಲಿಂಗಯ್ಯ ಡಿ.ಸಿ., ಈಳ್ಳೇವು, ಸಂವಹನ ಪ್ರಕಾಶನ, ಮೈಸೂರು, ೨೦೧೭.

೪೩. ಜಯರಾಮ ಕೆ., ಅಲೆಮಾರಿ ಕಾಡುಗೊಲ್ಲರ ಅಭಿವೃದ್ಧಿ ಅಧ್ಯಯನ, ಅಪ್ರಕಟಿತ ಎಂ.ಫಿಲ್.ಪ್ರಬಂಧ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೮.

೪೪. ನಾಗೇಶ್ ಹೆಗಡೆ. ಅಭಿವೃದ್ಧಿಯ ಅಂಧ ಯುಗ, ಭೂಮಿ ಬುಕ್ಸ್, ಬೆಂಗಳೂರು, ೨೦೧೦.

೪೫. ನಾಗರಾಜು ಬಿ.ವಿ., ಗೊಲ್ಲರಹಟ್ಟಿ, ಆಪ್ತ ಪ್ರಕಾಶನ, ಕೈಗಾರಿಕಾ ನಗರ, ಬೆಂಗಳೂರು, ೧೯೯೮.

೪೬. ನಾಗರಾಜು ಬಿ.ವಿ., ಪಾಂಚಾಲಿ, ಆಪ್ತ ಪ್ರಕಾಶನ, ಕೈಗಾರಿಕಾ ನಗರ, ಬೆಂಗಳೂರು, ೧೯೯೧.

೪೭. ನಾಗರಾಜ್ ಪಿ., ಹಿರಿಯೂರು ತಾಲ್ಲೂಕಿನ ಕಾಡುಗೊಲ್ಲರು: ಒಂದು ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ, ೨೦೧೦.

೪೮. ನೇಗಿನಹಾಳ ಎಂ.ಬಿ., ಗೊಲ್ಲಜನಾಂಗದ ಕೆಲವು ಟಿಪ್ಪಣಿಗಳು, ಸತ್ಯಶುದ್ಧಕಾಯಕ, ಮುರುಘಾಮಠ ಚಿತ್ರದುರ್ಗ, ೧೯೯೧.

೪೯. ನಾಗರಾಜಪ್ಪ ಬಾಗೂರು, ಹೊಸದುರ್ಗ ಸೀಮೆ ಜಾನಪದ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.

೫೦. ಪಾರ್ವತಮ್ಮ ಸಿ, ಆದಿವಾಸಿ ಸಮುದಾಯಗಳ ಅಭಿವೃದ್ಧಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೫೧. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ದಿ ಪಾರ್ಕರ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು, ೧೯೨೪.

೫೨. ಪ್ರಭಾಕರ ಶಿಶಿಲ, ಅಭಿವೃದ್ಧಿ ಮತ್ತು ಯೋಜನಾ ಅರ್ಥಶಾಸ್ತ್ರ, ಕಲಾ ಪ್ರಕಾಶನ ಬೆಂಗಳೂರು, ೧೯೯೭.

೫೩. ಪ್ರಭಾಕರ ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪,

೫೪. ಪ್ರಭಾಕರ ಎ.ಎಸ್.,(ಸಂ), ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ., ೨೦೦೪.

೫೫. ಪ್ರಭಾಕರ ಎ.ಎಸ್.,(ಸಂ), ಆದಿವಾಸಿ ಆಖ್ಯಾನ,(ಸಮುದಾಯ ಅಧ್ಯಯನಕ್ಕೊಂದು ಅಕರ), ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೮, (ಪ್ರಮು, ೨೦೦೬)

೫೬. ಪ್ರಭಾಕರ ಎ.ಎಸ್., ಅಲೆಮಾರಿಗಳ ಶಾಪಗ್ರಸ್ತ ಪಯಣ, ಬುಡಕಟ್ಟು ಅಧ್ಯಯನ ಸಂ–೧, ೨ ಮತ್ತು ೩ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೭. ಪ್ರಭಾಕರ ಎ.ಎಸ್., ಮತ್ತು ಶ್ರೀಪಾದ ಶೆಟ್ಟಿ, ಲೋಹಿಯ ವರ್ತಮಾನದ ಮುಖಾಮುಖಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ೨೦೧೭.

೫೮. ಪ್ರಶಾಂತ್ ಎಚ್.ಡಿ.,(ಸಂ), ಜನಸಮುದಾಯ ಸಂಪುಟ ಹಂಪಿ, ಕನ್ನಡವಿಶ್ವವಿದ್ಯಾಲಯ, ೨೦೦೦.

೫೯. ಪ್ರೇಮ ಜಿ.ಕೆ., ಜನ್ನಿಗೆ, ಶ್ರೀ ಅನ್ನಪೂರ್ಣ ಪ್ರಕಾಶನ, ಬೆಂಗಳೂರು, ೨೦೧೩.

೬೦. ಪ್ರಸನ್ನ, ದೇಶಿ ಜೀವನ ಪದ್ಧತಿ, ಒಂಟಿ ಧ್ವನಿ ಪ್ರಕಾಶನ ಸಾಗರ, ೨೦೦೫.

೬೧. ಫ್ರೆಡರಿಕ್ ಎಂಗೆಲ್ಸ್, ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ(ಲುಹಿ ಎಚ್ ಮಾರ್ಗನ್‌ರ ಪರಿಶೋಧನೆಗಳ ಬೆಳಕಿನಲ್ಲಿ (ಅನು) ಕೆ.ಎಲ್.ಗೋಪಾಲಕೃಷ್ಣರಾವ್, ಪ್ರಗತಿ ಪ್ರಕಾಶನ, ಮಾಸ್ಕೋ, ೧೯೮೦.

೬೨. ಬಸವ ಕೆ.ಡಿ., ಆಧುನಿಕ ಅರ್ಥಶಾಸ್ತ್ರ, ವಿದ್ಯಾವಾಹಿನಿ ಪ್ರಕಾಶನ, ಹುಬ್ಬಳ್ಳಿ, ೧೯೮೫.

೬೩. ಬಾಲಗುರುಮೂರ್ತಿ, ಬುಡ್ಗನಾದ, ಅಲೆಮಾರಿ ಪ್ರಕಾಶನ, ಬೆಂಗಳೂರು, ೨೦೧೦.

೬೪. ಬೋರಲಿಂಗಯ್ಯ ಹಿ.ಚಿ., ಮತ್ತು ಪ್ರಭಾಕರ ಎ.ಎಸ್.,(ಸಂ), ಬುಡಕಟ್ಟು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೬೫. ಬೋರಲಿಂಗಯ್ಯ ಹಿ.ಚಿ., ಗಿರಿಜನ ನಾಡಿಗೆ ಪಯಣ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೬೬. ಬೋರಲಿಂಗಯ್ಯ ಹಿ.ಚಿ., ಮತ್ತು ಪ್ರಭಾಕರ ಎ.ಎಸ್., (ಸಂ), ಅರ್ಧವಾರ್ಷಿಕ ಅಧ್ಯಯನ, ಬುಡಕಟ್ಟು ಅಧ್ಯಯನ ಸಂ–೧, ೨, ಮತ್ತು ೩, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೭. ಬೋರಲಿಂಗಯ್ಯ ಹಿ.ಚಿ., ಕಾಡು ಕಾಂಕ್ರೀಟ್ ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೫.

೬೮. ಬೋರಲಿಂಗಯ್ಯ ಹಿ.ಚಿ., ವಿಸ್ಮೃತಿ ಮತ್ತು ಸಂಸ್ಕೃತಿ, ಸಿ.ವಿ.ಜಿ.ಪ್ರಕಾಶನ, ಬೆಂಗಳೂರು, ಪು. ೧೮–೧೯, ೨೦೦೪.

೬೯. ಮಹದೇವ ಶಾಸ್ತ್ರಿ, ಯಾದವರ ಕೈಪಿಡಿ, ಕೊಡಗನೂರು ಮುದ್ರಣಾಲಯ, ದಾವಣಗೆರೆ, ೧೯೪೦.

೭೦. ಮಲ್ಲಿಕಾರ್ಜುನ ಕಲಮರಹಳ್ಳಿ, ಕಾಡುಗೊಲ್ಲರ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ, ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ, ೨೦೦೭.

೭೧. ಮಲ್ಲಿಕಾರ್ಜುನ ಕಲಮರಹಳ್ಳಿ, ಗೊಲ್ಲರ ಇತಿಹಾಸ ಕಥನ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೧.

೭೨. ಮೀರಾಸಾಬಿಹಳ್ಳಿ ಶಿವಣ್ಣ, ಗೊಲ್ಲಕಡಗ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೧೯೯೯.

೭೩. ಮೀರಾಸಾಬಿಹಳ್ಳಿ ಶಿವಣ್ಣ, ಗಣೆಯ ದನಿ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೦.

೭೪. ಮೀರಾಸಾಬಿಹಳ್ಳಿ ಶಿವಣ್ಣ, ಎತ್ತಪ್ಪ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೨.

೭೫. ಮೀರಾಸಾಬಿಹಳ್ಳಿ ಶಿವಣ್ಣ, ಮ್ಯಾಸಮಂಡಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

೭೬. ಮೀರಾಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲರ ಸಂಸ್ಕೃತಿ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.

೭೭. ಮೀರಾಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲರ ಬುಡಕಟ್ಟು ವೀರರು, ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫,

೭೮. ಮೇತ್ರಿ ಕೆ.ಎಂ., ಕೃಷ್ಣಗೊಲ್ಲರ ಕಥನಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭.

೭೯. ಮೇತ್ರಿ ಕೆ.ಎಂ., ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೮೦. ಮೈತ್ರಿ ಕೆ.ಎಂ.,(ಸಂ), ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭,

೮೧. ಮೊಗಳ್ಳಿ ಗಣೇಶ್, ದೇಶಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೮೨. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತಿಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೮೩. ಮೊಗಳ್ಳಿ ಗಣೇಶ್, ಆದಿಮ, ಸಾರಂಗ ಪ್ರಕಾಶನ, ತಿಪಟೂರು, ೨೦೦೫.

೮೪. ಮೊಗಳ್ಳಿ ಗಣೇಶ., ದಲಿತರು ಮತ್ತು ಜಾಗತೀಕರಣ,ದಲಿತ ಸಂಸ್ಕೃತಿ ಅಧ್ಯಯನ ಮಾಲೆ– ೧೯೯೯

೮೫. ಮಂಜುನಾಥ ಬೇವಿನಕಟ್ಟೆ, ಜನಪದ ನಂಬಿಕೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

೮೬. ಮಂಜುನಾಥ ಬೇವಿನಕಟ್ಟೆ, ಪರಿಶೆ ವಿ/ಎಸ್ ಮಾನ್ಯೇವು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೮೭. ರಂಗಯ್ಯ ಸಾ., 'ಕಾಡುಗೊಲ್ಲರು' ಸ್ಮರಣ ಸಂಚಿಕೆಯಲ್ಲಿ ಲೇಖನ, ತುಮಕೂರು ಜಿಲ್ಲಾ ಪ್ರಥಮ ಅಧಿವೇಶನ, ೧೯೭೨.

೮೮. ರಮೇಶ್ ಸ.ಚಿ., ಶಿಕಾರಿ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೮೯. ರಮೇಶ ಸ.ಚಿ., ಅಲೆಮಾರಿಗಳ ಸ್ಥಿತಿಗತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೯೦. ರಾಮಕೃಷ್ಣ ಆರ್., ಕರ್ನಾಟಕದ ಬುಡಕಟ್ಟುಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೨೦೦೨.

೯೧. ರಾಜನ್ ಎಂ.ಎ., ಕರ್ನಾಟಕದಲ್ಲಿ ಭೂ ಸುಧಾರಣೆ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು. ೧೯೮೭.

೯೨. ಲಕ್ಕಪ್ಪಗೌಡ ಎಚ್.ಜೆ.,(ಸಂ), ಕರ್ನಾಟಕ ಬುಡಕಟ್ಟುಗಳು ಸಂ–೧,೨, ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು, ೧೯೯೯.

೯೩. ಸುಬ್ಬಣ್ಣ ರೈ.ಎ.,(ಸಂ), ದ್ರಾವಿಡ ನಿಘಂಟು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೯೪. ವಿರೂಪಾಕ್ಷಿ ಪೂಜಾರಹಳ್ಳಿ, ಚಿತ್ರದುರ್ಗ ಬುಡಕಟ್ಟು ವೀರರು, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨.

೯೫. ವಿಮಲ ಹಮಲಪ್ಪ, ಕಾಡುಗೊಲ್ಲರ ಆರ್ಥಿಕ ಸ್ಥಿತಿಗತಿಗಳು ಹಂಪಿ ಕನ್ನಡ ವಿಶ್ವದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ, ೨೦೦೯.

೯೬. ಶಂಕರನಾರಾಯಣ ತೀ.ನಂ., ಬುಡಕಟ್ಟು ಅಧ್ಯಯನಗಳ ವೈಜ್ಞಾನಿಕ ನೆಲೆಗಳು (ಲೇಖನಗಳು) ಜಾನಪದ ಗಂಗೋತ್ರಿ, ೧೯೯೦.

೯೭. ಶಂಕರನಾರಾಯಣ ತೀ.ನಂ., ಕಾಡುಗೊಲ್ಲರು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು. ೧೯೮೮.

೯೮. ಶಂಕರನಾರಾಯಣ ತೀ.ನಂ. ಜಾನಪದ ಮೈಲಿಕಲ್ಲುಗಳು, ತೀ.ನಂ.ಶ್ರೀ ಸ್ಮಾರಕ ಪ್ರಕಾಶನ ಮೈಸೂರು, ೧೯೭೦.

೯೯. ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ೧೯೯೨.

೧೦೦. ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ನಡುವೆ (ಲೇಖನ) ಜಾನಪದ ಸಮೀಕ್ಷೆ ವಿಶ್ಲೇಷಣೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೯.

೧೦೧. ಶುಂಪೀಟರ್ ಜೆ.ಎಂ. ದಿ ಥಿಯರಿ ಆಫ್ ಎಕನಾಮಿಕ್ ಡೆವಲಪ್‌ಮೆಂಟ್, ಪ್ರಕಾಶಕರು ಸಂವಹನ, ಮೈಸೂರು, ೨೦೦೦.

೧೦೨. ಶುಮಾಕರ್, ಸಣ್ಣದು ಸುಂದರ,(ಅನು)ಈಶ್ವರ ಸಿಂಪಿ, ಸಪ್ನ ಬುಕ್ ಹೌಸ್ ಬೆಂಗಳೂರು, ೨೦೦೩.

೧೦೩. ಶೇಷಗಿರಿರಾವ್ ಎಲ್.ಎಸ್., ಅರಣ್ಯ, ಸಪ್ನ ಬುಕ್ ಹೌಸ್ ಬೆಂಗಳೂರು, ೨೦೦೬.

೧೦೪. ಸಾಯನಾಥ್ ಪಿ., ಬರ ಅಂದ್ರೆ ಎಲ್ಲರಿಗೂ ಇಷ್ಟ. (ಅನು)ಜಿ.ಎನ್. ಮೋಹನ್, ಅಭಿನವ ಪ್ರಕಾಶನ, ಬೆಂಗಳೂರು, ೨೦೧೨.

೧೦೫. ಹಲ್ಲೋಳ್ಳಿ ಎಂ.ಎಸ್., ಹಳ್ಳಿಯ ಬೃಹತ್ ಯೋಜನೆ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೮೨.

೧೦೬. ಹಿರೇಮಲ್ಲೂರ ಈಶ್ವರನ್, ಭಾರತದ ಹಳ್ಳಿಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೨.

**ಇಂಗ್ಲೀಷ್ ಗ್ರಂಥಗಳು**

1. Aiyer Ananthakrishna, L.K :The Mysore Tribes and Castes.Vol 1 to 05, 1935, Mysore University, Mysore.
2. Ashish Nandy, (Ed), Science hegemony And Violence, Oxford University Press, Delhi,1990.
3. Awadhesh Kumar Sinh, Dynamics of Tribal Economy serial pub, ND 2003.
4. Basant Mehta P C : Perspectives of Tribal Economy, Intellectual Publishing House, New Delhi, 1997.
5. Defoe Daniel : Robinson Crusoe, Text Book, V Std, NCERT Publications.
6. Edgar Thurston, Rangachari K., Caste And Tribes of Southern India,Vol 6, P5, Asian Educational Services, New delhi, 1987.
7. Enthoven R.E. :The Tribes And Caste of Bombay,Vol, Asian Educational Services, New Delhi, 1990.
8. Fortune R.C. The Garden Rituvals Dobu, Tribal Religion and Economic Life, 2002.
9. Gurulingaiah. M., Social Mobility and social Change among Gollas, Unpublished Ph.D Thesis submitted to Mangalore University, 2000.

10. Hiremath R.S. KUD, Life, Living And Language Among Siddies of North kanara, 1994.

11. Karl Marx, Capital : A Critique of Political Econmy,Vol, penguin Classics, London, 1992.

12. Jay Rajasekar Globalization" www.Academy publish .org. Edited - 2015.

13. Jarge Heine, Ramesh Thakur, The Dark Side of Globalisation, The Hindu E-Paper.January 10,2011, Updated October,22nd-2016

14. Karl Marx, Theories of Surplus Value, I, Moscow, 1969.

15. Kiran Kumar Prasad : in search of An Idendity : janajagruti Prakashana, Bengaluru.

16. Longkumar J. Changes and Continuity in Tribal Village, Akanksha House, New Delhi, 2009.

17. Lohia, Rammanohar, Marx Gandhi and Socialism, Navahind Prakashana Hyderbad, 1963.

18. Lohia, Rammanohar, The Caste System, Rammanohar Lohia Samata, SamataVidyalaya Nyas, Hyderbad,1964.

19. Luiz. A A D., The Tribes of Mysore, (Bangalore: G S Viswa and Co, 1963).

20. Mann R.S., Mann K., Tribal Cultures And Change, Mittal Publications, Delhi,1989.

21. Martin Nie, The use of Co-management and protected land use designatations to protect tribal cultural resource and reserved treaty Rights on Federal Land. P.585 to 646, Natural resource Journal,Vol,48, No.3,Pub-University New mexico, School of Law, Summer-2008.

22. Nanjundayya. H.V, The Ethnographic Survey of Mysore ( Bangalore: Government Press, 1908.

23. Pathyjaganath : Tribal Peasantry Dynamics of Development, Inter-India publications New Delhi,1984.

24. Praveen Fernandees, Kadugollas, Mangalore: Unesco Co action Learning Centre, 1994.

25. Marc Bacchetta and Marion Jansen, Making globalization socially sustainable, Published by,WTO.2011. www.wto.org/english/res_e/booksp_e/glob_soc_sus_e.pdf

26. Sibi Zakarias : The Micro level Impact of Tribal Development Programme Among the kadar Tribe of Kerala, Project Report,Centre for Development Studies, Thiruvantapuram, 2003.

27. Subhadra Chana, Tribal Religion And Economic Life, Cosmo publications, 2002.

28. Sukant K. Chaudhary, SM Patnaik : Indian Tribes and Mainstream, Rawat Publications, Jaipur, 2008.

29. Vidyatri C.P. The Tribal Culture of India,Concept publishing Company.

30. Pushpinder Kaur, G.J.C.M.P.,Vol.7(2):41-44, ISSN:2319–7285, March-April, 2018. https://www.longdom.org/articles/impact-of-globalization-on-women.

31. Upadyah C, Status of Scheduled Tribes in India, Anmol Pub,ND, 1999.

32. World bank, indigenous Knowledge, Local pathway To Global Development, knowledge And learning Group, Africa Region, 2004, Net.

33. Syeda Mahnaz Hassan, Understanding Globalization and its Future: An Analysis,January 2014

## ಅನುಬಂಧಗಳು

೧. ಹೆಚ್ಚುವರಿ ಕೋಷ್ಟಕಗಳು

೨. ತಿಳುವಳಿಕೆದಾರರ ವಿವರ

೩. ನಕ್ಷೆಗಳು

೪. ಪ್ರಶ್ನಾವಳಿ ಮಾದರಿ

೫. ಛಾಯಾಚಿತ್ರಗಳು

## ತಿಳುವಳಿಕೆದಾರರ ವಿವರ

| ವಕ್ತೃಗಳ ಹೆಸರು | ವಯಸ್ಸು | ವೃತ್ತಿ | ಸ್ಥಳ | ತಾಲ್ಲೂಕು | ಜಿಲ್ಲೆ |
|---|---|---|---|---|---|
| ಮಂಜಪ್ಪ | ೩೨ | ವ್ಯವಸಾಯ | ಯಾದಲಗಟ್ಟೆ | ಚಳ್ಳಕೆರೆ | ಚಿತ್ರದುರ್ಗ |
| ಲೋಕೇಶ | ೩೦ | ವ್ಯವಸಾಯ | ಮೀರಾಸಾಬಿಹಳ್ಳಿ | ಚಳ್ಳಕೆರೆ | ಚಿತ್ರದುರ್ಗ |
| ಸಣ್ಣಪ್ಪ | ೫೦ | ವ್ಯವಸಾಯ | ಬಂಜಗೆರೆ | ಚಳ್ಳಕೆರೆ | ಚಿತ್ರದುರ್ಗ |
| ಇಂದ್ರಮ್ಮ | ೪೦ | ಗೃಹಿಣಿ | ಚಳ್ಳಕೆರೆ ನಗರ | ಚಳ್ಳಕೆರೆ | ಚಿತ್ರದುರ್ಗ |
| ಮನು ಎ | ೨೧ | ಸರ್ಕಾರಿ ನೌಕರ | ಚಳ್ಳಕೆರೆ ನಗರ | ಚಳ್ಳಕೆರೆ | ಚಿತ್ರದುರ್ಗ |
| ವಿಷ್ಣು | ೧೯ | ವಿದ್ಯಾರ್ಥಿ | ಚಳ್ಳಕೆರೆ ನಗರ | ಚಳ್ಳಕೆರೆ | ಚಿತ್ರದುರ್ಗ |
| ತಿಪ್ಪೇಸ್ವಾಮಿ | ೪೫ | ವ್ಯವಸಾಯ | ಬೋಗನಹಳ್ಳಿ | ಚಳ್ಳಕೆರೆ | ಚಿತ್ರದುರ್ಗ |
| ಕೃಷ್ಣಪ್ಪ | ೫೩ | ವ್ಯವಸಾಯ | ಯಾದಲಗಟ್ಟೆ | ಚಳ್ಳಕೆರೆ | ಚಿತ್ರದುರ್ಗ |
| ಮಹಾಲಿಂಗಪ್ಪ | ೪೨ | ವ್ಯವಹಾರ | ಕಾಟಪ್ಪನಹಟ್ಟಿ | ಚಳ್ಳಕೆರೆ | ಚಿತ್ರದುರ್ಗ |
| ಕರಿಯಪ್ಪ | ೫೨ | ವ್ಯವಸಾಯ | ಪಿಲ್ಲಹಳ್ಳಿ | ಚಳ್ಳಕೆರೆ | ಚಿತ್ರದುರ್ಗ |
| ತಿಪ್ಪೇಸ್ವಾಮಿ | ೨೭ | ನಿರುದ್ಯೋಗಿ | ಚಳ್ಳಕೆರೆ ನಗರ | ಚಳ್ಳಕೆರೆ | ಚಿತ್ರದುರ್ಗ |
| ಜಯಪ್ಪ | ೩೨ | ವ್ಯವಸಾಯ | ದೊಡ್ಡೇರಿ | ಚಳ್ಳಕೆರೆ | ಚಿತ್ರದುರ್ಗ |

| | | | | | |
|---|---|---|---|---|---|
| ಅಜ್ಜಯ್ಯ ಎ. | ೫೨ | ಸಹಾಯಕ ಪ್ರಾಧ್ಯಾಪಕ | ಕಾಟಪ್ಪನಹಟ್ಟಿ | ಚಳ್ಳಕೆರೆ | ಚಿತ್ರದುರ್ಗ |
| ಥವಗಪ್ಪ | ೫೦ | ವ್ಯವಸಾಯ | ಜಂಪಣ್ಣನಹಟ್ಟಿ | ಚಿತ್ರದುರ್ಗ | ಚಿತ್ರದುರ್ಗ |
| ಚಂದ್ರಪ್ಪ | ೪೫ | ವ್ಯಾಪಾರ | ಭೀಮಸಮುದ್ರ | ಚಿತ್ರದುರ್ಗ | ಚಿತ್ರದುರ್ಗ |
| ಶ್ವೇತಾ | ೨೬ | ವಿದ್ಯಾರ್ಥಿ | ಎಮ್ಮೆತಿರುಮಲಾಪುರ | ಚಿತ್ರದುರ್ಗ | ಚಿತ್ರದುರ್ಗ |
| ನಾಗರಾಜಪ್ಪ | ೪೮ | ವ್ಯವಸಾಯ | ಗೂಳಯ್ಯನಹಟ್ಟಿ | ಚಿತ್ರದುರ್ಗ | ಚಿತ್ರದುರ್ಗ |
| ಜಯಪ್ಪ | ೫೬ | ವ್ಯವಸಾಯ | ಟಗರನಹಟ್ಟಿ | ಚಿತ್ರದುರ್ಗ | ಚಿತ್ರದುರ್ಗ |
| ವಿಶಾಲಾಕ್ಷಿ | ೨೫ | ಗೃಹಿಣಿ | ಆಯತೋಳು | ಚಿತ್ರದುರ್ಗ | ಚಿತ್ರದುರ್ಗ |
| ಅಶ್ವಿನಿ | ೩೧ | ಗೃಹಿಣಿ | ಜಾನುಕೊಂಡ | ಚಿತ್ರದುರ್ಗ | ಚಿತ್ರದುರ್ಗ |
| ಸೋಮಶೇಖರ | ೪೦ | ವ್ಯವಸಾಯ | ಯಲ್ಲದಕೆರೆ | ಚಿತ್ರದುರ್ಗ | ಚಿತ್ರದುರ್ಗ |
| ಕಾಂತಪ್ಪ | ೪೮ | ವ್ಯವಸಾಯ | ಚಿತ್ರದೇವರಹಟ್ಟಿ | ಹಿರಿಯೂರು | ಚಿತ್ರದುರ್ಗ |
| ತಿಪ್ಪೇಸ್ವಾಮಿ | ೩೬ | ಕುರಿ ವ್ಯಾಪಾರ | ಹಿರಿಯೂರು | ಹಿರಿಯೂರು | ಚಿತ್ರದುರ್ಗ |
| ಶಿವಲೀಲಾ ಎಸ್. | ೪೦ | ಸರ್ಕಾರಿ ನೌಕರಿ | ಹಿರಿಯೂರು | ಹಿರಿಯೂರು | ಚಿತ್ರದುರ್ಗ |
| ಪಾಂಡಪ್ಪ | ೬೦ | ವ್ಯವಸಾಯ | ಟಿ.ಡಿ.ಹಟ್ಟಿ | ಹಿರಿಯೂರು | ಚಿತ್ರದುರ್ಗ |
| ಚಿದಾನಂದಪ್ಪ | ೫೦ | ವ್ಯವಸಾಯ | ಕರಿಯಣ್ಣನಹಟ್ಟಿ | ಹಿರಿಯೂರು | ಚಿತ್ರದುರ್ಗ |
| ಮಾರಣ್ಣ | ೬೦ | ವ್ಯವಸಾಯ | ಕರಿಓಬನಹಳ್ಳಿ | ಹಿರಿಯೂರು | ಚಿತ್ರದುರ್ಗ |

| | | | | | |
|---|---|---|---|---|---|
| ಜಂಗ್ಲಿ ಈರಪ್ಪ | ೮೦ | ವ್ಯವಸಾಯ | ಶೀಗೇಹಟ್ಟಿ | ಹಿರಿಯೂರು | ಚಿತ್ರದುರ್ಗ |
| ಕೃಷ್ಣಮೂರ್ತಿ | ೫೮ | ಕುರಿ ಕಾಯುವುದು | ಕೆ.ಕೆ.ಹಟ್ಟಿ | ಹಿರಿಯೂರು | ಚಿತ್ರದುರ್ಗ |
| ಚಿತ್ತಪ್ಪ | ೫೫ | ಕುರಿ ಕಾಯುವುದು | ಶಿಡ್ಲಯ್ಯನಹಟ್ಟಿ | ಹಿರಿಯೂರು | ಚಿತ್ರದುರ್ಗ |
| ಪಾತಲಿಂಗಪ್ಪ | ೬೦ | ಕುರಿ ಕಾಯುವುದು | ಬೀರೇನಹಳ್ಳಿ | ಹಿರಿಯೂರು | ಚಿತ್ರದುರ್ಗ |
| ನಾಗೇಂದ್ರಪ್ಪ | ೫೦ | ವ್ಯವಸಾಯ | ಹಿರಿಯೂರು | ಹಿರಿಯೂರು | ಚಿತ್ರದುರ್ಗ |
| ನಿಜಲಿಂಗಪ್ಪ | ೫೦ | ವ್ಯವಸಾಯ | ಗೌನಹಳ್ಳಿ | ಹಿರಿಯೂರು | ಚಿತ್ರದುರ್ಗ |
| ಕಾಟಪ್ಪ | ೫೫ | ವ್ಯವಸಾಯ | ಬಿ.ಕಾಟನಹಳ್ಳಿ | ಹಿರಿಯೂರು | ಚಿತ್ರದುರ್ಗ |
| ದೊಡ್ಡಕರಿಯಮ್ಮ | ೪೩ | ಗೃಹಿಣಿ | ಕಾಟಪ್ಪನಹಟ್ಟಿ | ಹಿರಿಯೂರು | ಚಿತ್ರದುರ್ಗ |
| ಶಾಂತಕುಮಾರಿ.ಡಿ | ೪೭ | ಗೃಹಿಣಿ | ಕಕ್ಕಯ್ಯನಹಟ್ಟಿ | ಹಿರಿಯೂರು | ಚಿತ್ರದುರ್ಗ |
| ಶ್ರೀನಿವಾಸ | ೪೮ | ವ್ಯವಸಾಯ | ಹೂವಿಹೊಳೆ | ಹಿರಿಯೂರು | ಚಿತ್ರದುರ್ಗ |
| ಪ್ರೊ.ರಾಜಶೇಖರಯ್ಯ | ೬೨ | ನಿ.ಪ್ರಾಧ್ಯಾಪಕರು | ಬೆಳಗೆರೆ | ಹಿರಿಯೂರು | ಚಿತ್ರದುರ್ಗ |
| ಪ್ರಕಾಶ್ ಜಿ. | ೪೯ | ಶಿಕ್ಷಕರು | ಉಪ್ಪಾರಹಟ್ಟಿ | ಹಿರಿಯೂರು | ಚಿತ್ರದುರ್ಗ |
| ಪ್ರಕಾಶ್ ಜಿ.ಎಸ್. | ೫೨ | ಮುಖ್ಯೋಪಾಧ್ಯಾಯರು | ಗುತ್ತೀಕಟ್ಟೆಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ಶಕುಂತಲಾ ದೇವಿ ಜಿ. | ೫೧ | ಉಪನ್ಯಾಸಕರು | ಹೊಸದುರ್ಗ | ಹೊಸದುರ್ಗ | ಚಿತ್ರದುರ್ಗ |
| ರೂಪಾ ಜಿ.ಎಸ್. | ೩೪ | ಗೃಹಿಣಿ | ಹೊಸದುರ್ಗ | ಹೊಸದುರ್ಗ | ಚಿತ್ರದುರ್ಗ |

| ಕವಿತಾ.ಎಂ.ಕೆ | ೪೭ | ಶಿಕ್ಷಕಿ | ಮೆಂಗಸಂದ್ರ | ಹೊಸದುರ್ಗ | ಚಿತ್ರದುರ್ಗ |
|---|---|---|---|---|---|
| ಕುಮಾರಸ್ವಾಮಿ ಎಂ.ಡಿ. | ೪೯ | ಶಿಕ್ಷಕ | ಮೆಂಗಸಂದ್ರ | ಹೊಸದುರ್ಗ | ಚಿತ್ರದುರ್ಗ |
| ಕರಿಯಪ್ಪ ಜಿ.ಎಸ್. | ೬೧ | ಶಿಕ್ಷಕ | ಗುತ್ತೀಕಟ್ಟೆಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ಪುಷ್ಪಾ.ಎಸ್.ಆರ್ | ೩೫ | ಪೊಲೀಸ್ | ಸಣ್ಣಯ್ಯನಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ಮಹಾಲಿಂಗಪ್ಪ | ೬೫ | ಮಾಜಿ ಪ್ರಧಾನರು | ಗುತ್ತೀಕಟ್ಟೆಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ಬಸವಂತಪ್ಪ | ೬೦ | ವ್ಯವಸಾಯ | ಗುತ್ತೀಕಟ್ಟೆಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ವಿವೇಕಾನಂದ ಜಿ.ಎಸ್. | ೪೮ | ವ್ಯವಸಾಯ | ಗುತ್ತೀಕಟ್ಟೆಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ಚಂದ್ರಮ್ಮ ಜಿ.ಬಿ. | ೪೬ | ಗೃಹಿಣಿ | ಗುತ್ತೀಕಟ್ಟೆಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ಮಹಾಲಿಂಗಪ್ಪ(ಮೀಸೆ) | ೫೯ | ಮಾಜಿ.ಜಿ.ಪಂ.ಅಧ್ಯಕ್ಷರು | ಚಿತ್ರದುರ್ಗ | ಚಿತ್ರದುರ್ಗ | ಚಿತ್ರದುರ್ಗ |
| ಪ್ರೊ.ಪಾಂಡುರಂಗಪ್ಪ | ೬೩ | ನಿ.ಪ್ರಾಂಶುಪಾಲರು | ಆವಿನಹಟ್ಟಿ | ಹೊಳಲ್ಕೆರೆ | ಚಿತ್ರದುರ್ಗ |
| ರಾಜಶೇಖರ | ೬೧ | ನಿ.ಪ್ರಾಂಶುಪಾಲರು | ಆವಿನಹಟ್ಟಿ | ಹೊಳಲ್ಕೆರೆ | ಚಿತ್ರದುರ್ಗ |
| ಮೋಹನ್ ನಾಗರಾಜ್ | ೪೦ | ಮಾಜಿ.ತಾ.ಪಂ.ಅಧ್ಯಕ್ಷರು | ಆವಿನಹಟ್ಟಿ | ಹೊಳಲ್ಕೆರೆ | ಚಿತ್ರದುರ್ಗ |
| ಶಿವಕುಮಾರ್ | ೫೦ | ಜಿ.ಪಂ.ಸದಸ್ಯರು. | ತೇಕಲವಟ್ಟಿ | ಹೊಳಲ್ಕೆರೆ | ಚಿತ್ರದುರ್ಗ |
| ಪ್ರೇಮ ರವೀಂದ್ರ | ೩೫ | ತಾ.ಪಂ ಅಧ್ಯಕ್ಷರು | ಬೇವಿನಹಳ್ಳಿ | ಹೊಸದುರ್ಗ | ಚಿತ್ರದುರ್ಗ |
| ನೇತ್ರಾವತಿ ದೇವರಾಜ್ | ೩೫ | ತಾ.ಪಂ.ಉಪಅಧ್ಯಕ್ಷರು | ಮೆಂಗಸಂದ್ರ | ಹೊಸದುರ್ಗ | ಚಿತ್ರದುರ್ಗ |

| | | | | | |
|---|---|---|---|---|---|
| ಪ್ರಾಣೇಶ್ ಜಿ.ಆರ್ | ೫೬ | ಗ್ರಾ.ಪಂ.ಅಧ್ಯಕ್ಷರು | ಜಾನುಕೊಂಡ | ಚಿತ್ರದುರ್ಗ | ಚಿತ್ರದುರ್ಗ |
| ಚಿಕ್ಕಪ್ಪ ಜಿ.ಪಿ. | ೪೯ | ಕೆ.ಇ.ಬಿ ನೌಕರ | ಹೊಸದುರ್ಗ | ಹೊಸದುರ್ಗ | ಚಿತ್ರದುರ್ಗ |
| ಆಶಾ ಜಿ.ಎಸ್. | ೪೬ | ಗೃಹಿಣಿ | ಹಿರಿಯೂರು | ಹಿರಿಯೂರು | ಚಿತ್ರದುರ್ಗ |
| ಶಿವಲಿಂಗಪ್ಪ | ೩೫ | ಉಪನ್ಯಾಸಕರು | ಚಿತ್ರಹಳ್ಳಿ | ಹೊಳಲ್ಕೆರೆ | ಚಿತ್ರದುರ್ಗ |
| ಕೆ.ಸಿ.ರಮೇಶ್ | ೫೮ | ಪ.ಪಂ.ಸದಸ್ಯರು | ಹೊಳಲ್ಕೆರೆ | ಹೊಳಲ್ಕೆರೆ | ಚಿತ್ರದುರ್ಗ |
| ಕಾಟಪ್ಪ | ೫೯ | ಸರ್ಕಾರಿ ನೌಕರ | ಹೊಳಲ್ಕೆರೆ | ಹೊಳಲ್ಕೆರೆ | ಚಿತ್ರದುರ್ಗ |
| ರಾಮದಾಸ್ | ೬೧ | ನಿ.ಪ್ರಾಧ್ಯಾಪಕರು | ಮೊಳಕಾಲ್ಮೂರು | ಮೊಳಕಾಲ್ಮೂರು | ಚಿತ್ರದುರ್ಗ |
| ಗೋವಿಂದಪ್ಪ | ೫೦ | ಮೆಡಿಕಲ್ ಸ್ಟೋರ್ | ಮೊಳಕಾಲ್ಮೂರು | ಮೊಳಕಾಲ್ಮೂರು | ಚಿತ್ರದುರ್ಗ |
| ಶಿವಮೂರ್ತಿ | ೫೫ | ವ್ಯವಹಾರ | ಬೊಮ್ಮಲಿಂಗನಹಳ್ಳಿ | ಮೊಳಕಾಲ್ಮೂರು | ಚಿತ್ರದುರ್ಗ |
| ಪಾಂಡುರಂಗ | ೫೪ | ವ್ಯವಸಾಯ | ಗೌರಸಮುದ್ರ | ಮೊಳಕಾಲ್ಮೂರು | ಚಿತ್ರದುರ್ಗ |
| ಬಸವರಾಜು | ೬೦ | ವ್ಯವಸಾಯ | ರಾಯಾಪುರ | ಮೊಳಕಾಲ್ಮೂರು | ಚಿತ್ರದುರ್ಗ |
| ದೊಡ್ಡರಾಮಣ್ಣ | ೭೦ | ವ್ಯವಸಾಯ | ರಾಯಪುರ | ಮೊಳಕಾಲ್ಮೂರು | ಚಿತ್ರದುರ್ಗ |
| ಮೂಲಿಮನಿ ತಿಮ್ಮಣ್ಣ | ೬೫ | ವ್ಯವಸಾಯ | ದಾಸರಹಟ್ಟಿ | ಮೊಳಕಾಲ್ಮೂರು | ಚಿತ್ರದುರ್ಗ |
| ಬಸಣ್ಣ | ೫೫ | ವ್ಯವಸಾಯ | ಕುರಹಾಕಲಹಳ್ಳಿ | ಮೊಳಕಾಲ್ಮೂರು | ಚಿತ್ರದುರ್ಗ |
| ರಂಗಸ್ವಾಮಿ ಜಿ.ಆರ್. | ೫೦ | ವ್ಯವಸಾಯ | ಗಂಜಿಗಟ್ಟೆ | ಚಿತ್ರದುರ್ಗ | ಚಿತ್ರದುರ್ಗ |

| | | | | | |
|---|---|---|---|---|---|
| ಮಧು ಜಿ.ವಿ. | ೩೦ | ವ್ಯವಹಾರ | ಗಂಜಿಗಟ್ಟೆ | ಚಿತ್ರದುರ್ಗ | ಚಿತ್ರದುರ್ಗ |
| ಪಾಂಡುರಂಗ ಜಿ.ವಿ. | ೩೫ | ಕೋರ್ಟ ನೌಕರ | ಗಂಜಿಗಟ್ಟೆ | ಚಿತ್ರದುರ್ಗ | ಚಿತ್ರದುರ್ಗ |
| ಪುಟ್ಟರಂಗಮ್ಮ ಜಿ.ವಿ. | ೪೮ | ಶಿಕ್ಷಕಿ | ಗಂಜಿಗಟ್ಟೆ | ಚಿತ್ರದುರ್ಗ | ಚಿತ್ರದುರ್ಗ |
| ಪೂಜಾರಿ ಚಂದ್ರಣ್ಣ | ೫೦ | ಪೂಜಾರಿ | ಹಾಯ್ಕಲ್‌ಗೊಲ್ಲರಹಟ್ಟಿ | ಚಿತ್ರದುರ್ಗ | ಚಿತ್ರದುರ್ಗ |
| ಜಗಪ್ಪ | ೩೫ | ಕುರಿಗಾರರು | ಚನ್ನಮ್ಮನಾಗತಿಹಳ್ಳಿ | ಚಳ್ಳಕೆರೆ | ಚಿತ್ರದುರ್ಗ |
| ಲಕ್ಷ್ಮೀದೇವಿ | ೫೨ | ಕೂಲಿ | ಹಾಯ್ಕಲ್‌ಗೊಲ್ಲರಹಟ್ಟಿ | ಚಿತ್ರದುರ್ಗ | ಚಿತ್ರದುರ್ಗ |
| ಪಿಲ್ಲಯ್ಯ(ಗೌಡ) | ೫೮ | ಗೌಡ | ಯರಬಳ್ಳಿಗೊಲ್ಲರಹಟ್ಟಿ | ಹಿರಿಯೂರು | ಚಿತ್ರದುರ್ಗ |
| ಗೌಡರ ಕಾಟಪ್ಪ | ೭೪ | ಗೌಡ | ಮರಡಿಹಳ್ಳಿ | ಹಿಯೂರು | ಚಿತ್ರದುರ್ಗ |
| ಪೂಜಾರಿ ತಿಪ್ಪೇಸ್ವಾಮಿ | ೭೫ | ಪೂಜಾರಿ | ಪಗಡಲಬಂಡೆಗೊಲ್ಲರಹಟ್ಟಿ | ಹಿರಿಯೂರು | ಚಿತ್ರದುರ್ಗ |
| ದಾಸಯ್ಯ | ೬೦ | ಕಂಬದ ಪೂಜಾರಿ | ಹಾಯ್ಕಲ್‌ಗೊಲ್ಲರಹಟ್ಟಿ | ಚಿತ್ರದುರ್ಗ | ಚಿತ್ರದುರ್ಗ |
| ಜಿ.ಪಿ.ರಮೇಶ್ | ೫೦ | ವ್ಯವಸಾಯ | ಗುತ್ತೀಕಟ್ಟೆಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ಪಾಂಡುರಂಗ | ೪೦ | ವ್ಯವಸಾಯ | ಗುತ್ತೀಕಟ್ಟೆಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ರಾಘವೇಂದ್ರ | ೪೦ | ವ್ಯವಸಾಯ | ಮೆಂಗಸಂದ್ರ | ಹೊಸದುರ್ಗ | ಚಿತ್ರದುರ್ಗ |
| ಸುರೇಶ | ೪೦ | ಗುತ್ತಿಗೆದಾರ | ಮೆಂಗಸಂದ್ರ | ಹೊಸದುರ್ಗ | ಚಿತ್ರದುರ್ಗ |
| ಶಿವಣ್ಣ | ೫೦ | ಕುರಿವ್ಯಾಪಾರ | ಕುಂದೂರುಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |

| | | | | | |
|---|---|---|---|---|---|
| ರಮೇಶ್ | ೫೨ | ಎತ್ತಿನವ್ಯಾಪಾರ | ಗುತ್ತೀಕಟ್ಟೆಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ತಿಮ್ಮಣ್ಣ | ೫೦ | ಶಾಮಿಯಾನ | ಮಸಣೀಹಳ್ಳಿಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |
| ಅಣ್ಣಪ್ಪ | ೫೩ | ಸಿಮೆಂಟ್‌ವ್ಯಾಪಾರಿ | ಹೊಳಲ್ಕೆರೆ | ಹೊಳಲ್ಕೆರೆ | ಚಿತ್ರದುರ್ಗ |
| ಡಾ.ರಂಜಿತಾ ಬೆಳಗೆರೆ | ೨೫ | ವೈದ್ಯೆ | ಬೆಳಗೆರೆ | ಹಿರಿಯೂರು | ಚಿತ್ರದುರ್ಗ |
| ಪೃಧ್ವಿರಾಣಿ ಬೆಳಗೆರೆ | ೨೨ | ವೈದ್ಯ ವಿದ್ಯಾರ್ಥಿನಿ | ಬೆಳಗೆರೆ | ಹಿರಿಯೂರು | ಚಿತ್ರದುರ್ಗ |
| ಸುಶ್ಮಿತಾ ಜಿ.ಪಿ. | ೨೨ | ವೈದ್ಯ ವಿದ್ಯಾರ್ಥಿನಿ | ಹೊಸದುರ್ಗ | ಹೊಸದುರ್ಗ | ಚಿತ್ರದುರ್ಗ |
| ಮೇಘನಾ ಜಿ.ಪಿ. | ೧೯ | ವೈದ್ಯ ವಿದ್ಯಾರ್ಥಿನಿ | ಹಿರಿಯೂರು | ಹಿರಿಯೂರು | ಚಿತ್ರದುರ್ಗ |
| ಲಕ್ಷ್ಮೀನಾರಾಯಣ | ೫೯ | ಪ್ರಾಂಶುಪಾಲರು | ಬೀರೇನಹಳ್ಳಿ | ಹಿರಿಯೂರು | ಚಿತ್ರದುರ್ಗ |
| ವೆಂಕಟೇಶ್ | ೫೯ | ಪ್ರಾಂಶುಪಾಲರು | ಹೊ.ಗೊಲ್ಲರಹಟ್ಟಿ | ಹೊಸದುರ್ಗ | ಚಿತ್ರದುರ್ಗ |

# ಹೆಚ್ಚುವರಿ ಕೋಷ್ಟಕಗಳು

ಅಂಕಿ ಅಂಶಗಳು ೧. ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲೂಕುವಾರು ಕುಟುಂಬ ಹಾಗೂ ಲಿಂಗವಾರು ಜನಸಂಖ್ಯೆ ಪ್ರಮಾಣ

ಕೋಷ್ಟಕ ೧

| ಕ್ರ.ಸಂ. | ತಾಲೂಕು | ಕುಟುಂಬಗಳು | | | ಜನಸಂಖ್ಯೆ | ಲಿಂಗಾನುಪಾತ | ಕುಟುಂಬ ಗಾತ್ರ |
|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | | | |
| ೧. | ಚಳ್ಳಕೆರೆ | ೨೯೫ | ೬೪೦ | ೫೬೨ | ೧೨೦೨ | ೮೭೮.೧೨೫ | ೪.೦೭೪೬ |
| ೨. | ಚಿತ್ರದುರ್ಗ | ೧೯೯ | ೪೬೩ | ೪೧೧ | ೮೭೪ | ೮೮೭.೬೮೯ | ೪.೩೯೨ |
| ೩. | ಮೊಳಕಾಲ್ಮೂರು | ೮೨ | ೧೯೦ | ೧೭೯ | ೩೬೯ | ೯೪೨.೧೦೫೩ | ೪.೫ |
| ೪. | ಹಿರಿಯೂರು | ೪೨೮ | ೧೦೨೪ | ೮೯೫ | ೧೯೧೯ | ೮೭೪.೦೨೩೪ | ೪.೪೮೩೬ |
| ೫. | ಹೊಸದುರ್ಗ | ೧೫೮ | ೩೫೩ | ೩೦೮ | ೬೬೧ | ೮೭೨.೫೨೧೨ | ೪.೧೮೩೫ |
| ೬. | ಹೊಳಲ್ಕೆರೆ | ೨೨೯ | ೫೨೧ | ೪೨೯ | ೯೫೦ | ೮೨೩.೪೧೬೫ | ೪.೧೪೮೫ |
| | ಒಟ್ಟು | ೧೩೯೧ | ೩೧೯೧ | ೨೭೮೪ | ೫೯೭೫ | ೪.೨೯೫೪೭೧ | ೮೭೨.೪೫ |

ಅಂಕಿ ಅಂಶಗಳು  ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲ ಸಮುದಾಯದ ತಾಲೂಕುವಾರು ಹಾಗೂ ಕುಟುಂಬವಾರು ಮನೆಗಳ ಪ್ರಮಾಣ

ಕೋಷ್ಟಕ ೨

| ಕ್ರ.ಸಂ. | ತಾಲೂಕುಗಳು | ಕುಟುಂಬಗಳು | ಮನೆಗಳ ಮಾದರಿ | | | | | | |
|---|---|---|---|---|---|---|---|---|---|
| | | | ಗುಡಿಸಲು | ಟಿನ್ | ಮಾಳಿಗೆ | ಆರ್‌ಸಿಸಿ | ಹೆಂಚಿನ | ಜನತಾ | ಬಾಡಿಗೆ |
| ೧. | ಚಳ್ಳಕೆರೆ | ೨೯೫ | ೪೩ | ೯ | ೧೫೬ | ೨೮ | ೫೨ | ೨ | ೫ |
| ೨. | ಚಿತ್ರದುರ್ಗ | ೧೯೯ | ೩೮ | ೧೧ | ೬೫ | ೨೦ | ೪೪ | ೨೧ | |
| ೩. | ಮೊಳಕಾಲ್ಮೂರು | ೮೨ | ೬ | ೧ | ೪೮ | ೧೨ | ೧೨ | ೧ | ೨ |
| ೪. | ಹಿರಿಯೂರು | ೪೨೮ | ೩೮ | ೧೭ | ೯೯ | ೫೩ | ೨೧೫ | ೩ | ೩ |
| ೫. | ಹೊಸದುರ್ಗ | ೧೫೮ | ೩೯ | ೧ | ೨೯ | ೩೩ | ೪೭ | ೯ | |
| ೬. | ಹೊಳಲ್ಕೆರೆ | ೨೨೯ | ೧೪ | ೦ | ೧ | ೧೮ | ೧೯೩ | ೧ | ೨ |
| | ಒಟ್ಟು | ೧೩೯೧ | ೧೭೮ | ೩೯ | ೩೯೮ | ೧೬೪ | ೫೬೩ | ೩೭ | ೧೨ |

ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ ಇಲ್ಲಿ ಅಮೃತ್ ಮಹಲ್ ಕಾವಲ್ ನ ಹುಲ್ಲುಗಾವಲನ್ನು ಈ ಕೆಳಕಂಡ ಕಾರಣಗಳಿಗೋಸ್ಕರ ಸರ್ಕಾರ ವಶಪಡಿಸಿಕೊಂಡಿರುವುದು. (ಈ ಕೆಳಗಿನ ಲಿಂಕ್ ಬಳಸಿ ಅಂತರ್‌ಜಾಲ ವಿಕೀಪೀಡಿಯಾದಿಂದ ಈ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ)

https://www.deccanchronicle.com/nation/current-affairs/040518/grasslands-lost-villagers-fume.html

http://www.iisc.ernet.in

http://www.isro.org/

http://www.drdo.gov.in

http://www.barc.gov.in

DRDO= Defence Research And Development Organization

IISc= Indian Institute Of Science

BARC= Bhabha Atomic Research Centre

ISRO= Indian Space Research Organization

| Institution | Area | Facilities |
|---|---|---|
| IISc | 1,500 acres | Laboratories,specialized research centers, hostels. |
| ISRO | 473 acres | Communication and remote sensing facilities. |
| DRDO | 4,290 acres | Extensive aeronautical testing range. |
| BARC | 1,810 acres | Material enrichment facility. |

# ಛಾಯಾ ಚಿತ್ರಗಳು



ಕಾಡುಗೊಲ್ಲರ ಹಟ್ಟಿಯ ದೃಶ್ಯ



ಕಾಡುಗೊಲ್ಲರ ಮನೆ

ಕಾಡುಗೊಲ್ಲರ ಹೆಣ್ಣು ಮಕ್ಕಳು ಋತುಮತಿಯಾದ ಸಂದರ್ಭದಲ್ಲಿ ಗುಡಿಸಲಿನಲ್ಲಿರುವುದು



ಕಾಡುಗೊಲ್ಲರಲ್ಲಿ ಹೆರಿಗೆಯ ಸಂದರ್ಭದಲ್ಲಿ ನವಜಾತ ಶಿಶುವಿನೊಂದಿಗೆ ತಾಯಿ



ತಿಂಗಳಿನ ರಜೆಯಲ್ಲಿ ಹಟ್ಟಿಯಿಂದ ಹೊರಗೆ ಕುಳಿತಿರುವುದು



ತಮ್ಮ ಕುರಿಹಟ್ಟಿಯಲ್ಲಿ ಕುರಿ ಮತ್ತು ಮೇಕೆಗಳ ಕಾವಲು



ಕುರಿ ಮಂದೆ ಬಿಡುವಾಗ ಕತ್ತೆಗಳೊಂದಿಗೆ ತಮ್ಮ ಸಾಮಾನು ಸರಂಜಾಮುಗಳನ್ನು ಸಾಗಿಸುತ್ತಿರುವುದು



ಕಾಡುಗೊಲ್ಲ ಹೆಣ್ಣು ಮಗು ತಮ್ಮ ಮನೆಯ ಮುಂದೆ ಪಾತ್ರೆತೊಳೆಯುತ್ತಿರುವುದು



ಕಾಡುಗೊಲ್ಲ ಮಹಿಳೆ ತಮ್ಮ ಗುಡಿಸಲಿನಲ್ಲಿ ಅಡುಗೆ ತಯಾರಿಯಲ್ಲಿ



ಗೊಲ್ಲ ಕಡಗದೊಂದಿಗೆ ಕಾಡುಗೊಲ್ಲ ಮಹಿಳೆಯರು



ಕಾಡುಗೊಲ್ಲರು ಗಣೆ ಊದುತ್ತಿರುವುದು



ಹಿಂದಿನ ದೇವಾಸ್ಥಾನ (ಗುಬ್ಬಗಳು)



ಕಾಡುಗೊಲ್ಲರು ತಮ್ಮ ದೇವರರುಗಳನ್ನು ಹೊಳೆಗೆ ಕರೆದೊಯ್ಯುತ್ತಿರುವುದು



ಜುಂಜಪ್ಪನ ಜಾತ್ರೆಯಲ್ಲಿ ಕಾಡುಗೊಲ್ಲರು ತಮ್ಮ ಕುರಿಗಳನ್ನು ಸುತ್ತುಸುತ್ತಿರುವುದು.



ಚಳ್ಳಕೆರೆಯಲ್ಲಿ ಸರ್ಕಾರ ವಶಪಡಿಸಿಕೊಂಡಿರುವ ಅಮೃತ್ ಮಹಲ್ ಕಾವಲು



**https://www.deccanchronicle.com/nation/current-affairs/040518/grasslands-lost- villagers-fume.html** ( ಈ ಲಿಂಕ್ ಬಳಸಿ ಅಂತರ್‌ಜಾಲದಿಂದ ಫೋಟೋಗಳನ್ನು ಪಡೆಯಲಾಗಿದೆ)

# Urkund Report

## Document Information

Analyzed document KUH-DTS-Ashwath Yadav G H.pdf (D79869437)

Submitted 9/25/2020 8:48:00 AM

Submitted by Shankaragouda S G

Submitter email shankargoudas.mailbox@gmail.com

Similarity 0%

Analysis address shankargoudas.mailbox.kanuni@analysis.urkund.com

## Sources included in the report

